ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ

# ಅಣುಭಾಷ್ಯ

ಭಾಗ–೧ : ಶ್ಲೋಕತಾತ್ಪರ್ಯಚಂದ್ರಿಕಾ

ಭಾಗ–೨ : ಅಧಿಕರಣತಾತ್ಪರ್ಯಚಂದ್ರಿಕಾ

ಪ್ರೊ|| ಎಸ್. ವೆಂಕಟೇಶ ಮೂರ್ತಿ

ಪ್ರಕಾಶಕರು :

ಪವನಜ ಪ್ರಕಾಶನ

1625, 5ನೇ 'ಬಿ' ಕ್ರಾಸ್, 17ನೇ ಮುಖ್ಯರಸ್ತೆ

ಎರಡನೆಯ ಬ್ಲಾಕ್, ಬನಶಂಕರಿ 1ನೇ ಸ್ಟೇಜ್

ಬೆಂಗಳೂರು–560 050

॥ ಶ್ರೀ ಗುರುಭ್ಯೋ ನಮಃ ಹರಿಃ ಓಂ ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ

# ಅಣುಭಾಷ್ಯ

## ಭಾಗ-೧ : ಶ್ಲೋಕತಾತ್ಪರ್ಯಚಂದ್ರಿಕಾ
## ಭಾಗ-೨ : ಅಧಿಕರಣತಾತ್ಪರ್ಯಚಂದ್ರಿಕಾ

**ಪ್ರೊ॥ ಎಸ್. ವೆಂಕಟೇಶ ಮೂರ್ತಿ**

ಪ್ರಕಾಶಕರು

**ಪವನಜ ಪ್ರಕಾಶನ**

1625, 5ನೇ 'ಬಿ' ಕ್ರಾಸ್, 17ನೇ ಮುಖ್ಯರಸ್ತೆ

ಎರಡನೆಯ ಬ್ಲಾಕ್, ಬನಶಂಕರಿ 1ನೇ ಸ್ಟೇಜ್, ಬೆಂಗಳೂರು-560 050

☎ : 30902184

**ಶ್ರೀ ಮಧ್ವಾಚಾರ್ಯ ವಿರಚಿತ ಅಣುಭಾಷ್ಯ**
**ಕನ್ನಡದಲ್ಲಿ ವಿವರಣೆ : ಪ್ರೊ|| ಎಸ್. ವೆಂಕಟೇಶಮೂರ್ತಿ**

ಪುಟಗಳು : 218 + xiv

ಪ್ರಥಮ ಮುದ್ರಣ : 2004

ಬೆಲೆ : **ರೂ. 50/-**

ಅಕ್ಷರ ಜೋಡಣೆ :
**ಅತ್ರಿ ಗ್ರಾಫಿಕ್ಸ್**
ಬೆಂಗಳೂರು-50
☎ 26799072

ಮುದ್ರಣ :
**ಪರಿಮಳ ಮುದ್ರಣಾಲಯ**
ನಂ. 142/29, 10ನೇ ಮುಖ್ಯರಸ್ತೆ
ಶ್ರೀನಗರ, ಬೆಂಗಳೂರು-560 050
ಫೋನ್ : 26525516, 26529322

# ಪ್ರಸ್ತಾವನೆ

'ಬ್ರಹ್ಮಸೂತ್ರಗಳು' ಎಂದು ಪ್ರಸಿದ್ಧವಾದ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ರಚಿಸಿದವರು ಸಾಕ್ಷಾತ್ ಭಗವದವತಾರ ಸ್ವರೂಪರಾದ ಶ್ರೀ ವೇದವ್ಯಾಸರು ಅಥವಾ ಬಾದರಾಯಣರು. ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಸತ್ಯವತೀ ಪರಾಶರರನ್ನು ನಿಮಿತ್ತಮಾಡಿಕೊಂಡು ವೇದವ್ಯಾಸ ರೂಪದಿಂದ ಅವತಾರ ಮಾಡಿದನು. ಆ ಕಾಲವು ವೇದವ್ಯಾಸರ ಅವತಾರಕ್ಕೆ ಅತ್ಯಂತ ಸೂಕ್ತವಾಗಿತ್ತು. ಶ್ರೀಮನ್ನಾರಾಯಣನಿಂದಲೇ ಪ್ರವರ್ತಿತವಾದ ವೇದಾದಿ ಜ್ಞಾನವು ಕೃತಯುಗದಲ್ಲಿ ಸ್ಥಿರವಾಗಿತ್ತು. ತ್ರೇತಾಯುಗದಲ್ಲಿ ಸ್ವಲ್ಪಮಟ್ಟಿಗೆ ಶಿಥಿಲವಾಯಿತು. ದ್ವಾಪರದ ಅಂತ್ಯದ ವೇಳೆಗೆ ಪ್ರಾಯಶಃ ಪೂರ್ಣವಾಗಿ ನಶಿಸಿತು. ಇದಕ್ಕೆ ಗೌತಮ ಋಷಿಯ ಶಾಪವೇ ಕಾರಣವೆಂದು ಹೇಳಲಾಗುತ್ತದೆ. ಮರೆಯಾಗಿದ್ದ ವೇದಗಳನ್ನು ಮತ್ತೆ ಅಭಿವ್ಯಕ್ತಗೊಳಿಸಿ ಜ್ಞಾನ ಪ್ರಕಾಶವನ್ನು ಉದ್ದೀಪನಗೊಳಿಸಲಿಕ್ಕಾಗಿಯೇ ವೇದವ್ಯಾಸರ ಅವತಾರವಾದುದು. ಅಲ್ಲಲ್ಲಿ ಚದುರಿಹೋಗಿದ್ದ ವೇದಗಳನ್ನೆಲ್ಲ ಒಟ್ಟುಗೂಡಿಸಿ ಅವುಗಳನ್ನು ನಾಲ್ಕು ವಿಭಾಗಗಳನ್ನಾಗಿ ಮಾಡಿ ಋಷಿಮುನಿಗಳ ಮೂಲಕ ಮತ್ತೆ ವೇದಗಳನ್ನು ಪುನರುಜ್ಜೀವನಗೊಳಿಸಿದವರೇ ಭಗವಾನ್ ವೇದವ್ಯಾಸರು. ಆದರೆ ವೇದಗಳ ನಿಜವಾದ ಹಾರ್ದವನ್ನು ತಿಳಿಯಲು ಅನೇಕ ಜ್ಞಾನಿಗಳೂ ಎಡವಿದರು. ಆಗ ವೇದಾರ್ಥನಿರ್ಣಯಕ್ಕಾಗಿ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಶ್ರೀ ಬಾದರಾಯಣರು (ವೇದವ್ಯಾಸರು) ಸೂತ್ರಗಳ ರೂಪದಲ್ಲಿ ರಚಿಸಿದರು. ಇವೇ ಬ್ರಹ್ಮಸೂತ್ರಗಳೆಂದು ಪ್ರಸಿದ್ಧವಾದವು ಒಟ್ಟು 564 ಸೂತ್ರಗಳಿಂದ ಯುಕ್ತವಾದ ಬ್ರಹ್ಮಮೀಮಾಂಸಾ ಶಾಸ್ತ್ರವು ವೇದಗಳ ನಿಜವಾದ ಅರ್ಥವನ್ನು ನಿರ್ಣಯಿಸಲು ಬಹಳ ಸಹಕಾರಿಯಾದವು. ಈ ಎಲ್ಲ ಸೂತ್ರಗಳನ್ನು ಅವು ನಿರ್ಣಯಿಸುವ ವಿಷಯಗಳ ಆಧಾರದ ಮೇಲೆ 223 ಗುಂಪುಗಳಾಗಿ ವಿಂಗಡಿಸಿದರು. ಇವನ್ನೇ ಅಧಿಕರಣಗಳು ಎನ್ನುತ್ತಾರೆ. ಕೆಲವು ಅಧಿಕರಣಗಳು ಒಂದೊಂದೇ ಸೂತ್ರದಿಂದ ಕೂಡಿದ್ದರೆ, ಮತ್ತೆ ಕೆಲವು

ಅಧಿಕರಣಗಳು ಎರಡು ಅಥವಾ ಅದಕ್ಕಿಂತ ಹೆಚ್ಚು ಸೂತ್ರಗಳನ್ನು ಒಳಗೊಂಡಿರುತ್ತವೆ.

ಬ್ರಹ್ಮಸೂತ್ರಗಳಿಗೆ ಅನೇಕ ವ್ಯಾಖ್ಯಾನಕಾರರೂ ಹಾಗೂ ಭಾಷ್ಯಕಾರರೂ ಹುಟ್ಟಿಕೊಂಡರು. ಅವರಲ್ಲಿ ಶ್ರೀಮನ್ ಮಧ್ವಾಚಾರ್ಯರು ತಮ್ಮ ವಿಶಿಷ್ಟ ರೀತಿಯ ಭಾಷ್ಯದಿಂದ ವಿಶೇಷವಾದ ಗಮನ ಸೆಳೆದಿದ್ದಾರೆ.

ಶ್ರೀಮಧ್ವಾಚಾರ್ಯರು ಬ್ರಹ್ಮಸೂತ್ರಗಳಿಗೆ ಯಥಾರ್ಥವಾದ ವ್ಯಾಖ್ಯಾನ ಮಾಡುವ ಮೂಲಕ ವೇದಗಳಿಗೆ ಯಥಾರ್ಥವಾದ ವಿವರಣೆ ನೀಡಿದ್ದಾರೆ. ಅವರಿಗೆ ಮುಂಚೆ 21 ವ್ಯಾಖ್ಯಾನಕಾರರು ಆಗಿ ಹೋಗಿದ್ದಾರೆಂದು ಪ್ರತೀತಿ. 22ನೇ ಭಾಷ್ಯವೇ ಶ್ರೀಮದ್ವಭಾಷ್ಯವು. ಇದೇ ನಿಜವಾದ ಭಾಷ್ಯವು. ಉಳಿದೆಲ್ಲವೂ ಅಪದ್ಧವು ಎಂಬುದಾಗಿ ಜ್ಞಾನಿಗಳ ಮತ. ಸೂತ್ರಕಾರರಾದ ಶ್ರೀವೇದವ್ಯಾಸರು ಒಪ್ಪಿಕೊಂಡ ಭಾಷ್ಯವಿದು.

ಆಚಾರ್ಯ ಮಧ್ವರು ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನರೂಪವಾಗಿ ನಾಲ್ಕು ಗ್ರಂಥಗಳನ್ನು ರಚಿಸಿದ್ದಾರೆ. ಮೊದಲನೆಯದು ಬ್ರಹ್ಮಸೂತ್ರಭಾಷ್ಯ. ಎರಡನೆಯದು ಬ್ರಹ್ಮಸೂತ್ರಾನುವ್ಯಾಖ್ಯಾನ. ಮೂರನೆಯದು ಬ್ರಹ್ಮಸೂತ್ರನ್ಯಾಯವಿವರಣೆ. ನಾಲ್ಕನೆಯದೇ ಬ್ರಹ್ಮಸೂತ್ರಾಣುಭಾಷ್ಯವು. ''ಸಂಕ್ಷೇಪ ವಿಸ್ತರಾಭ್ಯಾಂ ಚ ಪ್ರವದಂತಿ ಮನೀಷಿಣಃ'' ಎಂಬ ಆರ್ಯೋಕ್ತಿಯಂತೆ, ಶ್ರೀಮಧ್ವಾಚಾರ್ಯರು ಗದ್ಯಾತ್ಮಕವಾದ ವಿಸ್ತೃತಭಾಷ್ಯವನ್ನು ವಿರಚಿಸಿ ಭಾಷ್ಯವನ್ನು ಅನುಸರಿಸಿಯೇ ಶ್ಲೋಕಾತ್ಮಕವಾದ ಮತ್ತೊಂದು ವ್ಯಾಖ್ಯಾನವನ್ನು 'ಅನುವ್ಯಾಖ್ಯಾನ' ಎಂಬ ಹೆಸರಿನಲ್ಲಿ ವಿರಚಿಸಿ ಎಲ್ಲ ಅಪವ್ಯಾಖ್ಯಾನಗಳನ್ನೂ ನುಚ್ಚುನೂರು ಮಾಡಿದರು. ಅನುವ್ಯಾಖ್ಯಾನವು ಮಹತ್ತರ ಕೃತಿಯಾಗಿದ್ದು, ಅದರಲ್ಲಿರುವ ನ್ಯಾಯಗಳನ್ನು ಅರ್ಥಮಾಡಿಕೊಳ್ಳುವುದು ಸಾಮಾನ್ಯಜ್ಞಾನಿಗಳಿಗೆ ದುಸ್ತರವಾದ್ದರಿಂದ, ಬ್ರಹ್ಮಸೂತ್ರ ನ್ಯಾಯಗಳ ಸುಲಭ ತಿಳಿವಳಿಕೆಗೆ ಅನುವಾಗುವಂತೆ ಮತ್ತೊಂದು ಗ್ರಂಥವನ್ನು ರಚಿಸಿದರು. ಅದೇ ನ್ಯಾಯವಿವರಣವು. ಅನಂತರ ಕೊನೆಯದಾಗಿ ಅತ್ಯಂತ ಚಿಕ್ಕಗಾತ್ರದ

'ಅಣುಭಾಷ್ಯ' ಎಂಬ ಗ್ರಂಥವನ್ನು ರಚಿಸಿ ಎಲ್ಲ ಸಜ್ಜನರಿಗೂ ಮಹದುಪಕಾರ ಮಾಡಿರುವರು. ಇಡೀ ಭಾಷ್ಯದ ಸಾರವನ್ನು ಅತ್ಯಂತ ಸಂಕ್ಷಿಪ್ತವಾಗಿ ಅತ್ಯಲ್ಪ ಸಮಯದಲ್ಲಿಯೇ ನಿತ್ಯವೂ ಪಾರಾಯಣ ಮಾಡಲು ಅನುಕೂಲವಾಗುವಂತೆ ಈ ಗ್ರಂಥವು ರಚಿಸಲ್ಪಟ್ಟಿದೆ.

## ಬ್ರಹ್ಮ ಮೀಮಾಂಸಾ ಶಾಸ್ತ್ರ

ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ 564 ಸೂತ್ರಗಳು, 223 ಅಧಿಕರಣಗಳು ಹಾಗೂ ನಾಲ್ಕು ಅಧ್ಯಾಯಗಳು ಇರುತ್ತವೆ. ಪ್ರತಿ ಅಧ್ಯಾಯವೂ ನಾಲ್ಕು ಪಾದಗಳಿಂದ ಯುಕ್ತವಾಗಿದ್ದು ಒಟ್ಟು ಹದಿನಾರು ಪಾದಗಳಿರುತ್ತವೆ. ಈ ಹದಿನಾರು ಪಾದಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳನ್ನು ಕೆಳಗೆ ಸಂಗ್ರಹಿಸಲಾಗಿದೆ :

**ಪ್ರಥಮಾಧ್ಯಾಯ** (ಸಮನ್ವಯಾಧ್ಯಾಯ) : ಇದರಲ್ಲಿ ಎಲ್ಲ ಶಬ್ದಗಳನ್ನೂ ಭಗವಂತನಲ್ಲಿ ಸಮನ್ವಯ ಮಾಡಲಾಗಿದೆ. ಇದರಿಂದ ಭಗವಂತನು ಸಕಲ ಶಬ್ದವಾಚ್ಯನು ಹಾಗೂ ಸಕಲ ಗುಣಪರಿಪೂರ್ಣನು ಎಂಬ ಪ್ರಮೇಯವು ನಿರ್ಣೀತವಾಗುತ್ತದೆ. ಸಮನ್ವಯ ಸಾಧಿಸಬೇಕಾದ ಶಬ್ದಗಳಲ್ಲಿ ಕೆಳಕಂಡಂತೆ ಎಂಟು ವಿಧಗಳಿವೆ :

(1) ಭಗವಂತನಿಂದ ಇತರೆಡೆಗಳಲ್ಲಿ ಅಂದರೆ ಅನ್ಯತ್ರ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳು.

(2) ಅನ್ಯತ್ರ ಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳು.

(3) ಉಭಯತ್ರ (ಪರಮಾತ್ಮನಲ್ಲಿ ಹಾಗೂ ಅನ್ಯತ್ರ) ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳು.

(4) ಉಭಯತ್ರ ಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳು.

(5) ಬೇರೆ ಕಡೆಯಲ್ಲಿಯೇ (ಅನ್ಯತ್ರೈವ) ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳು,

(6) ಅನ್ಯತ್ರೈವ ಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳು.

(7) ಭಗವಂತನಲ್ಲಿ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳು.

(8) ಭಗವಂತನಲ್ಲಿ ಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳು.

ಇವುಗಳಲ್ಲಿ ಅನ್ಯತ್ರ ಪ್ರಸಿದ್ಧ ನಾಮಾತ್ಮಕ ಶಬ್ದಗಳ ಸಮನ್ವಯವನ್ನು ಪ್ರಥಮ ಪಾದದಲ್ಲಿ ಮಾಡಲಾಗಿದೆ. ದ್ವಿತೀಯ ಪಾದದಲ್ಲಿ ಅನ್ಯತ್ರ ಪ್ರಸಿದ್ಧ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ತೃತೀಯಪಾದದಲ್ಲಿ ಉಭಯತ್ರ ಪ್ರಸಿದ್ಧ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ಸಾಧಿಸಲಾಗಿದೆ. ನಾಲ್ಕನೆಯ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧವಾದ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡಲಾಗಿದೆ. ಭಗವಂತನಲ್ಲಿಯೇ ಪ್ರಸಿದ್ಧವಾದ ಶಬ್ದಗಳ ಸಮನ್ವಯವು ಅನವಶ್ಯಕವಾದ್ದರಿಂದ ಅವುಗಳ ಸಮನ್ವಯವನ್ನು ಮಾಡಿರುವುದಿಲ್ಲ.

**ದ್ವಿತೀಯಾಧ್ಯಾಯ** (ಅವಿರೋಧಾಧ್ಯಾಯ) : ಇದರಲ್ಲಿ ಭಗವಂತನ ಸಕಲಗುಣ ಪರಿಪೂರ್ಣತ್ವ ಹಾಗೂ ಜಗತ್ಕಾರಣತ್ವಗಳಿಗೆ ಯುಕ್ತಿ, ಸಮಯ, ಶ್ರುತ್ಯಾದಿಗಳಿಂದ ವಿರೋಧವಿದೆ ಎಂದು ಹೇಳುವ ಪರಕೀಯರ ವಾದವನ್ನು ಖಂಡಿಸಿ, ಭಗವಂತನು ಸಕಲ ದೋಷದೂರನು ಹಾಗೂ ಸಕಲ ಜಗತ್ಕಾರಣನು ಎಂಬ ಪ್ರಮೇಯಕ್ಕೆ ಯಾವ ವಿರೋಧವೂ ಇಲ್ಲ ಎಂಬುದನ್ನು ಪ್ರಬಲವಾಗಿ ಸಮರ್ಥಿಸಲಾಗಿದೆ. ಅಂದರೆ ಸಮನ್ವಯಾಧ್ಯಾಯಕ್ಕೆ ಪರಕೀಯರು ಮಂಡಿಸಿದ ವಿರೋಧವನ್ನು ಪರಿಹರಿಸಲಾಗಿದೆ ಎಂದು ತಾತ್ಪರ್ಯ.

ಈ ಅಧ್ಯಾಯದ ಪ್ರಥಮ ಪಾದದಲ್ಲಿ ಯುಕ್ತಿ ವಿರೋಧವನ್ನೂ, ದ್ವಿತೀಯ ಪಾದದಲ್ಲಿ ಸಮಯಗಳ (ದರ್ಶನಗಳ) ವಿರೋಧವನ್ನೂ, ತೃತೀಯ ಪಾದದಲ್ಲಿ ಶ್ರುತಿಗಳ ಪರಸ್ಪರ ವಿರೋಧವನ್ನೂ ಮತ್ತು ನಾಲ್ಕನೆಯ ಪಾದದಲ್ಲಿ ನ್ಯಾಯೋಪೇತ (ಯುಕ್ತಿಸಹಿತ) ಶ್ರುತಿ ವಿರೋಧವನ್ನೂ ಪರಿಹರಿಸಲಾಗಿದೆ.

**ತೃತೀಯಾಧ್ಯಾಯ** (ಸಾಧನಾಧ್ಯಾಯ) : ಪ್ರಥಮಾಧ್ಯಾಯದಲ್ಲಿ ಸಕಲ ಶಬ್ದ ಸಮನ್ವಯದ ಮೂಲಕ ಭಗವಂತನ ಗುಣಪೂರ್ಣತ್ವನ್ನು ಸಾಧಿಸಲಾಯಿತು. ದ್ವಿತೀಯಾಧ್ಯಾಯದಲ್ಲಿ ಭಗವತನ ಜಗತ್ಕಾರಣತ್ವಕ್ಕೆ ಪರಕೀಯರು ಪ್ರತಿಪಾದಿಸಿದ ವಿರೋಧವನ್ನು ಪರಿಹರಿಸಿ ಭಗವಂತನು ಸಕಲದೋಷದೂರನು ಎಂಬುದನ್ನು ಸಾಧಿಸಲಾಯಿತು. ಹಾಗಾದರೆ ಮುಂದೆ ಏನು ಮಾಡಬೇಕು ಎಂಬ ಆಕಾಂಕ್ಷೆಯನ್ನು ಪರಿಹರಿಸುವುದಕ್ಕಾಗಿ ತೃತೀಯಾಧ್ಯಾಯವು ಪ್ರವೃತ್ತವಾಗಿದೆ. ''ಅಥಾತೋ ಬ್ರಹ್ಮಜಿಜ್ಞಾಸಾ'' ಎಂಬ ಪ್ರಥಮ ಸೂತ್ರದಲ್ಲಿ ಅಥ ಹಾಗೂ ಬ್ರಹ್ಮಜಿಜ್ಞಾಸಾ ಎಂಬ ಪದಗಳಿಂದ ಏನೇನು ಸಾಧನೆಗಳು ವಿಹಿತವೆಂದು ಸೂಚಿಸಲಾಗಿದೆಯೋ ಅವುಗಳ ವಿಚಾರವು ಈ ಸಾಧನಾಧ್ಯಾಯದಲ್ಲಿ ನಿರೂಪಿಸಲ್ಪಡುತ್ತದೆ. ಇದರಲ್ಲಿ ಪ್ರಥಮ ಪಾದದಲ್ಲಿ ವೈರಾಗ್ಯರೂಪವಾದ ಸಾಧನೆಯ ವಿಷಯವೂ, ದ್ವಿತೀಯ ಪಾದದಲ್ಲಿ ವೈರಾಗ್ಯ ಸಾಧನೆಗೆ ಅತ್ಯವಶ್ಯಕವಾದ ಭಕ್ತಿ ವಿಷಯವೂ, ತೃತೀಯ ಪಾದದಲ್ಲಿ ಭಕ್ತಿಸಾಧ್ಯವಾದ ಉಪಾಸನೆಯ ವಿಷಯವೂ, ನಾಲ್ಕನೆಯ ಪಾದದಲ್ಲಿ ಭಗವದಪರೋಕ್ಷ ಜ್ಞಾನದ ಸಾಮರ್ಥ್ಯವೂ ನಿರೂಪಿಸಲ್ಪಡುತ್ತದೆ.

**ಚತುರ್ಥಾಧ್ಯಾಯ** (ಫಲಾಧ್ಯಾಯ) : ವೈರಾಗ್ಯ, ಭಕ್ತಿ ಮೊದಲಾದ ಸಾಧನೆಗಳಿಂದ ಭಗವದಪರೋಕ್ಷ ಜ್ಞಾನವು ಪ್ರಾಪ್ತಿಯಾಗುವುದೆಂದು ಮೂರನೆಯ ಅಧ್ಯಾಯದಲ್ಲಿ ತಿಳಿಸಲಾಯಿತು. ಅಪರೋಕ್ಷಜ್ಞಾನವನ್ನು ಹೊಂದಿದ ಮೇಲೆ ಫಲವೇನು ಎಂಬ ಆಕಾಂಕ್ಷೆಯನ್ನು ಪರಿಹರಿಸಲಿಕ್ಕಾಗಿ, ಬ್ರಹ್ಮಜ್ಞಾನ ಪಲವಾದ ಮೋಕ್ಷವನ್ನು ಹೊಂದುವ ಮಾರ್ಗವನ್ನೂ ಹಾಗು ಮೋಕ್ಷದ ಸ್ವರೂಪ ವನ್ನೂ ಈ ಫಲಾಧ್ಯಾಯದಲ್ಲಿ ನಿರೂಪಿಸಲಾಗಿದೆ.

ಇದರಲ್ಲಿ ಪ್ರಥಮ ಪಾದದಲ್ಲಿ ಕರ್ಮನಾಶಾಖ್ಯ ಫಲವನ್ನೂ, ದ್ವಿತೀಯ ಪಾದದಲ್ಲಿ ಜ್ಞಾನಭೋಗಗಳಿಂದ ಕರ್ಮಕ್ಷಯವನ್ನು ಹೊಂದಿದವರ ದೇಹಲಯ ವನ್ನೂ, ಮೂರನೆಯ ಪಾದದಲ್ಲಿ ಬ್ರಹ್ಮನಾಡಿ ಅಥವಾ ಇತರ ನಾಡಿಗಳಿಂದ ದೇಹದಿಂದ ಹೊರಬರುವ ಸಾಧಕ ಜೀವರುಗಳ ಉತ್ಕ್ರಮಣದ ಮಾರ್ಗವನ್ನೂ

ಹಾಗೂ ಅವರು ಹೊಂದುವ ಸ್ಥಾನವನ್ನೂ, ನಾಲ್ಕನೆಯ ಪಾದದಲ್ಲಿ ಚತುರ್ಮುಖ ಬ್ರಹ್ಮನೊಂದಿಗೇ ಪರಬ್ರಹ್ಮನನ್ನು ಹೊಂದುವ ಮುಕ್ತರ ವಿಷಯವನ್ನೂ ಹಾಗೂ ಮುಕ್ತಿಯಲ್ಲಿ ಭೋಗಪ್ರಕಾರವನ್ನೂ ನಿರೂಪಿಸಲಾಗಿದೆ.

ಹೀಗೆ ಬ್ರಹ್ಮಸೂತ್ರದ ಮೊದಲನೆಯ ಸೂತ್ರದಲ್ಲಿ ''ಅಥಾತೋ ಬ್ರಹ್ಮಜಿಜ್ಞಾಸಾ'' ಎಂಬುದಾಗಿ ಕರ್ತವ್ಯತಾ ರೂಪದಲ್ಲಿ ವಿಧಿಸಲಾದ ಸಂಗತಿಯನ್ನು ನಾಲ್ಕು ಅಧ್ಯಾಯಗಳಲ್ಲಿ ಕ್ರಮವಾಗಿ ಸಮರ್ಥಿಸಲಾಗಿದೆ. ಶ್ರವಣ, ಮನನ, ನಿದಿಧ್ಯಾಸನ ರೂಪವಾದ ಸಾಧನೆಯಿಂದ ಶಮದಮಾದಿ ಸಂಪತ್ತನ್ನು ಗಳಿಸಿದ ಅಧಿಕಾರಿಗಳು, ಮೋಕ್ಷಾಖ್ಯ ಫಲವಿರುವ ಪ್ರಯುಕ್ತ ಬ್ರಹ್ಮ ಜಿಜ್ಞಾಸೆಯನ್ನು ಅವಶ್ಯ ಮಾಡಲೇಬೇಕು ಎಂಬುದನ್ನು ಬ್ರಹ್ಮ ಮೀಮಾಂಸಾ ಶಾಸ್ತ್ರದಲ್ಲಿ ಬಹಳ ಸಮರ್ಥವಾಗಿ ನಿರೂಪಿಸಲಾಗಿದೆ. ಆದ ಪ್ರಯುಕ್ತ ಯಥಾರ್ಥವಾದ ಭಾಷ್ಯ, ವ್ಯಾಖ್ಯಾನಾದಿಗಳ ಮೂಲಕ ಬ್ರಹ್ಮಸೂತ್ರಗಳನ್ನು ಅಧ್ಯಯನ ಮಾಡುವುದು ಎಲ್ಲ ಸಜ್ಜೀವರಿಗೆ ಅವಶ್ಯ ಕರ್ತವ್ಯವು. ಶ್ರೀಮಧ್ವಾಚಾರ್ಯರು ರಚಿಸಿರುವ ಭಾಷ್ಯಾದಿಗಳ ಮೂಲಕ ಬ್ರಹ್ಮಸೂತ್ರಗಳ ಅಧ್ಯಯನ ಮಾಡಿ ಸಾಧನೆ ಕೈಗೊಂಡಾಗ ಮಾತ್ರ ನಿಶ್ಚಿತವಾದ ಮೋಕ್ಷರೂಪ ಫಲವು.

**ಅಣುಭಾಷ್ಯ :**

ಅಣುಭಾಷ್ಯದಲ್ಲಿ ಒಂದೊಂದೇ ಅಧಿಕರಣದ ಅರ್ಥವು ಒಂದೊಂದೇ ಶಬ್ದದಿಂದ ನಿರೂಪಿಸಲ್ಪಟ್ಟಿದೆ. ''ವಿಷ್ಣುರೇವ ವಿಜಿಜ್ಞಾಸ್ಯಃ'' ಎಂಬ ಶಬ್ದದಿಂದ 'ಓಂ ಅಥತೋ ಬ್ರಹ್ಮ ಜಿಜ್ಞಾಸಾ ಓಂ'' ಎಂಬ ಏಕಸೂತ್ರಿಯ ಜಿಜ್ಞಾಸಾಧಿಕರಣದ ತಾತ್ಪರ್ಯವು ಹೇಳಲ್ಪಟ್ಟಿದೆ. ಅದೇ ರೀತಿ ಒಂದೇ ಶಬ್ದದಿಂದ ಅನೇಕ ಅಧಿಕರಣಗಳ ತಾತ್ಪರ್ಯವೂ ಕೂಡ ಕೆಲವು ಕಡೆ ಹೇಳಲ್ಪಟ್ಟಿದೆ. ಉದಾಹರಣೆಗೆ ದ್ವಿತೀಯಾಧ್ಯಾಯದ ಚತುರ್ಥಪಾದದಲ್ಲಿ ''ಮುಖ್ಯಪ್ರಾಣಶ್ಚೇಂದ್ರಿಯಾಣಿ'' ಎಂಬ ಶಬ್ದದಿಂದ ಮೂರು ಅದಿಕರಣಗಳ ತಾತ್ಪರ್ಯವು ವರ್ಣಿತವಾಗಿದೆ.

ಸಮುಸ್ತವಾದ ಸೂತ್ರ, ಹಾಗೂ ಅಧಿಕರಣಗಳ ಅರ್ಥಸರ್ವಸ್ವವನ್ನೂ

ಕೇವಲ 30 ಶ್ಲೋಕಗಳಲ್ಲಿಯೇ ಸಂಗ್ರಹಿತವಾಗಿದೆಯೆಂದರೆ ಅಣುಭಾಷ್ಯ ಕರ್ತೃಗಳಾದ ಶ್ರೀ ಮಧ್ವಾಚಾರ್ಯರ ವ್ಯಾಖ್ಯಾನದ ಕೌಶಲ ಎಷ್ಟು ಮಹತ್ತರವಾದುದು ಎಂಬುದನ್ನು ಅರಿತಾಗ ಹೃದಯ ತುಂಬಿ ಬರುತ್ತದೆ ಹಾಗೂ ಆಚಾರ್ಯರಲ್ಲಿ ಭಕ್ತಿಯು ಉಕ್ಕೇರುತ್ತದೆ. ನಾರಾಯಣ ಪಂಡಿತಾಚಾರ್ಯರೂ ಕೂಡ ''ಅನಂತೋಽರ್ಥಃ ಪ್ರಕಟಿತಃ ತ್ವಯಾಽಣೌಭಾಷ್ಯಸಂಗ್ರಹೇ'' ಎಂಬುದಾಗಿ ಶ್ರೀ ಮಧ್ವವಿಜಯ ಎಂಬ ಗ್ರಂಥದಲ್ಲಿ (ಇದು ಶ್ರೀಮದಾಚಾರ್ಯರ ಜೀವನ ಚರಿತ್ರೆಯನ್ನು ಅಧಿಕೃತವಾಗಿ ದಾಖಲಿಸಿರುವ ಗ್ರಂಥ) ಉದ್ಗಾರ ತೆಗೆದಿದ್ದಾರೆ. ಶ್ರೀಕೃಷ್ಣನು ತನ್ನ ತಾಯಿ ಯಶೋದೆಗೆ ಇಡೀ ಬ್ರಹ್ಮಾಂಡವನ್ನೇ ತನ್ನ ಪುಟ್ಟ ಬಾಯಿಯಲ್ಲಿ ತೋರಿಸಿದನಂತೆ. ಅದೇ ರೀತಿ ಶ್ರೀಮದಾಚಾರ್ಯರು ತಮ್ಮ ಪುಟ್ಟ ಗ್ರಂಥದಲ್ಲಿ ಅನಂತಾರ್ಥಗಳನ್ನು ಪ್ರಕಟಗೊಳಿಸಿ ಜ್ಞಾನಿ ಪ್ರಪಂಚವನ್ನು ಮೂಕವಿಸ್ಮಿತರನ್ನಾಗಿ ಮಾಡಿದ್ದಾರೆ. ಆದ್ದರಿಂದ ಈ ಗ್ರಂಥಕ್ಕೆ ಅಣುಭಾಷ್ಯವೆಂಬ ಹೆಸರು ಅತ್ಯಂತ ಅನ್ವರ್ಥಕ ಎಂಬುದಾಗಿ ಶ್ರೀಮಧ್ವವಿಜಯದ ಗ್ರಂಥಕರ್ತೃಗಳು ತಮ್ಮ ಗ್ರಂಥದಲ್ಲಿ ದಾಖಲಿಸಿದ್ದಾರೆ.

ಈ ಅಣುಭಾಷ್ಯವೇ (1) ಸರ್ವ ಶಾಸ್ತ್ರಾರ್ಥಸಂಗ್ರಹಃ (2) ಸಂಕ್ಷೇಪ ಭಾಷ್ಯಮ್ (3) ಭಾಷ್ಯಸಂಗ್ರಹಃ (4) ಸಂಗ್ರಹಭಾಷ್ಯಮ್ ಇತ್ಯಾದಿಯಾಗಿ ವಿವಿಧ ವ್ಯಾಖ್ಯಾನಕಾರರಿಂದ ಅನೇಕ ಹೆಸರುಗಳಿಂದ ಪ್ರಚಲಿತವಾಗಿದೆ.

(1) ''ಪೂರ್ಣಪ್ರಜ್ಞೇನ ಮುನಿನಾ ಸರ್ವಶಾಸ್ತ್ರಾರ್ಥಸಂಗ್ರಹಃ'' ಎಂದು ಶ್ರೀಮಧ್ವಾಚಾರ್ಯರು;

(2) ''ವಿಷ್ಣೋಃ ಪ್ರಸಾದೈಕಬಲಾತ್ ಸರ್ವಶಾಸ್ತ್ರಾರ್ಥ ಸಂಗ್ರಹಮ್'' ಎಂದು ತ್ರೈವಿಕ್ರಮಾರ್ಯದಾಸರು;

(3) ''ಭಗವಾನ್ ಆನಂದತೀರ್ಥಮುನಿಃ ಯಥಾವದ್ವ್ಯಾಚಿಖ್ಯಾಸುಃ ಭಾಷ್ಯಾನುಭಾಷ್ಯೇ ವಿಧಾಯ ಸಂಕ್ಷೇಪಭಾಷ್ಯಮಪಿ ವಿಧಿತ್ಸುಃ'' ಎಂದು ತತ್ವಮಂಜರಿಯಲ್ಲಿ ಶ್ರೀ ರಾಘವೇಂದ್ರ ತೀರ್ಥರು;

(4) ''ಅನಂತೋಽರ್ಥಃ ಪ್ರಕಟಿತಃ ತ್ವಯಾಽಣೌ ಭಾಷ್ಯಸಂಗ್ರಹೇ'' ಎಂದು ನಾರಾಯಣ ಪಂಡಿತಾಚಾರ್ಯರು;

(5) ''ಅಥೇದಾನೀಮೇವ ಪರಿಸಮಾಪಿತಂ ಸಂಗ್ರಹ ಭಾಷ್ಯಂ ಭಗವಾನ್ ಆಚಾರ್ಯಃ'' ಎಂದು ತ್ರೈವಿಕ್ರಮಾರ್ಯದಾಸರು;

ಈ ಪ್ರಕಾರವಾಗಿ ಅಣುಭಾಷ್ಯಕ್ಕೆ ಅನೇಕ ಹೆಸರುಗಳು ವಿವಿಧ ವ್ಯಾಖ್ಯಾನಕಾರರಿಂದ ಬಳಸಲ್ಪಟ್ಟಿವೆ.

ಅಣುಭಾಷ್ಯಕ್ಕೆ ಸಂಬಂಧಿಸಿದಂತೆ ಸುಮಾರು 15 ವ್ಯಾಖ್ಯಾನಗಳು ಉಪಲಬ್ಧವಾಗಿದ್ದು ಅವುಗಳು ಕೆಳಕಂಡಂತಿವೆ :

(1) ಅಣುಭಾಷ್ಯ ಟೀಕಾ - ಶ್ರೀ ನಾರಾಯಣ ಪಂಡಿತಾಚಾರ್ಯರು

(2) ಅಣುಭಾಷ್ಯ ಟೀಕಾ - ಶ್ರೀ ಜಯತೀರ್ಥ ಮುನಿಗಳು.

(3) ಅಣುಭಾಷ್ಯ ಟೀಕಾ (ಸಿದ್ಧಾಂತ ದೀಪಿಕಾ) - ಶ್ರೀ ಅನಂತ ಭಟ್ಟರು.

(4) ಅಣುಭಾಷ್ಯ ಟೀಕಾ (ತತ್ತ್ವಪ್ರಕಾಶಿಕಾ) - ಛಲಾರಿ ಶೇಷಾಚಾರ್ಯರು.

(5) ಅಣುಭಾಷ್ಯ ಟೀಕಾ (ತತ್ತ್ವಮಂಜರೀ) - ಶ್ರೀ ರಾಘವೇಂದ್ರತೀರ್ಥರು.

(6) ಅಣುಭಾಷ್ಯ ಟೀಕಾ (ಆನಂದಮಾಲಾ) - ಶ್ರೀ ತ್ರೈವಿಕ್ರಮಾರ್ಯದಾಸರು.

(7) ಅಣುಭಾಷ್ಯ ಟೀಕಾ (ಭಾವ ಪ್ರಕಾಶಿಕಾ) - ಶ್ರೀ ನರಸಿಂಹಾಚಾರ್ಯರು.

(8) ಅಣುಭಾಷ್ಯ ಟಿಪ್ಪಣಿ - ಶ್ರೀನಿವಾಸಾಚಾರ್ಯರು.

(9) ಅಣುಭಾಷ್ಯ ಟಿಪ್ಪಣಿ - ಬಿದರಹಳ್ಳಿ ಶ್ರೀನಿವಾಸತೀರ್ಥರು

(10) ಅಣುಭಾಷ್ಯವಿವೃತಿಃ - ಶ್ರೀ ಆನಂದತೀರ್ಥಾರ್ಯಸೂನುಃ

(11) ಅಣುಭಾಷ್ಯ ಪ್ರಪಂಚನಮ್ - ಪೈಠಣೀ ನಾರಾಯಣಾಚಾರ್ಯರು.

(12) ರಿಂದ (15) ನಾಲ್ಕು ಗೂಢಕರ್ತೃಕ ಟಿಪ್ಪಣಿಗಳೂ ಉಂಟು.

ಹೀಗೆಂದು ವಿದ್ವಾಂಸ ಶ್ರೀ ಆರ್.ಜಿ. ಮಳಗಿ ಅವರಿಂದ ಸಂಪಾದಿಸಲ್ಪಟ್ಟ ಛಲಾರಿ ಶೇಷಾಚಾರ್ಯರ 'ತತ್ತ್ವಪ್ರಕಾಶಿಕಾ' ಎಂಬ 'ಅಣುಭಾಷ್ಯ ಟೀಕಾ' ಗ್ರಂಥದ ಮುನ್ನುಡಿಯಲ್ಲಿ ದಾಖಲಿಸಲಾಗಿದೆ. ಈ ಮೇಲಿನ ಗ್ರಂಥಗಳಲ್ಲಿ ''ತತ್ತ್ವ ಮಂಜರೀ'', ''ಆನಂದಮಾಲಾ'', ಶ್ರೀನಿವಾಸತೀರ್ಥ ಕೃತ ವ್ಯಾಖ್ಯಾನ, ಹಾಗೂ 'ತತ್ತ್ವಪ್ರಕಾಶಿಕಾ' ವ್ಯಾಖ್ಯಾನಗಳು ಮುದ್ರಿತವಾಗಿದೆ.

ಪ್ರಸ್ತುತ ನನ್ನಿಂದ ಪ್ರಕಟವಾಗುತ್ತಿರುವ ಕನ್ನಡ ಅನುವಾದ ಸಹಿತವಾದ ಈ ಗ್ರಂಥವು ವಿದ್ವಾಂಸ ಆರ್.ಜಿ. ಮಳಗಿ ಯವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ ಛಲಾರಿ ಶೇಷಾಚಾರ್ಯರ 'ತತ್ತ್ವಪ್ರಕಾಶಿಕಾ' ಎಂಬ ಅಣುಭಾಷ್ಯ ಟೀಕೆಯನ್ನೇ ಪ್ರಧಾನವಾಗಿ ಅವಲಂಬಿಸಿದೆ. ಛಲಾರಿ ಶೇಷಾಚಾರ್ಯರು ಛಲಾರಿ ನರಸಿಂಹಾಚಾರ್ಯರು ಹಾಗೂ ಶ್ರೀ ಸತ್ಯನಿಧಿ ತೀರ್ಥರೆಂಬ ಯತಿಗಳ ಶಿಷ್ಯರು. ಇವರು ಧರ್ಮಪುರಿಯ ಪುರುಷೋತ್ತಮಾಚಾರ್ಯರ ಮಕ್ಕಳು. ಜಯತೀರ್ಥ ವಿಜಯದ ಕರ್ತೃಗಳಾದ ಸಂಕರ್ಷಣಾಚಾರ್ಯರು ಛಲಾರಿ ಶೇಷಾಚಾರ್ಯರ ಮಕ್ಕಳು. ಶೇಷಾಚಾರ್ಯರು ಸುಮಾರು 16 ಗ್ರಂಥಗಳನ್ನು (ಟೀಕಾ, ಟಿಪ್ಪಣಿ ನಿರ್ಣಯ ರೂಪವಾದ) ರಚಿಸಿದ್ದಾರೆಂದು ಪ್ರತೀತಿ. ಇವುಗಳು ಪ್ರಸ್ತುತ ಉಪಲಬ್ಧವಿದೆ ಎಂಬುದಾಗಿ 'ತತ್ತ್ವಪ್ರಕಾಶಿಕಾ' ಸಂಪಾದಕರು ತಿಳಿಸಿದ್ದಾರೆ.

ಕನ್ನಡ ಅನುವಾದ ಮತ್ತು ವಿವರಣೆಸಹಿತವಾದ ಪ್ರಸ್ತುತ ಅಣುಭಾಷ್ಯ ಗ್ರಂಥದಲ್ಲಿ ಎರಡು ಭಾಗಗಳಿವೆ. ಭಾಗ - 1ರಲ್ಲಿ ಶ್ಲೋಕತಾತ್ಪರ್ಯಚಂದ್ರಿಕಾ ಎಂಬ ಶೀರ್ಷಿಕೆಯಲ್ಲಿ ಅಣುಭಾಷ್ಯದ ಎಲ್ಲ 32 ಶ್ಲೋಕಗಳಿಗೂ ಸರಳವಾದ ತಾತ್ಪರ್ಯವನ್ನು ನೀಡಲಾಗಿದೆ. ಇದರಿಂದ ನಿತ್ಯದಲ್ಲಿಯೂ ಅಣುಭಾಷ್ಯವನ್ನು ಅರ್ಥಸಹಿತ ಪಾರಾಯಣ ಮಾಡುವ ಸಾಧಕರಿಗೆ ತುಂಬಾ ಪ್ರಯೋಜನ ವಾಗಲಿದೆ. ಭಾಗ-2 ರಲ್ಲಿ ಅಧಿಕರಣ ತಾತ್ಪರ್ಯ ಚಂದ್ರಿಕಾ ಎಂಬ ಶೀರ್ಷಿಕೆಯಲ್ಲಿ ಸಾಕಷ್ಟು ವಿಸ್ತಾರವಾಗಿ ಅಣುಭಾಷ್ಯದ ವಿವರಣೆಯನ್ನು ನೀಡಲಾಗಿದೆ. ಇದರಲ್ಲಿ ಎಲ್ಲ 223 ಅಧಿಕರಣಗಳ ತಾತ್ಪರ್ಯವನ್ನು ವಿವರವಾಗಿ ನೀಡುವುದರೊಂದಿಗೆ,

ಪ್ರತಿ ಅಧಿಕರಣವೂ ಅಣುಭಾಷ್ಯದ ಯಾವ ಪದ ಅಥವಾ ವಾಕ್ಯದಿಂದ ಸಂಗ್ರಹಿಸಲಾಗಿದೆ ಎಂಬುದನ್ನು ಸುಲಭವಾಗಿ ಬುದ್ಧಿಸ್ಥವಾಗುವ ರೀತಿಯಲ್ಲಿ ವಿವರಿಸಲಾಗಿದೆ. ವಿಸ್ತಾರವಾಗಿ ಅಣುಭಾಷ್ಯವನ್ನು ಅಧ್ಯಯನ ಮಾಡಬಯಸುವ ಜಿಜ್ಞಾಸುಗಳಿಗೆ ಇದರಿಂದ ತುಂಬಾ ಪ್ರಯೋಜನವಾಗಲಿದೆ. ಈಗಾಗಲೇ ಸೂತ್ರಭಾಷ್ಯ ಹಾಗೂ ಅನುವ್ಯಾಖ್ಯಾನಗಳನ್ನು ಅಧ್ಯಯನ ಮಾಡಿದವರಿಗೆ ಕನ್ನಡ ಅನುವಾದ ಹಾಗೂ ವಿವರಣೆಯಿಂದ ಕೂಡ ಈ ಗ್ರಂಥವು ಮತ್ತೆ ಮನನ ಮಾಡಲಿಕ್ಕೆ ಯೋಗ್ಯವಾಗಿದೆ. ಇಂಥಹ ಒಂದು ಗ್ರಂಥವನ್ನು ರಚಿಸಲು ಅಂತರ್ಯಾಮಿ ಶ್ರೀಹರಿ-ವಾಯುಗಳ ಪ್ರೇರಣೆಯಿಲ್ಲದೇ ನನ್ನಂಥ ಪಾಮರನಿಂದ ಸಾಧ್ಯವಾಗುತ್ತಿರಲಿಲ್ಲ. ಶ್ರೀಹರಿವಾಯುಗಳಿಗೂ, ಎಲ್ಲ ಟೀಕಾ-ಟಿಪ್ಪಣಿಕಾರರಿಗೂ ನನ್ನ ಅನಂತ ನಮಸ್ಕಾರಗಳು. ನಮ್ಮ ಪೂಜ್ಯಗುರುಗಳಾದ ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯರಿಗೂ ನನ್ನ ಗೌರವಾದರಪೂರ್ವಕ ನಮಸ್ಕಾರಗಳು.

ಇಂತಿ ಸಜ್ಜನವಿಧೇಯ

**ಎಸ್. ವೆಂಕಟೇಶ ಮೂರ್ತಿ**

# ವಿಷಯಾನುಕ್ರಮಣಿಕೆ


| | |
|---|---|
| ಭಾಗ-೧ : ಶ್ಲೋಕತಾತ್ಪರ್ಯ ಚಂದ್ರಿಕಾ | ೧-೧೬ |
| ಭಾಗ-೨ : ಅಧಿಕರಣ ತಾತ್ಪರ್ಯ ಚಂದ್ರಿಕಾ | ೧೭-೨೧೭ |
| ಮಂಗಲ ಶ್ಲೋಕ | ೧೮ |
| ಮೊದಲನೆಯ ಅಧ್ಯಾಯ | ೨೧-೪೯ |
| ಮೊದಲನೇ ಪಾದ | ೨೧ |
| ಎರಡನೇ ಪಾದ | ೩೦ |
| ಮೂರನೇ ಪಾದ | ೩೫ |
| ನಾಲ್ಕನೇ ಪಾದ | ೪೪ |
| ಎರಡನೆಯ ಅಧ್ಯಾಯ | ೫೦-೯೮ |
| ಮೊದಲನೇ ಪಾದ | ೫೦ |
| ಎರಡನೇ ಪಾದ | ೬೦ |
| ಮೂರನೇ ಪಾದ | ೭೦ |
| ನಾಲ್ಕನೇ ಪಾದ | ೮೬ |
| ಮೂರನೆಯ ಅಧ್ಯಾಯ | ೯೯-೧೭೬ |
| ಮೊದಲನೇ ಪಾದ | ೯೯ |
| ಎರಡನೇ ಪಾದ | ೧೧೫ |
| ಮೂರನೇ ಪಾದ | ೧೩೧ |
| ನಾಲ್ಕನೇ ಪಾದ | ೧೬೫ |
| ನಾಲ್ಕನೆಯ ಅಧ್ಯಾಯ | ೧೭೭-೨೧೩ |
| ಮೊದಲನೇ ಪಾದ | ೧೭೭ |
| ಎರಡನೇ ಪಾದ | ೧೮೬ |
| ಮೂರನೇ ಪಾದ | ೧೯೭ |
| ನಾಲ್ಕನೇ ಪಾದ | ೨೦೩ |
| ಗ್ರಂಥದ ಉಪಸಂಹಾರ | ೨೧೪ |

# ಕೃತಜ್ಞತೆ

**ಮಹಾಪೋಷಕರು :**

1. ಶ್ರೀ ಎಸ್. ವೆಂಕಟೇಶ ಮೂರ್ತಿ, ಬೆಂಗಳೂರು.
2. ಶ್ರೀ ಶ್ರೀನಿಧಿ ವಿ., ಬೆಂಗಳೂರು.
3. ಶ್ರೀ ಡಿ.ಎಸ್. ರಂಗನಾಥ್, ಬೆಂಗಳೂರು.
4. ಶ್ರೀ ಎಂ.ಎಸ್. ಸುಧೀಂದ್ರ, ಬೆಂಗಳೂರು.
5. ದಿ|| ಎಂ.ವಿ. ಕೃಷ್ಣಮೂರ್ತಿ ಸ್ಮಾರಕ ಟ್ರಸ್ಟ್, ಬೆಂಗಳೂರು.

**ಪೋಷಕರು :**

1. ಶ್ರೀ ಎಂ.ಕೆ. ರಾಘವೇಂದ್ರ ರಾವ್, ಚೈತ್ರ, ಬೆಂಗಳೂರು.
2. ಶ್ರೀ ಎಸ್.ಆರ್. ಪಾಂಡುರಂಗಿ, ಬೆಂಗಳೂರು.
3. ಶ್ರೀ ಟಿ.ಕೆ. ನಾರಾಯಣ ಮೂರ್ತಿ, ಬೆಂಗಳೂರು.
4. ಶ್ರೀಮತಿ ಮಧುರಾಬಾಯಿ, ಬೆಂಗಳೂರು.
5. ಶ್ರೀ ಆರ್.ಎಚ್. ಕುಲಕರ್ಣಿ, ಗುಲ್ಬರ್ಗಾ.
6. ಶ್ರೀ ವಿಜಯೇಂದ್ರ ರಾವ್ ಬಿ.ಎನ್. ಬೆಂಗಳೂರು.
7. ಶ್ರೀ ರಾಘವೇಂದ್ರ ದರ್ಶನ ಕೇಂದ್ರ, ಬೆಂಗಳೂರು.
8. ಶ್ರೀ ದೀಪಕ್ ಎಂ. ಛಬ್ಬಿ, ಯು.ಎಸ್.ಎ.
9. ಶ್ರೀ ಜಿ. ಶೇಷಗಿರಿ ರಾವ್ (ವೇದಗರ್ಭ), ಬೆಂಗಳೂರು.

॥ ಶ್ರೀ ಗುರುಭ್ಯೋ ನಮಃ ಹರಿಃ ಓಂ ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ

# ಅಣುಭಾಷ್ಯ

## ಭಾಗ - ೧

# ಶ್ಲೋಕತಾತ್ಪರ್ಯಚಂದ್ರಿಕಾ

**ಮಂಗಲ ಶ್ಲೋಕ :**

ನಾರಾಯಣಂ ಗುಣೈಃ ಸರ್ವೈಃ ಉದೀರ್ಣಂ ದೋಷವರ್ಜಿತಮ್।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥೧॥

**ತಾತ್ಪರ್ಯ :** ಸಮಸ್ತವಾದ ಜ್ಞಾನಾನಂದಾದಿ ಗುಣಗಳಿಂದ ಪರಿಪೂರ್ಣವಾದ, ಚಿಂತಾಸಂತಾಪ ಇವೇ ಮೊದಲಾದ ದೋಷಗಳಿಂದ ದೂರನಾದ, ಸಜ್ಜನರಿಂದ ಶ್ರವಣ, ಮನನ, ನಿಧಿಧ್ಯಾಸನಾದಿಗಳಿಂದ ಉತ್ಪನ್ನವಾಗುವ ಜ್ಞಾನದಿಂದ ತಿಳಿಯಲ್ಪಡತಕ್ಕವನಾದ, ಸಜ್ಜನರಿಂದ ಜ್ಞಾನರೂಪ ಉಪಾಯದಿಂದ ಹೊಂದಲ್ಪಡತಕ್ಕವನಾದ, ನಾರಾಯಣನನ್ನು ನಮಸ್ಕರಿಸಿ, ನಾರಾಯಣನಿಂದ ಅಭಿನ್ನರಾದ ಅಂದರೆ ನಾರಾಯಣ ಸ್ವರೂಪರಾದ ಗುರುಗಳನ್ನು ಸಹ ನಮಸ್ಕರಿಸಿ, ಅವರಿಂದ ರಚಿತವಾದ ಬ್ರಹ್ಮಸೂತ್ರಗಳಿಗೆ ಅರ್ಥವು (ನಮ್ಮಿಂದ) ಹೇಳಲ್ಪಡುತ್ತದೆ.

# ಪ್ರಥಮಾಧ್ಯಾಯ

## ಪ್ರಥಮ ಪಾದ

ವಿಷ್ಣುರೇವ ವಿಜಿಜ್ಞಾಸ್ಯಃ ಸರ್ವಕರ್ತಾ ಆಗಮೋದಿತಃ ।
ಸಮನ್ವಯಾದೀಕ್ಷತೇಶ್ಚ ಪೂರ್ಣಾನಂದೋ ಅಂತರಃ ಖವತ್ ॥೨॥
ಪ್ರಣೇತಾ ಜ್ಯೋತಿರಿತ್ಯಾದ್ಯೈಃ ಪ್ರಸಿದ್ಧೈಃ ಅನ್ಯವಸ್ತುಷು ।
ಉಚ್ಯತೇ ವಿಷ್ಣುರೇವೈಕಃ ಸರ್ವಗುಣತ್ವತಃ ॥೩॥

**ತಾತ್ಪರ್ಯ :** ದೇಶಕಾಲ ಗುಣಗಳಿಂದ ವ್ಯಾಪ್ತನಾದ ಅಂದರೆ ಎಲ್ಲ ದೇಶ, ಎಲ್ಲ ಕಾಲಗಳಲ್ಲಿಯೂ ಇರುತ್ತ, ಗುಣ ಪರಿಪೂರ್ಣನಾದ ವಿಷ್ಣುನಾಮಕನಾದ ಪರಮಾತ್ಮನೇ ವಿಶೇಷ ರೀತಿಯಿಂದ ಶ್ರವಣ ಮನನಾದಿ ಸಾಧನಗಳಿಂದ ವಿಷಯೀಕರಿಸಲು ಯೋಗ್ಯನಾದವನು ಅಂದರೆ ಜಿಜ್ಞಾಸೆಗೆ ವಿಷಯನಾಗಿರುವನು. ಆ ವಿಷ್ಣುವೇ ಸಮಸ್ತ ಚೇತನಾಚೇತನಾತ್ಮಕವಾದ ಜಗತ್ತಿಗೆ ಸೃಷ್ಟ್ಯಾದಿ ಅಷ್ಟಕರ್ತನು. ಹಾಗೆಂದು ಸಕಲ ಸದಾಗಮಗಳಿಂದಲೂ ಹೇಳಲ್ಪಟ್ಟಿರುವನು ಆ ವಿಷ್ಣುವೇ ಆಗಿರುವನು. ಉಪಕ್ರಮಾದಿ ತಾತ್ಪರ್ಯ ನಿರ್ಣಾಯಕ ಲಿಂಗಗಳ ದ್ವಾರಾ ಸಕಲ ವೇದವಾಕ್ಯಗಳ ಸಮನ್ವಯದಿಂದ ಆ ವಿಷ್ಣುವೇ ಸರ್ವವೇದ ಪ್ರತಿಪಾದ್ಯನು. ಪ್ರತ್ಯಕ್ಷಾದಿಗಳಿಗೆ ಅಗೋಚರನಾಗಿದ್ದರೂ ಶಾಸ್ತ್ರಗಳ ಸಮನ್ವಯದಿಂದ ಗಳಿಸಿದ ಜ್ಞಾನದ ಮೂಲಕ ಆ ವಿಷ್ಣುವೇ ಸರ್ವಶಬ್ದವಾಚ್ಯನಾಗಿರುವನು. ಪರಿಪೂರ್ಣವಾದ ಆನಂದವುಳ್ಳವನಾಗಿರುವನು. ಎಲ್ಲರಿಗೂ ನಿಯಾಮಕನಾಗಿ ಎಲ್ಲರಿಂದಲೂ ಭಿನ್ನನಾಗಿ ಎಲ್ಲರಲ್ಲಿಯೂ ಇರುವವನು. ಆಕಾಶದಂತೆ ಅವಕಾಶವುಳ್ಳವನಾಗಿರುವನು. ಎಲ್ಲರಿಗೂ ಮುಖ್ಯವಾಗಿ ಜೀವನಪ್ರದನಾಗಿರುವನು. ಪ್ರಕಾಶರೂಪನಾಗಿರುವನು. ವಿಷ್ಣುವೊಬ್ಬನೇ ಸ್ವಾತಂತ್ರ್ಯ ಮೊದಲಾದ ಗುಣಗಳಿಂದ ಪೂರ್ಣನು ಹಾಗೂ ಎಲ್ಲ ಶಬ್ದಗಳ ಪ್ರವೃತ್ತಿ ನಿಮಿತ್ತತ್ವ ರೂಪ-ಧರ್ಮವುಳ್ಳವನು. ಆದ್ದರಿಂದ ಸಮಾಧಿಕ್ಯ ರಹಿತನಾದ ವಿಷ್ಣುವೇ ಜ್ಯೋತಿ ಇತ್ಯಾದಿ ಅನ್ಯ ವಸ್ತುಗಳಲ್ಲಿ ಪ್ರಸಿದ್ಧವಾದ ಎಲ್ಲ ನಾಮಾತ್ಮಕ ಶಬ್ದಗಳಿಂದ ಮುಖ್ಯವಾಗಿ ಹೇಳಲ್ಪಡುತ್ತಾನೆ. ಇದು ಮೊದಲನೆಯ ಪಾದದ ಸಾರ ಸಂಗ್ರಹವು.

## ದ್ವಿತೀಯ ಪಾದ

ಸರ್ವಗೋಽತ್ತಾ ನಿಯಂತಾ ಚ ದೃಶ್ಯತ್ವಾದ್ಯುಜ್ಝಿತಃ ಸದಾ ।
ವಿಶ್ವ ಜೀವಾಂತರತ್ವಾದ್ಯೈಃ ಲಿಂಗೈಃ ಸರ್ವೈಃ ಯುತಃ ಸ ಹಿ ॥೪॥

**ತಾತ್ಪರ್ಯ :** ಯಾವಾಗಲೂ ಸರ್ವಪ್ರಾಣಿಗಳ ಹೃದಯ ಗುಹೆಯಲ್ಲಿ ವಾಸವಾಗಿರುವನು. ಅಂದರೆ ಸರ್ವತ್ರ ವ್ಯಾಪ್ತನಾಗಿರುವನು. ಸರ್ವಸಂಹಾರಕನು

ಹಾಗೂ ಸರ್ವ ಶುಭಫಲ ಭೋಕ್ತೃವು. ಎಲ್ಲರ ಅಂತಸ್ಥನಾಗಿ ನಿಯಮನ ಮಾಡುವನು. ಮನಸ್ಸು, ಇಂದ್ರಿಯಾದಿಗಳಿಂದ ಸಂಪೂರ್ಣವಾಗಿ ತಿಳಿಯಲು ಅಶಕ್ಯನು. ವೇದಗಳಲ್ಲಿ ಪ್ರಸಿದ್ಧವಾದ ವೈಶ್ವಾನರಾದಿ ಶಬ್ದಗಳಿಂದ ತಿಳಿಯಲ್ಪಡುವ ವಿಶ್ವ ಜೀವಾಂತರತ್ವ ಮೊದಲಾದ ಅನ್ಯತ್ರ ಪ್ರಸಿದ್ಧವಾದ ಎಲ್ಲ ಲಿಂಗ ಅಂದರೆ ಧರ್ಮಗಳಿಂದಲೂ ಯುಕ್ತನಾಗಿರುವವನು ಆ ವಿಷ್ಣುವೊಬ್ಬನೇ. ಇದು ಪ್ರಮಾಣಸಿದ್ಧವು. ಆದ್ದರಿಂದ ಸರ್ವ ಲಿಂಗಾತ್ಮಕ ಶಬ್ದಗಳಿಂದ ವಿಷ್ಣುವೊಬ್ಬನೇ ವಾಚ್ಯನಾಗಿರುವನು. ಇದು ಎರಡನೆಯ ಪಾದದ ಸಾರಸಂಗ್ರಹವು.

## ತೃತೀಯ ಪಾದ

ಸರ್ವಾಶ್ರಯಃ ಪೂರ್ಣಗುಣಃ ಸೋಽಕ್ಷರಃ ಸನ್ ಹೃದಬ್ಜಗಃ ।
ಸೂರ್ಯಾದಿ ಭಾಸಕಃ ಪ್ರಾಣಪೇರಕೋ ದೈವತ್ಯೈರಪಿ ॥೫॥
ಜ್ಞೇಯೋ ನ ವೇದ್ಯೈಃ ಶೂದ್ರಾದ್ಯೈಃ ಕಂಪಕೋಽನ್ಯಶ್ಚ ಜೀವತಃ ।
ಪತಿತ್ವಾದಿ ಗುಣೈಃ ಯುಕ್ತಃ ತದನ್ಯತ್ರ ಚ ವಾಚಕೈಃ ॥೬॥
ಮುಖ್ಯತಃ ಸರ್ವ ಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ ।

**ತಾತ್ಪರ್ಯ :** ಶ್ರೀ ವಿಷ್ಣುವೇ ಸ್ವರ್ಗ, ಭೂಮಿ ಮೊದಲಾದ ಲೋಕಗಳಿಗೆ ಹಾಗೂ ಸಕಲ ಜಗತ್ತಿಗೆ ಆಧಾರನು. ಜ್ಞಾನಾನಂದಾದಿ ಗುಣಪೂರ್ಣನು. ಚತುರ್ವಿಧನಾಶ ರಹಿತನಾದ್ದರಿಂದ ವಿಷ್ಣುವೇ ಅಕ್ಷರ ಶಬ್ದವಾಚ್ಯನು. ದೋಷರಹಿತನೂ ಹಾಗೂ ಸ್ವತಂತ್ರನೂ ಆಗಿರುವುದರಿಂದ ಸತ್ ಶಬ್ದವಾಚ್ಯನು. ಎಲ್ಲರ ಹೃದಯ ಕಮಲದಲ್ಲಿ ವಾಸವಾಗಿರುವವನು. ಸೂರ್ಯಾದಿ ಸಕಲ ತೇಜೋಮಯ ವಸ್ತುಗಳಿಗೂ ಶ್ರೀ ವಿಷ್ಣುವೇ ಪ್ರಕಾಶವನ್ನು ನೀಡುವವನು. ಪ್ರಾಣಾದಿಗಳಿಗೆ ಪ್ರೇರಕನು. ದೇವತೆಗಳಿಂದಲೂ ಸಹ ವೇದಾದಿಗಳಿಂದ ತಿಳಿಯಲ್ಪಡತಕ್ಕವನು. ಶೂದ್ರಾದಿಗಳಿಂದ ವೇದಗಳಿಂದ ತಿಳಿಯಲು ಅಶಕ್ಯನು. ಸರ್ವ ಜೀವರಿಗೂ ಚೇಷ್ಟಕನು. ಎಲ್ಲರಿಂದಲೂ ವಿಲಕ್ಷಣನು. ಸರ್ವಾಧಿಪತಿತ್ವಾದಿ ಗುಣಗಳಿಂದ ಯುಕ್ತನು. ಪರಮಾತ್ಮನಲ್ಲಿಯೂ ಹಾಗೂ ಇತರ ವಸ್ತುಗಳಲ್ಲಿಯೂ

ವಾಚ್ಯಗಳಾದ ಎಲ್ಲ ಶಬ್ದಗಳಿಂದ ಪರಮ ಮುಖ್ಯ ವೃತ್ತಿಯಿಂದ ವಿಷ್ಣುವೊಬ್ಬನೇ ವಾಚ್ಯನು. ಇದು ತೃತೀಯ ಪಾದದ ಸಾರಸಂಗ್ರಹವು.

**ಚತುರ್ಥಪಾದ**

ಅವ್ಯಕ್ತಃ ಕರ್ಮವಾಕ್ಯೈ(ಚ್ಯೈ)ಶ್ಚ ವಾಚ್ಯ ಏಕೋ ಅಮಿತಾತ್ಮಕಃ ॥೭॥
ಅವಾಂತರಂ ಕಾರಣಂ ಚ ಪ್ರಕೃತಿಃ ಶೂನ್ಯಮೇವ ಚ ।
ಇತ್ಯಾದ್ಯನ್ಯತ್ರ ನಿಯತ್ಯೈರಪಿ ಮುಖ್ಯತಯೋದಿತಃ ।
ಶಬ್ದೈರತೋಽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ ॥೮॥

**ತಾತ್ಪರ್ಯ :** ಶ್ರೀ ವಿಷ್ಣುವು ಅವ್ಯಕ್ತನಾಗಿರುವವನು. ''ಜ್ಯೋತಿಷಾಂ ಯಜೇತ'' ಇವೇ ಮಾದಲಾದ ಕರ್ಮವಾಚಕ ಶಬ್ದಗಳಿಂದಲೂ ಪ್ರತಿಪಾದಿತನು. ಅದ್ವಿತೀಯನು ಹಾಗೂ ಸ್ವಗತಭೇದ ವಿವರ್ಜಿತನು. ಅಪರಿಮಿತವಾದ ರೂಪ ಗಳನ್ನು ಹೊಂದಿರುವವನು. ಕಾರ್ಯನೂ, ಕಾರಣನೂ ಆಗಿರುವನು. ಪ್ರಕೃಷ್ಟವಾದ ವ್ಯಾಪಾರವುಳ್ಳವನಾದ್ದರಿಂದ ಪ್ರಕೃತಿ ಶಬ್ದ ವಾಚ್ಯನು.

ದುರ್ಜನರಿಗೆ ಸುಖವನ್ನು ಕೊಡುವುದಿಲ್ಲವಾದ್ದರಿಂದ (ಶಂ ಊನಂ ಕುರುತೇ ಇತಿ ಶೂನ್ಯಂ) ಶೂನ್ಯ ಶಬ್ದವಾಚ್ಯನು. ಅಥವಾ ಶೂನ್ಯಂ ಅಂದರೆ ನಿಷೇಧಾರ್ಥಕಗಳಾದ ಎಲ್ಲ ಶಬ್ದಗಳಿಂದ ಹೇಳಲ್ಪಡುವವನು. ಹೀಗೆ ಅವ್ಯಕ್ತ ಪ್ರಕೃತಿ, ಶೂನ್ಯ ಇವೇ ಮೊದಲಾದ ವಿಷ್ಣುವಿನಿಂದ ಇತರವಾದವುಗಳಲ್ಲಿಯೇ ಪ್ರಸಿದ್ಧವಾದ ಎಲ್ಲ ಶಬ್ದಗಳಿಂದಲೂ ಪರಮಮುಖ್ಯ ವೃತ್ತಿಯಿಂದ ವಿಷ್ಣುವೊಬ್ಬನೇ ಹೇಳಲ್ಪಡುವನು. ಆದ್ದರಿಂದ (ಅಂದರೆ ಅನ್ಯತ್ರ, ಉಭಯತ್ರ ಹಾಗೂ ಅನ್ಯತ್ರೈವ ಪ್ರಸಿದ್ಧವಾದ ಎಲ್ಲ ಶಬ್ದಗಳಿಂದಲೂ ಪರಮಾತ್ಮನೇ ಮುಖ್ಯತಯಾ ವಾಚ್ಯ ನಾಗಿರುವುದರಿಂದ) ಪರಮಾತ್ಮನು ಅನಂತಗುಣ ಪರಿಪೂರ್ಣನಾಗಿರುವನು. ಏಕೆಂದರೆ ಶಬ್ದಗಳು ಮಹಾಯೋಗವೃತ್ತಿಯಿಂದ ಆಯಾವ ಧರ್ಮಗಳನ್ನು ಹಾಗೂ ಗುಣಗಳನ್ನು ಪರಮಾತ್ಮನಲ್ಲಿಯೇ ಹೇಳುತ್ತವೆ.

ಈ ಪಾದದಲ್ಲಿ ಪರಮಾತ್ಮನಿಂದ ಇತರವಾದ ವಸ್ತುಗಳಲ್ಲಿಯೇ ಪ್ರಸಿದ್ಧವಾದ ನಾಮ ಹಾಗೂ ಲಿಂಗಾತ್ಮಕಗಳಾದ ಎಲ್ಲ ಶಬ್ದಗಳೂ ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನೇ ಹೇಳುತ್ತವೆ ಎಂಬುದನ್ನು ಶ್ರೀಮದಾಚಾರ್ಯರು "ಇತ್ಯಾದಿ ಅನ್ಯತ್ರ ನಿಯತೈರಪಿ ಮುಖ್ಯತಯೋದಿತಃ' ಎಂಬ ವಾಕ್ಯದಿಂದ ಪ್ರತಿಪಾದಿಸಿರುವರು. ಶಬ್ದೈಃ ಅತೋ ಅನಂತಗುಣೋ ಯಚ್ಛಬ್ದಾ ಯೋಗವೃತ್ತಯಃ" ಎಂಬ ವಾಕ್ಯದಿಂದ ಪ್ರಥಮಾಧ್ಯಾಯದ ಸಾರವನ್ನು ಸಂಗ್ರಹಿಸಿರುವರು.

**॥ ಇಲ್ಲಿಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ವಿರಚಿತವಾದ ಅಣುಭಾಷ್ಯದ ಪ್ರಥಮಾಧ್ಯಾಯವು ಮುಕ್ತಾಯವಾಯಿತು ॥**



# ದ್ವಿತೀಯಾಧ್ಯಾಯ

## ಪ್ರಥಮಪಾದ

ಶ್ರೌತಸ್ಮೃತಿವಿರುದ್ಧತ್ವಾತ್ ಸ್ಮೃತಯೋ ನ ಗುಣಾನ್ ಹರೇಃ ।
ನಿಷೇದ್ಧುಂ ಶಕ್ನುಯುರ್ವೇದಾ ನಿತ್ಯತ್ವಾನ್ಮಾನಮುತ್ತಮಮ್ ॥೧॥
ದೇವತಾವಚನಾದಾಪೋ ವದಂತೀತ್ಯಾದಿಕಂ ವಚಃ ।
ನಾಯುಕ್ತವಾದ್ಯಸನ್ನೈವ ಕಾರಣಂ ದೃಶ್ಯತೇ ಕ್ವಚಿತ್ ॥೨॥
ಅಸಜ್ಜೀವ ಪ್ರಧಾನಾದಿ ಶಬ್ದಾ ಬ್ರಹ್ಮೈವ ನಾಪರಮ್ ।
ವದಂತಿ ಕಾರಣತ್ವೇನ ಕ್ವಾಪಿ ಪೂರ್ಣಗುಣೋ ಹರಿಃ ॥೩॥
ಸ್ವಾತಂತ್ರ್ಯಾತ್ ಸರ್ವಕರ್ತೃತ್ವಾತ್ ನಾಯುಕ್ತಂ ತದ್ವದೇತ್ ಶ್ರುತಿಃ ।

**ತಾತ್ಪರ್ಯ :** ಶ್ರುತ್ಯನುಸಾರಿಯಾದ ಪಂಚರಾತ್ರಾದಿ ಸ್ಮೃತಿಗಳಿಗೆ ವಿರುದ್ಧವಾದುದರಿಂದ, ಪಾಶುಪತಾದಿ ಸ್ಮೃತಿಗಳು ಪರಮಾತ್ಮನ ಗುಣಗಳನ್ನು ಅಲ್ಲಗಳೆಯಲು ಸಮರ್ಥವಾಗುವುದಿಲ್ಲ. ಏಕೆಂದರೆ ವೇದಗಳು ನಿತ್ಯವಾದುದರಿಂದ ಉತ್ಕೃಷ್ಟವಾದ ಪ್ರಬಲ ಪ್ರಮಾಣಗಳು. (ಪಂಚರಾತ್ರಾದಿ ಸ್ಮೃತಿಗಳೂ ಪ್ರಮಾಣವಾದವುಗಳೇ ಆಗಿವೆ. ಏಕೆಂದರೆ ಅವುಗಳು ವೇದಗಳಿಗೆ ಅನುಸಾರಿಯಾಗಿವೆ.)

'ನೀರು ಮಾತನಾಡುತ್ತದೆ' ಇವೇ ಮೊದಲಾದ ವೇದವಾಕ್ಯಗಳು ಮೇಲ್ನೋಟಕ್ಕೆ ಅಯುಕ್ತವೆಂದು ಕಂಡರೂ, ಅವು ಆಯಾ ಅಭಿಮಾನಿ ದೇವತೆಗಳನ್ನು ಕುರಿತು ಹೇಳುತ್ತವೆಯಾದ್ದರಿಂದ ಪ್ರಮಾಣವೇ ಹೊರತು ಅಯುಕ್ತವಲ್ಲ. ಅಸತ್ತು ಎಲ್ಲಿಯೂ ಯಾವಕಾಲದಲ್ಲಿಯೂ ಯಾವುದಕ್ಕೂ ಕಾರಣವಾಗಿ ತೋರುವುದಿಲ್ಲ. ಆದ ಪ್ರಯುಕ್ತ ಅಸತ್, ಜೀವ, ಪ್ರಧಾನ ಇತ್ಯಾದಿ ಶಬ್ದಗಳು ವಿಷ್ಣುವನ್ನೇ ಜಗತ್ತಿಗೆ ಕಾರಣನೆಂದು ಹೇಳುತ್ತವೆ. ವಿಷ್ಣುವಿನಿಂದ ಇತರವಾದ ಯಾವುದೂ ಎಲ್ಲಿಯೂ ಜಗತ್ತಿಗೆ ಕಾರಣವೆಂದು ಕಂಡುಬಂದಿಲ್ಲ. ಹಾಗೆಂದು ವೇದಗಳಲ್ಲಿಯೂ ಹೇಳಿಲ್ಲ. ಸ್ವಾತಂತ್ರ್ಯ, ಸರ್ವಕರ್ತೃತ್ವ ಇತ್ಯಾದಿ ಗುಣಗಳಿಂದ ಪರಿಪೂರ್ಣನಾದ ಶ್ರೀಹರಿಯೇ ಜಗತ್ಕಾರಣನು. ಶ್ರುತಿಯು ಯುಕ್ತಿಗೆ ವಿರುದ್ಧವಾದುದನ್ನು ಎಂದಿಗೂ ಪ್ರತಿಪಾದಿಸುವುದಿಲ್ಲ.

ಈ ಪ್ರಕಾರವಾಗಿ ಎರಡನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಶ್ರೀಮದಾಚಾರ್ಯರು ಬ್ರಹ್ಮಸೂತ್ರಗಳಿಗನುಸಾರವಾಗಿ ಶ್ರೀಹರಿಯ ಅನಂತಗುಣ ಪೂರ್ಣತ್ವಕ್ಕೆ ಅಡ್ಡಿ ಬರಬಹುದಾದ ಯುಕ್ತಿವಿರೋಧವನ್ನು ಪರಿಹರಿಸಿರುವರು.

## ದ್ವಿತೀಯ ಪಾದ

ಭ್ರಾಂತಿ ಮೂಲತಯಾ ಸರ್ವಸಮಾಯಾನಾಮಯುಕ್ತಿತಃ ||೪||
ನ ತದ್ವಿರೋಧಾದ್ವಚನಂ ವೈದಿಕಂ ಶಂಕ್ಯತಾಂ ವ್ರಜೇತ್ ।

**ತಾತ್ಪರ್ಯ:** ಶ್ರೀಬಾದರಾಯಣರ ಸಿದ್ಧಾಂತವನ್ನು ಹೊರತುಪಡಿಸಿ ಇತರ ಸಾಂಖ್ಯಾದಿ ಸರ್ವಸಮಯ ದರ್ಶನಗಳೂ ಭ್ರಾಂತಿಮೂಲವಾದವುಗಳು ಹಾಗೂ ಭ್ರಾಂತಿಯನ್ನು ಹುಟ್ಟಿಸುವಂಥವುಗಳು. ಆದ್ದರಿಂದ ಯುಕ್ತಿಗೆ ವಿರುದ್ಧವಾದವುಗಳು. ಅಂಥಹ ಅಯುಕ್ತವಾದ ದುಷ್ಟ ಸಮಯಗಳಿಗೆ ವಿರೋಧ ಬರುತ್ತದೆ ಎಂಬ ಕಾರಣದಿಂದ ಶ್ರುತಿವಾಕ್ಯಗಳು ಅಪ್ರಾಮಾಣ್ಯತಾ ಶಂಕಾವನ್ನು ಎಂದಿಗೂ ಹೊಂದಲಾರವು.

ಹೀಗೆ ಎರಡನೆಯ ಅಧ್ಯಾಯದ ಎರಡನೆಯ ಪಾದದಲ್ಲಿ ಸಮಯ

ವಿರೋಧವು ಪರಿಹೃತವಾಗಿರುವುದು. ಈ ಸಮಯ ವಿರೋಧವು ಅಪ್ರಾಮಾಣಿಕವಾದುದರಿಂದ ಪರಮಾತ್ಮನ ಗುಣಪರಿಪೂರ್ಣತ್ವಕ್ಕೆ ಯಾವುದೇ ರೀತಿಯಲ್ಲಿ ಅಡ್ಡಿಯಾಗಲಾರದು ಎಂದು ತಾತ್ಪರ್ಯ.

## ತೃತೀಯಪಾದ

ಆಕಾಶಾದಿ ಸಮಸ್ತಂ ಚ ತಜ್ಜಂ ತೇನ್ನೈವ ಲೀಯತೇ ॥೫॥
ಸೋऽನುತ್ಪತ್ತಿಲಯಃ ಕರ್ತಾ ಜೀವಃ ತದ್ವಶಗಃ ಸದಾ ।
ತದಾಭಾಸೋಹರಿಃ ಸರ್ವರೂಪೇಷ್ವಪಿ ಸಮಃ ಸದಾ ॥೬॥

**ತಾತ್ಪರ್ಯ :** ಆಕಾಶಾದಿ ಪಂಚಮಹಾಭೂತಗಳು, ತದಭಿಮಾನಿ ದೇವತೆಗಳು ಇವೆಲ್ಲವೂ ಆ ಪರಮಾತ್ಮನಿಂದಲೇ ಸೃಷ್ಟಿಯಾಗಿವೆ ಮತ್ತು ಅವನಿಂದಲೇ ಲಯವನ್ನು ಹೊಂದುತ್ತವೆ. ಆ ಪರಮಾತ್ಮನಾದರೂ ಉತ್ಪತ್ತಿ ನಾಶರಹಿತನಾಗಿರುವನು. ಸ್ವತಂತ್ರ ಕರ್ತೃವಾಗಿರುವನು. ಜೀವನು ಯಾವಾಗಲೂ ಪರಮಾತ್ಮನ ವಶದಲ್ಲಿಯೇ ಇದ್ದು ಪರಮಾತ್ಮನ ಅಧೀನನಾಗಿಯೇ ಕರ್ತೃತ್ವವುಳ್ಳವನಾಗಿರುವನು. ಜೀವನು ಯಾವಾಗಲೂ ಪರಮಾತ್ಮನಿಗೆ ಪ್ರತಿಬಿಂಬರೂಪನಾಗಿರುವನು. ಪರಮಾತ್ಮನಾದರೂ ಮತ್ಸ್ಯಾದಿ ಎಲ್ಲ ಅವತಾರ ರೂಪಗಳಲ್ಲಿಯೂ ಮೂಲರೂಪದಲ್ಲಿಯೂ ಒಂದೇ ಸಮನಾಗಿರುವನು. ಅಂದರೆ ಯಾವಾಗಲೂ ಸ್ವಗತಭೇದವಿವರ್ಜಿತನು ಎಂದರ್ಥ.

ಹೀಗೆ ಎರಡನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಪರಸ್ಪರ ಶ್ರುತಿ ವಿರೋಧವು ಪರಿಹರಿಸಲ್ಪಟ್ಟಿದೆ. ಪರಮಾತ್ಮನ ಗುಣಪರಿಪೂರ್ಣತ್ವವನ್ನು ಪ್ರತಿಪಾದಿಸುವುದರಲ್ಲಿ ಕೆಲವು ಶ್ರುತಿಗಳು ಆಪಾತತಃ ವಿರೋಧವನ್ನು ಹೇಳುವಂತೆ ಕಂಡರೂ ಸರಿಯಾಗಿ ಪರಾಮರ್ಶಿಸಿದಾಗ ಯಾವುದೇ ಶ್ರುತಿಯೂ ಪರಮಾತ್ಮನ ಗುಣಪರಿಪೂರ್ಣತ್ವ ವಿಷಯದಲ್ಲಿ ವಿರುದ್ಧವಾದುದನ್ನು ಹೇಳುವುದಿಲ್ಲ. ಎಲ್ಲ ಶ್ರುತಿಯ ಅಭಿಪ್ರಾಯವೂ ಪರಮಾತ್ಮನು ಗುಣಪರಿಪೂರ್ಣನು ಹಾಗೂ ದೋಷದೂರನು ಎಂಬ ವಿಷಯದಲ್ಲಿ ಏಕರೂಪವಾಗಿರುವುದು ಎಂದು ತಿಳಿಯತಕ್ಕದ್ದು.

**ಚತುರ್ಥಪಾದ**

ಮುಖ್ಯಪ್ರಾಣಶ್ಚೇಂದ್ರಿಯಾಣಿ ದೇಹಶ್ಚೈವ ತದುದ್ಭವಃ ।
ಮುಖ್ಯಪ್ರಾಣವಶೇ ಸರ್ವಂ ಸ ವಿಷ್ಣೋರ್ವಶಗಃ ಸದಾ ॥೭॥
ಸರ್ವದೋಷೋಜ್ಝಿತಃ ತಸ್ಮಾತ್ ಭಗವಾನ್ ಪುರುಷೋತ್ತಮಃ ।
ಉಕ್ತಾ ಗುಣಾಶ್ಚಾऽವಿರುದ್ಧಾಸ್ತಸ್ಯ ವೇದೇಷು ಸರ್ವಶಃ ॥೮॥

**ತಾತ್ಪರ್ಯ :** ಮುಖ್ಯಪ್ರಾಣನು ಪರಮಾತ್ಮನಿಂದಲೇ ಉತ್ಪತ್ತಿಯುಳ್ಳವನು ಹಾಗೂ ಇಂದ್ರಿಯಗಳೂ, ಅದರಂತೆ ದೇಹಾದಿಗಳೂ ಅಂದರೆ ನಾಮರೂಪಾತ್ಮಕ ಪ್ರಪಂಚವೂ ಕೂಡ ಪರಮಾತ್ಮನಿಂದಲೇ (ಅವನ ಅಧೀನವಾಗಿಯೇ) ಉತ್ಪತ್ತಿಯನ್ನು ಹೊಂದುತ್ತವೆ. ರುದ್ರಾದಿ ಸಮಸ್ತ ಪ್ರಪಂಚವೂ ಮುಖ್ಯಪ್ರಾಣನ ವಶದಲ್ಲಿರುವುದು. ಆ ಮುಖ್ಯಪ್ರಾಣನಾದರೂ ಯಾವಾಗಲೂ ವಿಷ್ಣುವಿನ ಅಧೀನದಲ್ಲಿಯೇ ತನ್ನ ಚೇಷ್ಟಾದಿಗಳನ್ನು (ವಿಷ್ಣುವಿನ ಇಚ್ಛೆಯಂತೆಯೇ) ಮಾಡುವನು. ಆದ್ದರಿಂದ, ಇದುವರೆಗೆ ಪ್ರತಿಪಾದನೆ ಮಾಡಿರುವ ಪ್ರಕಾರದಲ್ಲಿ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲವಾದುದರಿಂದ, ಪರಮಾತ್ಮನು ಸರ್ವದೋಷ ವಿವರ್ಜಿತನಾಗಿರುವನು. ಷಡ್ಗುಣೈಶ್ವರ್ಯ ಸಂಪನ್ನನಾದ ಭಗವಾನ್ ಶಬ್ದವಾಚ್ಯನಾದ ಶ್ರೀಹರಿಯು ಸರ್ವೋತ್ತಮನಾಗಿರುವನು. ವೇದಗಳಿಂದ ಹೇಳಲ್ಪಟ್ಟ ಆ ವಿಷ್ಣುವಿನ ಸಮಸ್ತವಾದ ಜ್ಞಾನ, ಆನಂದಾದಿ ಗುಣಗಳು, ಜಗತ್‌ಸೃಷ್ಟ್ಯಾದಿ ಸಕಲ ಗುಣಗಳೂ ಕೂಡ ಯುಕ್ತ್ಯಾದಿಗಳಿಂದ ಅವಿರುದ್ಧವಾಗಿರುವವು ಎಂಬ ಮಹತ್ತರವಾದ (ಸಾಧನೆಗೆ ಅವಶ್ಯವಾದ) ಪ್ರಮೇಯವು ಸಿದ್ಧವಾಗುತ್ತದೆ.

ಹೀಗೆ ಎರಡನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಪರಮಾತ್ಮನ ಜಗತ್‌ಕರ್ತೃತ್ವ, ಗುಣಪರಿಪೂರ್ಣತ್ವಗಳಿಗೆ ಸಂಭವಿಸಬಹುದಾದ ಯುಕ್ತಿಸಹಿತ ಶ್ರುತಿ ವಿರೋಧವು ಪರಿಹರಿಸಲ್ಪಟ್ಟಿದೆ.

**॥ ಇಲ್ಲಿಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ವಿರಚಿತವಾದ ಅಣುಭಾಷ್ಯದ ಎರಡನೆಯ ಅಧ್ಯಾಯವು ಮುಕ್ತಾಯವಾಯಿತು ॥**

# ತೃತೀಯಾಧ್ಯಾಯ

## ಪ್ರಥಮ ಪಾದ

ಶುಭೇಣ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ ।
ಮಿಥ್ಯಾಜ್ಞಾನೇನ ಚ ತಮೋ ಜ್ಞಾನೇನೈವ ಪರಂಪದಮ್ ॥೧॥
ಯಾತಿ ತಸ್ಮಾದ್ ವಿರಕ್ತಃ ಸನ್ ಜ್ಞಾನಮೇವ ಸಮಾಶ್ರಯೇತ್ ।

**ತಾತ್ಪರ್ಯ :** ಜೀವನು ಯಜ್ಞಾದಿ ಶುಭಕರ್ಮಗಳನ್ನು ಮಾಡುವುದರಿಂದ ಮರಣಾನಂತರದಲ್ಲಿ ಸ್ವರ್ಗವನ್ನು ಕುರಿತು ಹೋಗುತ್ತಾನೆ. (ಶುಭಕರ್ಮ ಭೋಗಾನಂತರ ಪುನಃ ಭೂಮಿಗೆ ವಾಪಸ್ಸು ಬರುತ್ತಾನೆ). ಸ್ವೋಚಿತ ಕರ್ಮಗಳನ್ನು ಮಾಡದೇ ಶಾಸ್ತ್ರವಿಹಿತವಾದ ಕರ್ಮಗಳಿಗೆ ವಿರುದ್ಧವಾದ ಕರ್ಮಗಳನ್ನು ಮಾಡುವುದರಿಂದ ನರಕವನ್ನು ಹೊಂದುತ್ತಾನೆ. ಮಿಥ್ಯಾಜ್ಞಾನದಿಂದ (ಅಯಥಾರ್ಥ ಜ್ಞಾನದಿಂದ) ಅಂಧಂತಮಸ್ಸನ್ನು (ನಿತ್ಯನರಕವನ್ನು) ಹೊಂದುತ್ತಾನೆ. ಯಥಾರ್ಥ ಜ್ಞಾನದಿಂದಲೇ ಶ್ರೇಷ್ಠವಾದ ಮೋಕ್ಷ ಪದವಿಯನ್ನು ಹೊಂದುತ್ತಾನೆ. ಆದ್ದರಿಂದ ವೈರಾಗ್ಯಾದಿ ಸಂಪನ್ನನಾಗಿ, ಶ್ರವಣ, ಮನನ ನಿಧಿಧ್ಯಾಸನಗಳಿಂದ ಸಹಿತನಾಗಿ ಯಥಾರ್ಥವಾದ ಅಂದರೆ ಮೋಕ್ಷಪ್ರದವಾದ ಜ್ಞಾನವನ್ನೇ ಚೆನ್ನಾಗಿ ಆಶ್ರಯ ಮಾಡಬೇಕು ಎಂದು ತಾತ್ಪರ್ಯ.

ಹೀಗೆ ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಪಾದದಲ್ಲಿ ಸಾಧನೆಯ ಮೊದಲ ಹಂತವಾದ ವೈರಾಗ್ಯದ ಅವಶ್ಯಕತೆಯನ್ನು ನಿರೂಪಿಸಿದ್ದಾರೆ.

## ದ್ವಿತೀಯ ಪಾದ

ಸರ್ವಾವಸ್ಥಾ ಪ್ರೇರಕಶ್ಚ ಸರ್ವರೂಪೇಷು ಅಭೇದವಾನ್ ॥೨॥
ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ ।
ತದ್ಭಕ್ತಿ ತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್ ॥೩॥

**ತಾತ್ಪರ್ಯ :** ಜೀವನ ಜಾಗ್ರತಾದಿ ಎಲ್ಲ ಅವಸ್ಥೆಗಳಿಗೂ ಪರಮಾತ್ಮನೇ ಪ್ರೇರಕನು. ಸಕಲ ರೂಪಗಳಲ್ಲಿ (ಅನಂತಾನಂತ ಜೀವರಲ್ಲಿ), ಸಕಲ ದೇಶಗಳಲ್ಲಿ

ಹಾಗೂ ಸಕಲ ಕಾಲಗಳಲ್ಲಿಯೂ ಕೂಡ ಸರ್ವಪ್ರೇರಕನಾದ ಪರಮಾತ್ಮನು ಏಕಪ್ರಕಾರನಾಗಿ ವಿಕಾರರಹಿತನಾಗಿದ್ದು ಒಬ್ಬನೇ ಆಗಿರುವನು. ಅವನ ರೂಪ ರೂಪಗಳಲ್ಲಿ ಯಾವುದೇ ರೀತಿಯ ಭೇದವಿರುವುದಿಲ್ಲ. ಮೋಕ್ಷಾಧಿಕಾರಿಗಳು ಪರಮಾತ್ಮನಲ್ಲಿ ಮಾಡುವ ಭಕ್ತ್ಯಾದಿಗಳಲ್ಲಿ ಅವರವರ ಯೋಗ್ಯತಾನುಸಾರವಾಗಿ ತಾರತಮ್ಯವಿರುವುದರಿಂದ ಭಕ್ತಿಯ ಫಲವಾದ ಮೋಕ್ಷದಲ್ಲಿಯೂ ಆನಂದಾದಿ ತಾರತಮ್ಯವಿರುವುದು.

ಹೀಗೆ ಮೂರನೆಯ ಅಧ್ಯಾಯದ ಎರಡನೆಯ ಪಾದದಲ್ಲಿ ಸಾಧನೆಯ ಎರಡನೆಯ ಹಂತವಾದ ಭಕ್ತಿ ಹುಟ್ಟಲು ಅತ್ಯವಶ್ಯಕವಾದ ಪರಮಾತ್ಮನ ಮಾಹಾತ್ಮ್ಯ ಜ್ಞಾನವನ್ನು ನಿರೂಪಿಸಿದ್ದಾರೆ. ಏಕೆಂದರೆ ಮಾಹಾತ್ಮ್ಯ ಜ್ಞಾನ ಪೂರ್ವಕವಾಗಿ ಪರಮಾತ್ಮನಲ್ಲಿ ಮಾಡುವ ಪರಮ ಸ್ನೇಹ ಅಂದರೆ ಪ್ರೀತಿಯನ್ನೇ ಭಕ್ತಿ ಎನ್ನುವರು.

## ತೃತೀಯ ಪಾದ

ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು ಸುರೇಶ್ವರೈಃ ।
ಯಥಾಕ್ರಮಂ ಬಹುಗುಣೈಃ ಬ್ರಹ್ಮಣಾ ತು ಅಖಿಲೈಃ ಗುಣೈಃ ॥೪॥
ಉಪಾಸ್ಯಃ ಸರ್ವವೇದೈಶ್ಚ ಸರ್ವೈರಪಿ ಯಥಾಬಲಮ್ ।
ಜ್ಞೇಯೋ ವಿಷ್ಣುಃ ವಿಶೇಷೈಸ್ತು ಜ್ಞಾನೇ ಸ್ಯಾದುತ್ತರೋತ್ತರಮ್ ॥

**ತಾತ್ಪರ್ಯ :** ಶ್ರೀವಿಷ್ಣುವು ನಿರ್ದೋಷನು (ಸತ್), ಜ್ಞಾನಸ್ವರೂಪನು (ಚಿತ್), ಆನಂದಸ್ವರೂಪನು, ಸ್ವಾಮಿಯು (ಆತ್ಮಾ) ಎಂಬುದಾಗಿ ಮನುಷ್ಯ ರಿಂದಲೂ, ದೇವತೆಗಳಿಂದ ಅವರವರ ಅಧಿಕಾರ ಯೋಗ್ಯತಾನುಸಾರವಾಗಿಯೂ, ನಾಲ್ಕು ಅಥವಾ ಅದಕ್ಕಿಂತ ಹೆಚ್ಚಿನ ಗುಣಗಳಿಂದಲೂ ಉಪಾಸ್ಯನು. ಚತುರ್ಮುಖ ಬ್ರಹ್ಮನಾದರೋ ವೇದೋಕ್ತವಾದ ಸಕಲಗುಣಗಳಿಂದಲೂ ಶ್ರೀವಿಷ್ಣುವನ್ನು ಉಪಾಸನೆ ಮಾಡಬೇಕು. ಎಲ್ಲ ಅಧಿಕಾರಿಗಳಿಂದಲೂ ಶ್ರೀವಿಷ್ಣುವು ಸರ್ವವೇದ ಗಳಿಂದಲೂ ಅವರವರ ಯೋಗ್ಯತಾನುಸಾರವಾಗಿ ತಿಳಿಯಲ್ಪಡತಕ್ಕವನು.

ಪರಮಾತ್ಮನ ಅಪರೋಕ್ಷ ಜ್ಞಾನದ ವಿಷಯದಲ್ಲಿ ಮನುಷ್ಯರನ್ನು ಮೊದಲು ಮಾಡಿಕೊಂಡು ಬ್ರಹ್ಮದೇವರ ಪರ್ಯಂತ ಉತ್ತರೋತ್ತರವಾಗಿ ಜ್ಞಾನದಲ್ಲಿ ಹಾಗೂ ಫಲದಲ್ಲಿ ವಿಶೇಷವಿರುವುದು. ಆ ವಿಶೇಷಕ್ಕೆ ತಕ್ಕಂತೆ ಬಿಂಬಾಪರೋಕ್ಷದಲ್ಲಿ ವಿಶೇಷವಿರುವುದರಿಂದ ಫಲರೂಪವಾದ ಮೋಕ್ಷದಲ್ಲಿಯೂ ವಿಶೇಷವಿರುವುದು.

ಹೀಗೆ ತೃತೀಯ ಅಧ್ಯಾಯದ ಮೂರನೆಯ ಪಾದದಲ್ಲಿ ಉಪಾಸನೆಯಲ್ಲಿನ ವಿಶೇಷವನ್ನು ವಿವರಿಸಿರುವರು.

## ಚತುರ್ಥಪಾದ

ಸರ್ವೇಽಪಿ ಪುರುಷಾರ್ಥಾಃ ಸ್ಯುಃ ಜ್ಞಾನಾದೇವ ನ ಸಂಶಯಃ ।
ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್ ॥೬॥
ಗುಣದೋಷೈಃ ಸುಖಸ್ಯಾಪಿ ವೃದ್ಧಿಹ್ರಾಸೌ ವಿಮುಕ್ತಿಗೌ ।
ನೃಣಾಂ ಸುರಾಣಾಂ ಮುಕ್ತೌ ತು ಸುಖಂ ಕ್ಲೃಪ್ತಂ ಯಥಾಕ್ರಮಮ್ ॥

**ತಾತ್ಪರ್ಯ :** ಎಲ್ಲ ಪುರುಷಾರ್ಥಗಳೂ ಜ್ಞಾನದಿಂದಲೇ ಸಿದ್ಧಿಸುವುವು. ಈ ವಿಷಯದಲ್ಲಿ ಯಾವುದೇ ಸಂಶಯವಿಲ್ಲ. ಅಪರೋಕ್ಷಜ್ಞಾನಿಗೆ ಜ್ಞಾನೋತ್ಪತ್ತಿಯ ನಂತರ ಸಂಭವಿಸಬಹುದಾದ ಸರ್ವದೋಷಗಳಿಂದಲೂ ಯಾವ ಲೇಪವೂ ಇರುವುದಿಲ್ಲ. ಅಂದರೆ ಆ ದೋಷಗಳ ನಿಮಿತ್ತದಿಂದ ಮೋಕ್ಷದ ಅಭಾವ ಉಂಟಾಗುವುದಿಲ್ಲ. ಅಪರೋಕ್ಷ ಜ್ಞಾನಿಗಳಾದ ಮನುಷ್ಯರಿಗೆ ಜ್ಞಾನಾನಂತರ ಮಾಡುವ ಸತ್ ಮತ್ತು ಅಸತ್ ವೃತ್ತಿಗಳ ನಿಮಿತ್ತವಾಗಿ ಮುಕ್ತಿಯಲ್ಲಿ ಆನಂದಕ್ಕೆ ವೃದ್ಧಿಹ್ರಾಸಗಳು ಉಂಟಾಗುವವು. ದೇವತೆಗಳಿಗಾದರೋ ಅವರವರ ಯೋಗ್ಯತಾನುಸಾರವಾಗಿ ಮುಕ್ತಿಯಲ್ಲಿ ನಿಯತವಾದ ಸುಖವಿರುವುದು.

ಹೀಗೆ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಅಪರೋಕ್ಷ ಜ್ಞಾನದ ಸಾಮರ್ಥ್ಯ ವಿಶೇಷಗಳನ್ನು ವಿವರಿಸಿದ್ದಾರೆ. ಅಪರೋಕ್ಷ ಜ್ಞಾನಿಗೆ ಮೋಕ್ಷವು ನಿಶ್ಚಿತ. ಇಂಥಹ ಅಪರೋಕ್ಷ ಜ್ಞಾನಕ್ಕೆ ಗುಣಪರಿಪೂರ್ಣನಾದ ದೋಷದೂರನಾದ

ಪರಮಾತ್ಮನೇ ವಿಷಯನಾಗಿರುವನು ಎಂಬುದೇ ಮೂರನೆಯ ಅಧ್ಯಾಯದ ಸಾರಾಂಶ.

**॥ ಇಲ್ಲಿಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ವಿರಚಿತವಾದ ಶ್ರೀ ಅಣುಭಾಷ್ಯದ ಮೂರನೆಯ ಅಧ್ಯಾಯವು ಮುಕ್ತಾಯವಾಯಿತು ॥**



# ಚತುರ್ಥಾಧ್ಯಾಯ

## ಪ್ರಥಮ ಪಾದ

ವಿಷ್ಣುರ್ಬ್ರಹ್ಮ ತಥಾಽಽದಾತೇತ್ಯೇವಂ ನಿತ್ಯಮುಪಾಸನಮ್ ।
ಕಾರ್ಯಮಾಪದ್ಯಪಿ ಬ್ರಹ್ಮ ತೇನ ಯಾತ್ಯಪರೋಕ್ಷತಾಮ್ ॥೧॥
ಪ್ರಾರಬ್ಧ ಕರ್ಮಣೋಽನ್ಯಸ್ಯ ಜ್ಞಾನಾದೇವ ಪರಿಕ್ಷಯಃ ।
ಅನಿಷ್ಟಸ್ಯೋಭಯಸ್ಯಾಪಿ ಸರ್ವಸ್ಯಾನ್ಯಸ್ಯ ಭೋಗತಃ ॥೨॥

**ತಾತ್ಪರ್ಯ :** ಶ್ರೀವಿಷ್ಣುವು ಗುಣಪರಿಪೂರ್ಣನು (ಬ್ರಹ್ಮ) ಹಾಗೂ ಸ್ವಾಮಿಯು (ದಾತಾ) ಅಥವಾ ಎಲ್ಲವನ್ನೂ ಕೊಡುವವನು (ಆದಾತಾ) ಈ ಪ್ರಕಾರವಾಗಿಯೇ ಯಾವಾಗಲೂ, ಆಪತ್ಕಾಲದಲ್ಲಿಯೂ ಸಹ, ನಿಯತವಾಗಿ ಉಪಾಸನೆಯನ್ನು ಮಾಡತಕ್ಕದ್ದು. ಹೀಗೆ ನಿರಂತರವಾಗಿ ಭಕ್ತ್ಯಾದಿಗಳಿಂದ ಉಪಾಸನೆ ಮಾಡುವುದರಿಂದ ಪರಬ್ರಹ್ಮನು ಸಂತುಷ್ಟನಾಗುವುದರಿಂದ ಸಾಧಕನಾದ ಅಧಿಕಾರಿಯು ಪರಬ್ರಹ್ಮನ ಸಾಕ್ಷಾತ್ಕಾರವನ್ನು ಹೊಂದುವನು. (ಅಂದರೆ ಅಪರೋಕ್ಷ ಜ್ಞಾನದ್ವಾರಾ ಮೋಕ್ಷವನ್ನು ಹೊಂದುವನು ಎಂದು ತಾತ್ಪರ್ಯ). ಪುಣ್ಯ – ಪಾಪ ಉಭಯವಾಗಿರತಕ್ಕ ಸಂಚಿತ – ಆಗಾಮಿ ಎಂಬ ಎರಡು ರೀತಿಯ ಕರ್ಮಗಳಿಂದ ವ್ಯತಿರಿಕ್ತವಾಗಿರತಕ್ಕ ಅನುಭವಿಸಲೇ ಬೇಕಾಗಿರತಕ್ಕಂಥ ಸಮಸ್ತವಾದ ಪ್ರಾರಬ್ಧ ಕರ್ಮಕ್ಕೆ ಭೋಗದಿಂದಲೇ ನಾಶವು. ಪ್ರಾರಬ್ಧ ಕರ್ಮವ್ಯತಿರಿಕ್ತವಾದ ಉಭಯ ರೀತಿಯಾದ ಅನಿಷ್ಟವಾದ ಎಲ್ಲ ಕರ್ಮಕ್ಕೂ ಜ್ಞಾನದಿಂದಲೇ ನಾಶವು.

ಹೀಗೆ ನಾಲ್ಕನೆಯ ಅಧ್ಯಾಯದ ಪ್ರಥಮ ಪಾದದಲ್ಲಿ ಅಪರೋಕ್ಷ ಜ್ಞಾನದಿಂದ ಲಭಿಸುವ ಪ್ರಥಮ ಫಲವೇ ಕರ್ಮನಾಶ ಎಂಬುದನ್ನು ನಿರೂಪಿಸಿದ್ದಾರೆ.

## ದ್ವಿತೀಯ ಪಾದ

ಉತ್ತರೇಷೂತ್ತರೇಷ್ವೇವಂ ಯಾವದ್ವಾಯುಂ ವಿಮುಕ್ತಿಗಾಃ ।
ಪ್ರವಿಶ್ಯ ಭುಂಜತೇ ಭೋಗಾನ್ ತದಂತರ್ಬಹಿರೇವ ವಾ ॥೩॥
ವಾಯುರ್ವಿಷ್ಣುಂ ಪ್ರವಿಶ್ಯೈವ ಭೋಗಶ್ಚೈವೋತ್ತರೋತ್ತರಮ್ ।
ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ ದೇಹಕ್ಷಯಾತ್ ಸುರಾಃ ॥೪॥

**ತಾತ್ಪರ್ಯ** : ಮುಕ್ತಿಯನ್ನು ಹೊಂದುವ ದೇವತೆಗಳು ವಾಯುದೇವರ ಪರ್ಯಂತವಾಗಿ ಉತ್ತರೋತ್ತರವಾಗಿ ತಮಗಿಂತ ಉತ್ತಮರಾದ ದೇವತೆಗಳಲ್ಲಿ ಲಯವನ್ನು ಹೊಂದುವರು. ಈ ಪ್ರಕಾರವಾಗಿ ವಾಯುವನ್ನು (ಅಂದರೆ ಚತುರ್ಮುಖ ಬ್ರಹ್ಮನನ್ನು) ಪ್ರವೇಶಿಸಿದ ಅವರು ಅವನ ಒಳಗೂ ಹಾಗೂ ಹೊರಗೂ ಭೋಗಗಳನ್ನು ಅನುಭವಿಸುತ್ತಾರೆ. ಚತುರ್ಮುಖ ಬ್ರಹ್ಮನು ವಿಷ್ಣುವನ್ನು ಪ್ರವೇಶಿಸಿ ಸಮಸ್ತವಾದ ಭೋಗಗಳನ್ನು ಹೊಂದುವರು. ದೇವತೆಗಳು ಅವರವರ ಯೋಗ್ಯತಾ ತಾರತಮ್ಯಕ್ಕೆ ಅನುಗುಣವಾಗಿ ಉತ್ತರೋತ್ತರವಾಗಿ ಅಧಿಕವಾದ ಭೋಗವನ್ನು ಅನುಭವಿಸುವರು.

ದೇಹಕ್ಷಯದಿಂದ ದೇವತೆಗಳೂ, ಮಾರ್ಗಗತಿ ಸ್ಮೃತಿಯೊಂದಿಗೆ ಬ್ರಹ್ಮನಾಡಿಯಿಂದ ಉತ್ಕ್ರಮಿಸುವ ಮೂಲಕ ಮನುಷ್ಯೋತ್ತಮರೂ ಮೋಕ್ಷವನ್ನು ಹೊಂದುವರು.

ಹೀಗೆ ನಾಲ್ಕನೆಯ ಅಧ್ಯಾಯದ ಎರಡನೆಯ ಪಾದದಲ್ಲಿ ದೇವತೆಗಳ ಹಾಗೂ ಮನುಷ್ಯೋತ್ತಮರ ಮುಕ್ತಿಯ ಕ್ರಮವನ್ನು (ಉತ್ಕ್ರಮಣವನ್ನು) ತಿಳಿಸುತ್ತಾರೆ.

## ತೃತೀಯ ಪಾದ

ಅರ್ಚಿರಾದಿ ಪಥಾ ವಾಯುಂ ಪ್ರಾಪ್ಯ ತೇನ ಜನಾರ್ದನಮ್ ।
ಯಾಂತ್ಯುತ್ತಮಾ ನರೋಚ್ಚಾದ್ಯಾ ಬ್ರಹ್ಮಲೋಕಾತ್ ಸಹಾಽಮುನಾ ॥೫॥

**ತಾತ್ಪರ್ಯ** : ಉತ್ತಮರಾದ ದೇವತೆಗಳು ಅರ್ಚಿರಾದಿ ಮಾರ್ಗ ದ್ವಾರಾ

ವಾಯುದೇವರನ್ನು ಹೊಂದಿ ಜನಾರ್ದನನನ್ನು ಹೊಂದುತ್ತಾರೆ. ಮನುಷ್ಯೋತ್ತಮರು ಬ್ರಹ್ಮಲೋಕವನ್ನು ಹೊಂದಿ, ಬ್ರಹ್ಮನಿಂದ ಕೂಡಿಕೊಂಡು (ಪ್ರಲಯ ಕಾಲದಲ್ಲಿ) ಜನಾರ್ದನನನ್ನು ಹೊಂದುತ್ತಾರೆ. (ಜನ್ಮಾದಿಗಳಿಂದ ಕೂಡಿದ ಸಂಸಾರವನ್ನು ಮರ್ದನ ಮಾಡಿ ಮೋಕ್ಷವನ್ನು ಹೊಂದಿಸುವುದರಿಂದ ಶ್ರೀಹರಿಯು ಜನಾರ್ದನ ಶಬ್ದವಾಚ್ಯನು).

ಈ ಪ್ರಕಾರವಾಗಿ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಜ್ಞಾನಿಗಳಿಗೆ ಬ್ರಹ್ಮಪ್ರಾಪ್ತಿಯ ಮಾರ್ಗವನ್ನು ತಿಳಿಸಿರುವರು.

**ಚತುರ್ಥಪಾದ**

ಯಥಾ ಸಂಕಲ್ಪ ಭೋಗಾಶ್ಚ ಚಿದಾನಂದ ಶರೀರಣಃ ।
ಜಗತ್ ಸೃಷ್ಟ್ಯಾದಿ ವಿಷಯೇ ಮಹಾಸಾಮರ್ಥ್ಯಮಪಿ ಋತೇ ॥೬॥
ಯಥೇಷ್ಟ ಶಕ್ತಿಮಂತಶ್ಚ ವಿನಾ ಸ್ವಾಭಾವಿಕೋತ್ತಮಾನ್ ।
ಅನನ್ಯವಶಗಾಶ್ಚೈವ ವೃದ್ಧಿ ಹ್ರಾಸ ವಿವರ್ಜಿತಾಃ ॥
ದುಃಖಾದಿ ರಹಿತಾ ನಿತ್ಯಂ ಮೋದಂತೇऽವಿರತಂ ಸುಖಮ್ ॥೭॥

**ತಾತ್ಪರ್ಯ :** ಶ್ರೀಹರಿಯನ್ನು ಪ್ರವೇಶಿಸಿದ ಮುಕ್ತರು ಭಗವದಿಚ್ಛೆಗೆ ಅನುಸಾರಿಯಾದ ತಮ್ಮ ಇಚ್ಛೆಗೆ ತಕ್ಕಂತೆ ಯಥೇಷ್ಟವಾದ ಭೋಗಗಳನ್ನು ಹೊಂದುವರು. ಚಿದಾನಂದಾತ್ಮಕವಾದ ಶರೀರವುಳ್ಳವರಾಗಿರುವರು. ಪರಮಾತ್ಮ ನಿಂದಲೇ ಸಾಧ್ಯವಾಗುವ ಜಗತ್ ಸೃಷ್ಟಿ ಮೊದಲಾದ ಮಹಾಸಾಮರ್ಥ್ಯವನ್ನು ಹೊರತುಪಡಿಸಿ ಇನ್ನಿತರ ಸಮಸ್ತವಾದ ಸ್ವಯೋಗ್ಯವಾದ ವಿಷಯಗಳಲ್ಲಿ ಯಥೇಷ್ಟ ವಾದ ಶಕ್ತಿಯನ್ನು ಹೊಂದಿರುವರು. ಸ್ವರೂಪತಃ ತಮಗಿಂತಲೂ ಉತ್ತಮರಾದವ ರನ್ನು ಹೊರತುಪಡಿಸಿ ಬೇರೆ ಯಾರಿಗೂ ಅವರು ಅಧೀನರಾಗಿರುವುದಿಲ್ಲ. (ಇದರಿಂದ ಮುಕ್ತಿಯಲ್ಲಿ ತಾರತಮ್ಯವಿದೆ ಎಂಬುದು ದೃಢವಾಗುತ್ತದೆ). ಮುಕ್ತರು ಈ ಪ್ರಕಾರವಾಗಿ ವೃದ್ಧಿ ಹ್ರಾಸಗಳಿಲ್ಲದ ಅಪರಿಮಿತವಾದ ದುಃಖಾದಿರಹಿತವಾದ ಮೋಕ್ಷಾನಂದವನ್ನು ಯಾವಾಗಲೂ ಸಂತೋಷದಿಂದ ಭೋಗ ಮಾಡುತ್ತಿರುತ್ತಾರೆ.

ಈ ಪ್ರಕಾರವಾಗಿ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಮಾರ್ಗಭೇದದಿಂದ ಪರಮಾತ್ಮನನ್ನು ಹೊಂದಿದ ಮುಕ್ತರ ಭೋಗವನ್ನು ವಿವರಿಸಿರುವರು. ಇಂಥಹ ಪುನರಾವೃತ್ತಿಯಿಲ್ಲದ ಅವಿರತವಾದ ಸ್ವಯೋಗ್ಯ ಆನಂದಾನುಭವ ರೂಪವಾದುದೇ ಮೋಕ್ಷವು.

**ಇಲ್ಲಿಗೆ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದ ಮುಕ್ತಾಯವಾಯಿತು.**



## ಅಂತ್ಯ ಮಂಗಲ ಶ್ಲೋಕಗಳು

ಪೂರ್ಣಪ್ರಜ್ಞೇನ ಮುನಿನಾ ಸರ್ವಶಾಸ್ತ್ರಾರ್ಥ ಸಂಗ್ರಹಃ ।
ಕೃತೋಽಯಂ ಪ್ರೀಯತಾಂ ತೇನ ಪರಮಾತ್ಮಾ ರಮಾಪತಿಃ ॥೮॥

ಸಕಲ ಶಾಸ್ತ್ರಾರ್ಥ ಸಂಗ್ರಹರೂಪವಾದ ಅಣುಭಾಷ್ಯವೆಂಬ ಈ ಗ್ರಂಥವು ಪೂರ್ಣಪ್ರಜ್ಞರೆಂಬ ಮುನಿಗಳಿಂದ ವಿರಚಿಸಲ್ಪಟ್ಟಿದೆ. ಈ ಗ್ರಂಥದ ಸಮರ್ಪಣೆಯಿಂದ ರಮಾಪತಿಯಾದ ಪರಮಾತ್ಮನು ಸುಪ್ರೀತನಾಗಲಿ.

ನಮೋ ನಮೋ ಅಶೇಷದೋಷದೂರಪೂರ್ಣಗುಣಾತ್ಮನೇ ।
ವಿರಿಂಚಶರ್ವ ಪೂರ್ವೇಡ್ಯ ವಂದ್ಯಾಯ ಶ್ರೀವರಾಯ ತೇ ॥೯॥

ಸಕಲ ದೋಷಗಳಿಂದ ರಹಿತನೂ, ಅನಂತ ಕಲ್ಯಾಣಗುಣಪರಿಪೂರ್ಣನೂ, ಬ್ರಹ್ಮರುದ್ರಾದಿ ದೇವಶ್ರೇಷ್ಠರಿಂದ ವಂದಿತನೂ ಆದ ಶ್ರೀ ಲಕ್ಷ್ಮೀಪತಿಯಾದ ನಾರಾಯಣನಿಗೆ ಅನಂತಾನಂತ ನಮಸ್ಕಾರಗಳು.

ಪರಮಾತ್ಮನ ಗುಣ ಪರಿಪೂರ್ಣತ್ವ ಹಾಗೂ ದೋಷದೂರತ್ವ ರೂಪವಾದ ಯಥಾರ್ಥವಾದ ಜ್ಞಾನವನ್ನು ಶ್ರವಣ ಮನನಾದಿಗಳಿಂದ ಹೊಂದಿ, ವೈರಾಗ್ಯ, ಭಕ್ತ್ಯಾದಿಗಳ ಮೂಲಕ ಯಥಾರ್ಥವಾದ ಸ್ವಯೋಗ್ಯ ಉಪಾಸನೆಯನ್ನು ಮಾಡಬೇಕು. ಆಗ ಪರಮಾತ್ಮನು ಪ್ರಸನ್ನನಾಗಿ ಅಪರೋಕ್ಷ ಜ್ಞಾನವನ್ನು ನೀಡಿ, ಕರ್ಮಾದಿಗಳನ್ನು ಭೋಗ, ಜ್ಞಾನಾದಿಗಳಿಂದ ನಾಶಮಾಡಿ, ಅಧಿಕಾರಿಗಳ

ಯೋಗ್ಯತಾನುಸಾರ ಪ್ರಾಕೃತ ದೇಹಾದಿಗಳಿಂದ ಉತ್ಕ್ರಮಣ ಮಾಡಿ, ತನ್ನಲ್ಲಿ ಕರೆದುಕೊಳ್ಳುವನು. ಪುನರಾವೃತ್ತಿ ರಹಿತವಾದ ಮೋಕ್ಷವನ್ನು ನೀಡುವನು. ಆದ್ದರಿಂದ ಬ್ರಹ್ಮ ಜಿಜ್ಞಾಸೆಯನ್ನು ಅವಶ್ಯ ಮಾಡಬೇಕು. ಈ ಪ್ರಕಾರವಾಗಿ ''ಅಥಾತೋ ಬ್ರಹ್ಮ ಜಿಜ್ಞಾಸಾ'' ಎಂಬ ಸೂತ್ರದಿಂದ ಪ್ರಾರಂಭಿಸಿ ''ನ ಚ ಪುನರಾವರ್ತತೇ ನ ಚ ಪುನರಾವರ್ತತೇ'' ಎಂದ ಸೂತ್ರದವರೆಗೆ ಶ್ರೀಭಗವಾನ್ ಬಾದರಾಯಣರು ನೀಡಿರುವ ಮೀಮಾಂಸಾ ಶಾಸ್ತ್ರದ ಸಾರವನ್ನು ಶ್ರೀಮನ್ ಮಧ್ವಾಚಾರ್ಯರು ಸರ್ವಶಾಸ್ತ್ರಾರ್ಥ ಸಂಗ್ರಹ ರೂಪವಾದ ''ಬ್ರಹ್ಮಸೂತ್ರಾಣು ಭಾಷ್ಯ'' ಎಂಬ ಈ ಚಿಕ್ಕ ಗ್ರಂಥದಲ್ಲಿ ಕೇವಲ 32 ಶ್ಲೋಕಗಳಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ. ಶ್ರೀಮದಾಚಾರ್ಯರು ತಮ್ಮ ಭಕ್ತರ ಮೇಲೆ ಮಾಡಿರುವ ಅಪಾರವಾದ ಈ ಅನುಗ್ರಹಕ್ಕೆ ನಾವು ಎಷ್ಟು ಭಕ್ತಿ ಆದರಗಳಿಂದ ನಿರಂತರ ಸ್ಮರಣೆಯೊಂದಿಗೆ ವಂದನೆ ಮಾಡಿದರೂ ಸಾಲದು. ''ಆಚಾರ್ಯಾ ಶ್ರೀಮದಾಚಾರ್ಯಾ ಸಂತು ಮೇ ಜನ್ಮ ಜನ್ಮನಿ''.

**॥ ಇಲ್ಲಿಗೆ ಅಂಗಾರ ಕುಲೋತ್ಪನ್ನ ಶ್ರೀನಿವಾಸಮೂರ್ತಿಯವರ ಸುಪುತ್ರ ಶ್ರೀ ವೆಂಕಟೇಶಮೂರ್ತಿಯು ಸಂಗ್ರಹಿಸಿ ಅನುವಾದಿಸಿರುವ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ ಅಣುಭಾಷ್ಯದ ಶ್ಲೋಕತಾತ್ಪರ್ಯಚಂದ್ರಿಕಾವು ಮುಕ್ತಾಯವಾಯಿತು ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**



॥ ಶ್ರೀ ಗುರುಭ್ಯೋ ನಮಃ ಹರಿಃ ಓಂ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ

# ಅಣುಭಾಷ್ಯ

## ಭಾಗ – ೨

## ಅಧಿಕರಣತಾತ್ಪರ್ಯಚಂದ್ರಿಕಾ

ಶ್ರೀಮಧ್ವಾಚಾರ್ಯರು ಶ್ರೀಬಾದರಾಯಣ ವಿರಚಿತ ವೇದಾರ್ಥ ನಿರ್ಣಾಯಕವಾದ ಬ್ರಹ್ಮಸೂತ್ರಗಳಿಗೆ ಭಾಷ್ಯ, ಅನುವ್ಯಾಖ್ಯಾನ ಮತ್ತು ನ್ಯಾಯವಿವರಣವೆಂಬ ಮೂರು ಗ್ರಂಥಗಳಿಂದ ವಿಸ್ತಾರವಾಗಿ ಅರ್ಥವಿವರಣೆಯನ್ನು ನೀಡುವುದರ ಮೂಲಕ ತರ್ಕಬದ್ಧವಾಗಿ ಇತರರ ಅಪವ್ಯಾಖ್ಯಾನಗಳನ್ನು ಚೆನ್ನಾಗಿ ನಿರಾಕರಿಸಿ ಸತ್ ಸಿದ್ಧಾಂತವನ್ನು ಸ್ಥಾಪಿಸುವ ಮೂಲಕ ಯಥಾರ್ಥವಾದ ವೇದಾರ್ಥವನ್ನು ತಿಳಿಯಪಡಿಸಿದರು. ಈ ವ್ಯಾಖ್ಯಾನಗಳು ಅತಿ ವಿಸ್ತಾರವಾದುದರಿಂದ ಮಂದಬುದ್ಧಿಯ ಸಜ್ಜನರಿಗೆ ಸುಲಭವಾಗಿ ವೈದಿಕ ಸಿದ್ಧಾಂತವನ್ನು ತಿಳಿಯಪಡಿಸುವ ಸಲುವಾಗಿ ಶ್ರೀ ಮದಾಚಾರ್ಯರು ಮತ್ತೊಂದು ಚಿಕ್ಕ ಗ್ರಂಥವನ್ನು ರಚಿಸಿ ಕೇವಲ ೩೨ ಶ್ಲೋಕಗಳಲ್ಲಿ ೫೬೪ ಸೂತ್ರಗಳನ್ನೊಳಗೊಂಡ ೨೨೨ ಅಧಿಕರಣಗಳ ಮಥಿತಾರ್ಥವನ್ನು ಸಂಗ್ರಹಿಸಿ ನೀಡಿರುವರು. ಗಾತ್ರದಲ್ಲಿ ಚಿಕ್ಕದಾದರೂ ಅತ್ಯಂತ ಮಹತ್ವವಾದ ಅಧಿಕರಣಾರ್ಥ ಸಂಗ್ರಹವಾದ ಈ ಗ್ರಂಥವೇ ಅಣುಭಾಷ್ಯವು. ಬಾಲಕ ರೂಪದಲ್ಲಿದ್ದ ಶ್ರೀಕೃಷ್ಣನು ತನ್ನ ಪುಟ್ಟ ಬಾಯಿಯಲ್ಲಿ ಇಡೀ ಬ್ರಹ್ಮಾಂಡವನ್ನೇ ಯಶೋದೆಗೆ ತೋರಿಸಿದಂತೆ ಈ ಗ್ರಂಥವು ಶ್ರೀಮದಾಚಾರ್ಯರ ಮುಖಕಮಲದಿಂದ ಹೊರಬಿದ್ದಿದೆ. ಹೀಗೆಂದು ಶ್ರೀಮಧ್ವವಿಜಯದಲ್ಲಿ ಶ್ರೀಪಂಡಿತಾಚಾರ್ಯರು ಇದರ ಮಹತ್ವವನ್ನು ಹೇಳಿದ್ದಾರೆ. ಅನೇಕ ಸಜ್ಜನರು ಇಡೀ ಸೂತ್ರಭಾಷ್ಯವನ್ನು ನಿತ್ಯವೂ ಬೆಳಿಗ್ಗೆ ಊಟಕ್ಕೆ ಮುಂಚೆ ಪಾರಾಯಣ ಮಾಡುವ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಸಾಧನೆ

ದ್ವಾದಶಿ ಇತ್ಯಾದಿ ಅವಸರವಿದ್ದಾಗ ಇಡೀ ಭಾಷ್ಯದ ಪಾರಾಯಣ ಸಾಧ್ಯವಾಗುವುದಿಲ್ಲ. ಅಂಥಹ ದಿನಗಳಲ್ಲಿ ಅತ್ಯಲ್ಪ ಸಮಯದಲ್ಲಿ ಇಡೀ ಸೂತ್ರಭಾಷ್ಯವನ್ನು ಸಂಗ್ರಹವಾಗಿ ಅರ್ಥ ಸಹಿತ ಪಾರಾಯಣ ಮಾಡಲು ಸಾಧ್ಯವಾಗುವಂತೆ ಶ್ರೀಮದಾಚಾರ್ಯರು ಅಣುಭಾಷ್ಯವನ್ನು ರಚಿಸಿಕೊಟ್ಟಿದ್ದಾರೆ. ಭಕ್ತರ ಮೇಲೆ ಶ್ರೀಮದಾಚಾರ್ಯರು ತೋರಿಸಿರುವ ಮಹಾನುಗ್ರಹಕ್ಕೆ ಭೂಯೋ ಭೂಯೋ ನಮಸ್ಕಾರಗಳು.

ಶ್ರೀಮದಾಚಾರ್ಯರಿಗೆ ಯಾವುದೇ ವಿಘ್ನಗಳಿಲ್ಲದಿದ್ದರೂ ತಮ್ಮಶಿಷ್ಯರಿಗೆ ಗ್ರಂಥದ ನಿರ್ವಿಘ್ನ ಸಮಾಪ್ತಿಗಾಗಿ ಶ್ರೀಮನ್ನಾರಾಯಣನನ್ನು ಸ್ಮರಿಸುವ ಮೂಲಕ ಮಂಗಲವನ್ನು ಆಚರಿಸುವುದು ಅತ್ಯವಶ್ಯಕ ಎಂದು ಶಿಕ್ಷಣ ನೀಡಲು ಭಾಷ್ಯದ ಮಂಗಲ ಶ್ಲೋಕವನ್ನೇ ಈ ಗ್ರಂಥದ ಪ್ರಾರಂಭದಲ್ಲಿಯೂ ಪುನರುಚ್ಚರಿಸಿದ್ದಾರೆ.

**ಮಂಗಲ ಶ್ಲೋಕ :**

ನಾರಾಯಣಂ ಗುಣೈಸ್ಸರ್ವೈಃ ಉದೀರ್ಣಂ ದೋಷವರ್ಜಿತಂ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥೧॥

**ವಿವರಣೆ :**

ಗ್ರಂಥದ ಪ್ರಾರಂಭದಲ್ಲಿ ಹರಿ ಗುರುಗಳನ್ನು ಸ್ಮರಿಸುವುದರೊಂದಿಗೇನೆ ಆ ಗ್ರಂಥದಲ್ಲಿ ತಾವು ಪ್ರಸ್ತುತಪಡಿಸಲಿರುವ ವಿಷಯವನ್ನು ಸಂಗ್ರಹವಾಗಿ ನಿರೂಪಿಸುವುದು ಶ್ರೀಮದಾಚಾರ್ಯರ ಗ್ರಂಥಗಳ ಮಂಗಲ ಶ್ಲೋಕಗಳ ವೈಶಿಷ್ಟ್ಯ.

ಸಂಕ್ಷೇಪ ವಿಸ್ತಾರಾಭ್ಯಾಂ ಚ ಪ್ರವದಂತಿ ಮನೀಷಿಣಃ ।
ಬಹುವಾರ ಸ್ಮೃತೇಸ್ತಸ್ಯ ಫಲಬಾಹುಲ್ಯಕಾರಣಾತ್ ॥

ಎಂಬ ಆರ್ಯೋಕ್ತಿಯಂತೆ ಶ್ರೀಮದಾಚಾರ್ಯರು ಗ್ರಂಥರಚನೆಯಲ್ಲಿ ಸಿದ್ಧಹಸ್ತರು.

ಅಧಿಕಾರ, ಫಲ, ಹಾಗೂ ಪ್ರತಿಪಾದ್ಯವಾದ ವಸ್ತುವನ್ನು ಸ್ಮರಿಸಿ ಯಾವ ಗ್ರಂಥವು ಪ್ರಾರಂಭಿಸಲ್ಪಡುತ್ತದೋ ಅದರಿಂದ ಪ್ರಸನ್ನನಾಗಿ ಶ್ರೀಹರಿಯು ಮಹತ್ತರವಾದ ಫಲವನ್ನು ಕರುಣಿಸುತ್ತಾನೆ ಎಂಬುದಾಗಿ ವಾಮನ ಪುರಾಣ ಹೇಳುತ್ತದೆ —

ಅಧಿಕಾರಂ ಫಲಂ ಚೈವ ಪ್ರತಿಪಾದ್ಯಂ ಚ ವಸ್ತು ಯತ್ ।
ಸ್ಮೃತ್ವಾ ಪ್ರಾರಭತೋ ಗ್ರಂಥಂ ಕರೋತೀಶೋ ಮಹತ್ ಫಲಮ್॥

ಈ ಮಂಗಲ ಶ್ಲೋಕದ ಮೂಲಕ ಶ್ರೀಮದಾಚಾರ್ಯರು ಏನನ್ನು ಹೇಳಿದ್ದಾರೆ ಎಂಬುದನ್ನು ಸ್ವಲ್ಪ ವಿವೇಚನೆ ಮಾಡೋಣ :

ಯಾವುದೇ ವಿದ್ಯೆಯು ಫಲಿಸಬೇಕಾದ ಪಕ್ಷದಲ್ಲಿ ಪ್ರತಿಪಾದ್ಯ ದೇವತೆಯನ್ನು ಹಾಗೂ ಗುರುವನ್ನೂ ಗೌರವಾದಾರಗಳಿಂದ ಸ್ಮರಿಸುವುದು ಶಿಷ್ಟಾಚಾರ. ಅದರಂತೆಯೇ ಶ್ರೀಮದಾಚಾರ್ಯರು ತಮ್ಮ ಇಷ್ಟದೇವತೆಯೂ, ಗುರುವೂ, ಅಧ್ಯಾಯಚತುಷ್ಟಯ ಪ್ರತಿಪಾದ್ಯ ವಿಶಿಷ್ಟ ದೇವತೆಯೂ ಆಗಿರುವ ಶ್ರೀಮನ್ನಾರಾಯಣನನ್ನು ನಮಸ್ಕರಿಸುತ್ತಾರೆ.

ಶ್ರೀಮನ್ನಾರಾಯಣನನ್ನು ನಮಸ್ಕರಿಸಿ ಸೂತ್ರಾರ್ಥವನ್ನು ವಿವರಿಸುತ್ತೇನೆ ಎಂದು ಇಲ್ಲಿ ಹೇಳುತ್ತಿದ್ದಾರೆ. ಆ ನಾರಾಯಣನು ಎಂಥಹ ಮಹಾಮಹಿಮನೆಂಬುದನ್ನು ವಿಶೇಷಣಗಳಿಂದ ಸೂಚಿಸುತ್ತಾರೆ. ನಾರಾಯಣನು ಜ್ಞಾನ, ಆನಂದ, ಮುಂತಾದ ಅನಂತ ಗುಣಗಳಿಂದ ಪರಿಪೂರ್ಣನು. ಚಿಂತೆ, ಸಂತಾಪ ಮುಂತಾದ ಸಮಸ್ತ ದೋಷ ರಹಿತನು, ಅಪರೋಕ್ಷಜ್ಞಾನದಿಂದ ಸಜ್ಜನರಿಂದ ತಿಳಿಯಲ್ಪಡತಕ್ಕವನು ಹಾಗೂ ಹೊಂದಲ್ಪಡತಕ್ಕವನು. ಆಚಾರ್ಯಮಧ್ವರಿಗೆ ವೇದವ್ಯಾಸರೂಪದಿಂದ ಗುರುವೂ ಅವನೇ. ಗುರುಗಳಿಗೆ ಗೌರವಸೂಚಕವಾಗಿ ಇಲ್ಲಿ ಗುರೂನ್ ಎಂಬ ಬಹುವಚನವನ್ನು ಪ್ರಯೋಗಿಸಿದ್ದಾರೆ. 'ಅಪಿ' ಪದದಿಂದ ತಮಗೆ ದೇವತೆಯೂ ಗುರುವೂ ನಾರಾಯಣನೊಬ್ಬನೇ ಎಂಬುದನ್ನು ಸೂಚಿಸಿದ್ದಾರೆ.

ಈ ಮಂಗಲ ಶ್ಲೋಕದಲ್ಲಿ ಪಂಚರೂಪಿಯಾದ ಹಾಗೂ ಗುರುವೂ ಆಗಿರುವ ನಾರಾಯಣನನ್ನು ನಮಸ್ಕರಿಸಿದ್ದಾರೆ. ಉತ್ಕೃಷ್ಟ ಜ್ಞಾನಾನಂದಾದಿ ಗುಣಗಳಿಂದ ಕೂಡಿದ ಸಮುದ್ರ ಶಾಯಿಯಾದ ವಾಸುದೇವನು "ಗುಣೋದೀರ್ಣಂ" ಶಬ್ದದಿಂದ ಸೂಚಿತ.

ಚೆನ್ನಾಗಿ ದೋಷಗಳನ್ನು ಕರ್ಷಿಸುವ (ಸಮ್ಯಗ್‌ದೋಷಕರ್ಷಣಮ್) ಸಂಕರ್ಷಣ ರೂಪಿಯಾದ ನಾರಾಯಣನು 'ದೋಷವರ್ಜಿತ' ಶಬ್ದದಿಂದ ಸೂಚಿತ. ಉತ್ತಮವಾದ ಜ್ಞಾನದಿಂದ ತಿಳಿಯಲ್ಪಡುವನಾದ್ದರಿಂದ (ಪ್ರಕೃಷ್ಟದ್ಯುತಿ ಮೇಯತ್ವಾತ್) ಪ್ರದ್ಯುಮ್ನ ರೂಪಿಯಾದ ನಾರಾಯಣನೇ ಜ್ಞೇಯ ಶಬ್ದವಾಚ್ಯನು. ಅಪರೋಕ್ಷಜ್ಞಾನ ಬಂದಮೇಲೆ ಮುಂದೆ ಮೋಕ್ಷಕ್ಕೆ ಪ್ರತಿರೋಧವು ಬಾರದಂತೆ ರಕ್ಷಿಸಿ ಫಲವನ್ನು ನೀಡುವವನು (ಜ್ಞಾನೇ ಪ್ರಾಪ್ತಿ ನಿರೋಧರಹಿತ್ವಾತ್) ಅನಿರುದ್ಧ ರೂಪಿ ನಾರಾಯಣನೇ ಗಮ್ಯಶಬ್ದವಾಚ್ಯನು. ಜ್ಞಾನಕ್ಕೆ ಆಶ್ರಯನಾದ್ದರಿಂದ ನಾರಾಯಣ (ಜ್ಞಾನಾಶ್ರಯತ್ವೇನ ನಾರಾಯಣ ಶಬ್ದವಾಚ್ಯಃ). ಹೀಗೆ ಪಂಚರೂಪಿ ಯಾದ ನಾರಾಯಣನನ್ನು ಇಲ್ಲಿ ನೀಡಿರುವ ವಿಶೇಷಣಗಳಿಂದ ಶ್ರೀಮದಾಚಾರ್ಯರು ನಮಸ್ಕರಿಸಿದ್ದಾರೆ.

ಇಲ್ಲಿ ಕೊಟ್ಟಿರುವ ಎಲ್ಲ ವಿಶೇಷಣಗಳೂ ನಾರಾಯಣ ಶಬ್ದಾರ್ಥ ರೂಪಗಳೂ, ನಾಲ್ಕು ಅಧ್ಯಾಯಗಳ ಅರ್ಥ ಸಂಗ್ರಹ ರೂಪಗಳೂ ಆಗಿವೆ ಎಂದು ತಿಳಿಯಬೇಕು.

ಜ್ಞೇಯತ್ವ, ಗಮ್ಯತ್ವಗಳು ತಿಳಿಯಲ್ಪಡತಕ್ಕವ ಹಾಗೂ ಹೊಂದಲ್ಪಡ ತಕ್ಕವನನ್ನು ಅಪೇಕ್ಷಿಸುವುದರಿಂದ ಅದಕ್ಕೆ ಯೋಗ್ಯವಾದ ಹಾಗೂ ಅಪೇಕ್ಷಿತನಾದ ಅಧಿಕಾರಿಯು ಇಲ್ಲಿ ಜ್ಞೇಯಂ ಗಮ್ಯಂ ಶಬ್ದಗಳಿಂದ ಸೂಚಿತನಾಗಿದ್ದಾನೆ.

ನಾರಾಯಣನೇ ಇಲ್ಲಿಯ ವಿಷಯನು. ಜ್ಞಾನವನ್ನು ಹೊಂದುವುದೇ ಪ್ರಯೋಜನ. ಯಥಾಯೋಗ್ಯವಾದುದೇ ಸಂಬಂಧ. ಈ ರೀತಿ ಇಲ್ಲಿ ಅನುಬಂಧ ಚತುಷ್ಟಯವು ನಿರೂಪಿತವಾಗಿದೆ.

'ಗುಣೈಃ ಸರ್ವೈಃ ಉದೀರ್ಣಂ' ಎಂಬುದು ಮೊದಲನೆಯ ಅಧ್ಯಾಯದ ಸಂಗ್ರಹ. 'ದೋಷವರ್ಜಿತಂ' ಎಂಬುದು ಎರಡನೆಯ ಅಧ್ಯಾಯದ ಸಂಗ್ರಹ. 'ಜ್ಞೇಯಂ' 'ಗಮ್ಯಂ' ಎಂಬ ವಿಶೇಷಣಗಳು ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯಗಳ ಸಾರವನ್ನು ಸಂಗ್ರಹಿಸುತ್ತವೆ.

ಹೀಗೆ ನಾನಾ ಪ್ರಕಾರವಾಗಿ ಮಂಗಲ ಶ್ಲೋಕಕ್ಕೆ ಅನೇಕ ವ್ಯಾಖ್ಯಾನಕಾರರು ವಿವರಣೆ ನೀಡಿದ್ದಾರೆ. ಗ್ರಂಥ ವಿಸ್ತಾರ ಭಯದಿಂದ ಮಂಗಲ ಶ್ಲೋಕದ ವ್ಯಾಖ್ಯಾನವನ್ನು ಇಲ್ಲಿಗೆ ಮುಕ್ತಾಯಗೊಳಿಸುತ್ತ "ವಿಷ್ಣುರೇವ ವಿಜಿಜ್ಞಾಸ್ಯಃ" ಇತ್ಯಾದಿಯಾಗಿ ಪ್ರಾರಂಭಿಸಿ ಜಿಜ್ಞಾಸಾಧಿಕರಣ ಮೊದಲ್ಗೊಂಡು ಎಲ್ಲ ಅಧಿಕರಣಗಳ ಅರ್ಥವನ್ನು ಶ್ರೀಮದಾಚಾರ್ಯರು ಎಷ್ಟು ಸುಂದರವಾಗಿ ಕೆಲವೇ ಶಬ್ದಗಳಿಂದ ಸಂಗ್ರಹಿಸಿದ್ದಾರೆ ಎಂಬುದನ್ನು ವಿವೇಚನೆ ಮಾಡೋಣ.

## ಮೊದಲನೆಯ ಅಧ್ಯಾಯ

ಮೊದಲನೆಯ ಅಧ್ಯಾಯದಲ್ಲಿ ನಾಮಾತ್ಮಕ ಹಾಗೂ ಲಿಂಗಾತ್ಮಕವಾದ ಎಲ್ಲ ಶಬ್ದಗಳನ್ನೂ ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ. ಇದರಿಂದ ಭಗವಾನ್ ವಿಷ್ಣುವು ಸಕಲಶಬ್ದವಾಚ್ಯನೆಂಬ ಪ್ರಮೇಯವು ನಿರ್ಣೀತವಾಗುತ್ತದೆ.

## ಮೊದಲನೆಯ ಪಾದ

ಈ ಪಾದದಲ್ಲಿ ಅನ್ಯತ್ರ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ.

### ಅಧಿಕರಣ – ೧

### ॥ ಜಿಜ್ಞಾಸಾಧಿಕರಣ ॥

### ॥ ಓಂ ಅಥಾತೋ ಬ್ರಹ್ಮ ಜಿಜ್ಞಾಸಾ ಓಂ ॥

**ತಾತ್ಪರ್ಯ :** ಅಥ – ವೇದಾಧ್ಯಯನ ಶಮದಮಾದಿ ರೂಪ ಅಧಿಕಾರ

ವನ್ನು ಹೊಂದಿದ ನಂತರ, ಅತಃ– ಮೋಕ್ಷಾಖ್ಯ ರೂಪವಾದ ಪ್ರಯೋಜನವಿರುವುದರಿಂದ, ಬ್ರಹ್ಮ ಜಿಜ್ಞಾಸಾ (ಕರ್ತವ್ಯಃ) – ಬ್ರಹ್ಮನ ಜಿಜ್ಞಾಸೆಯು ಅಂದರೆ ಶ್ರವಣ ಮನನಾದಿ ರೂಪ ವಿಚಾರವು ಮಾಡತಕ್ಕದ್ದು.

'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಜಿಜ್ಞಾಸಾಕರ್ತವ್ಯತಾ ಸಮರ್ಥನೆಯೇ ಈ ಅಧಿಕರಣದ ವಿಷಯ. ಬ್ರಹ್ಮ ಶಬ್ದವು ಜೀವ, ಜಾತಿ, ಕಮಲಾಸನಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ, ಇಲ್ಲಿ ಜೀವನಾಗಲೀ, ಚತುರ್ಮುಖ ಬ್ರಹ್ಮನಾಗಲೀ ಜಿಜ್ಞಾಸೆಗೆ ವಿಷಯನೆಂದು ಹೇಳಲ್ಪಟ್ಟಿಲ್ಲ. ''ಅಥ ಕಸ್ಮಾದುಚ್ಯತೇ ಬ್ರಹ್ಮೇತಿ, ಬೃಹಂತೋ ಹ್ಯಸ್ಮಿನ್ ಗುಣಾಃ'' ಎಂಬುದಾಗಿ ಶ್ರುತಿಯಲ್ಲಿ ಉಕ್ತವಾಗಿರುವ ಪ್ರಕಾರ ಗುಣಪರಿಪೂರ್ಣತ್ವವೇ ಇಲ್ಲಿ ಉಕ್ತವಾಗಿರುವ ಬ್ರಹ್ಮ ಶಬ್ದದ ಅರ್ಥ. ಜೀವನಾಗಲಿ, ಬ್ರಹ್ಮನಾಗಲೀ ಗುಣಪೂರ್ಣರಲ್ಲ. ವಿಷ್ಣುವೊಬ್ಬನೇ ಗುಣಪೂರ್ಣನು. ಆದ್ದರಿಂದ ವಿಷ್ಣುವೇ ಜಿಜ್ಞಾಸಕ್ಕೆ ವಿಷಯನು ಎಂಬುದು ಈ ಅಧಿಕರಣದ ತಾತ್ಪರ್ಯ.

**ಅಣುಭಾಷ್ಯ** : ''ವಿಷ್ಣುರೇವ ವಿಜಿಜ್ಞಾಸ್ಯ''

''ಸ ವಿಷ್ಣುರಾಹ ಹಿ'' ''ತಂ ಬ್ರಹ್ಮೇತ್ಯಾಚಕ್ಷತೇ'' ಎಂಬುದಾಗಿ ಭಗವತ್ ಪ್ರಣೀತ ದೈವೀ ಮೀಮಾಂಸದಲ್ಲಿ ಉಕ್ತವಾಗಿರುವ ಸೂತ್ರದ್ವಯದಲ್ಲಿ ಬ್ರಹ್ಮತ್ವೇನ ವಿಷ್ಣುವೇ ಹೇಳಲ್ಪಟ್ಟಿದೆ. ಆದ್ದರಿಂದ ಸೂತ್ರದಲ್ಲಿ ಹೇಳಿರುವ ಬ್ರಹ್ಮ ಶಬ್ದದಿಂದ ವಿಷ್ಣುವೇ ಗ್ರಾಹ್ಯನು. ಈ ಅಭಿಪ್ರಾಯದಿಂದ 'ವಿಷ್ಣುರೇವ ವಿಜಿಜ್ಞಾಸ್ಯಃ' ಎಂಬುದಾಗಿ ಶ್ರೀಮದಾಚಾರ್ಯರು ಇಲ್ಲಿ ಹೇಳಿದ್ದಾರೆ. ರಮಾಬ್ರಹ್ಮಾದಿಗಳ ಜಿಜ್ಞಾಸೆಯನ್ನು ಪ್ರಧಾನವಾಗಿ ಮಾಡಬಾರದು ಎಂದು ತಿಳಿಸಲು 'ವಿಷ್ಣುರೇವ' ಎಂದು ಹೇಳಿರುವರು. ಶ್ರುತ್ಯನುಸಾರಿಯಾಗಿ ಶ್ರವಣಮನನ ನಿಧಿಧ್ಯಾಸನ ಪೂರ್ವಕವಾಗಿ ಜಿಜ್ಞಾಸೆ ಮಾಡಬೇಕು ಎಂದು ತಿಳಿಸಲು 'ವಿ' ಉಪಸರ್ಗವನ್ನು ಪ್ರಯೋಗಿಸಿದ್ದಾರೆ.

## ಅಧಿಕರಣ – ೨

## ॥ಜನ್ಮಾದ್ಯಧಿಕರಣ॥

## ॥ಓಂ ಜನ್ಮಾದ್ಯಸ್ಯಯತಃ ಓಂ॥

**ತಾತ್ಪರ್ಯ :** ಅಸ್ಯ – ಈ ಪ್ರಪಂಚಕ್ಕೆ , ಜನ್ಮಾದಿ – ಜನ್ಮಾದಿ ಅಷ್ಟಕಗಳು (ಸೃಷ್ಟಿ ಲಯ, ಜ್ಞಾನ, ಅಜ್ಞಾನ, ಸ್ಥಿತಿ, ನಿಯಮನ, ಬಂಧ ಹಾಗೂ ಮೋಕ್ಷ) ಯಥಾಯೋಗ್ಯವಾಗಿ, ಯತಃ – ಯಾರಿಂದ ಉಂಟಾಗುವುದೋ (ತದ್ ಬ್ರಹ್ಮ – ಅವನೇ ಬ್ರಹ್ಮ).

''ತದ್ ವಿಜಿಜ್ಞಾಸಸ್ವ, ತದ್ ಬ್ರಹ್ಮ'' ಎಂದು ಹೇಳಿದ ಶ್ರುತಿಯಲ್ಲಿಯೇ ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಇತ್ಯಾದಿಯಾಗಿ ಬ್ರಹ್ಮನಿಗೆ ಜನ್ಮಾದಿ ಕಾರಣತ್ವವನ್ನು ಹೇಳಿದೆ. ಜನ್ಮಾದಿ ಅಷ್ಟಕರ್ತೃತ್ವ ರೂಪವಾದ ಈ ಲಕ್ಷಣವು ವಿಷ್ಣುವಿನಲ್ಲಿ ಮಾತ್ರ ಸಂಭವ, ಜೀವಾದಿಗಳಲ್ಲಿ ಅಸಂಭವವಾದ್ದರಿಂದ ಜಿಜ್ಞಾಸ್ಯನಾದ ಬ್ರಹ್ಮನು ವಿಷ್ಣುವೇ ಎಂದು ಸಿದ್ಧಾಂತ.

**ಅಣುಭಾಷ್ಯ :** ''ಸರ್ವಕರ್ತಾ''

''ವಿಷ್ಣುರೇವ'' ಎಂದು ಸೇರಿಸಿಕೊಳ್ಳಬೇಕು. ವಿಷ್ಣುವೇ ಸಮಸ್ತವಾದ ಜಗತ್ತಿಗೆ ಎಲ್ಲವನ್ನೂ ಹೊಂದಿಸುವವನು. ಅಂದರೆ ಜನ್ಮಾದಿ ಸಕಲಕ್ಕೂ ಕಾರಣ ಕರ್ತನು ಎಂದರ್ಥ. ಜನ್ಮಾದಿ ಕರ್ತೃತ್ವವೇ ಬ್ರಹ್ಮಲಕ್ಷಣತ್ವೇನ ಶ್ರುತಿ ಸೂತ್ರಗಳ ಅಭಿಪ್ರಾಯವು, ಇತರ ವಾದಿಗಳು ಹೇಳುವಂತೆ ವಿಷ್ಣುವು ಕೇವಲ ಉಪಾದಾನ ಕಾರಣನಲ್ಲ.

## ಅಧಿಕರಣ – ೩

## ॥ಶಾಸ್ತ್ರಯೋನಿತ್ವಾಧಿಕರಣ॥

## ॥ಓಂ ಶಾಸ್ತ್ರಯೋನಿತ್ವಾತ್ ಓಂ॥

'ಶಾಸ್ತ್ರಂ ಯೋನಿಃ' ಶಾಸ್ತ್ರವೇ ಜ್ಞಪ್ತಿ ಕಾರಣವು ಅಂದರೆ ಅವನನ್ನು

ತಿಳಿಸಿಕೊಡುವ ಪ್ರಮಾಣಗಳು. ಅದರ ಭಾವವೇ "ಶಾಸ್ತ್ರಯೋನಿತ್ವ". ಜಗತ್ಕಾರಣಕ್ಕೆ ವೇದಾದಿಶಾಸ್ತ್ರಗಳೇ ಪ್ರಮಾಣಗಳು. ಜಗತ್‌ಕಾರಣತ್ವರೂಪವಾದ ಈ ಲಕ್ಷಣವು ರುದ್ರಾದಿಗಳಲ್ಲಿ ಅತಿವ್ಯಾಪ್ತವಾಗುವುದಿಲ್ಲ.

**ಅಣುಭಾಷ್ಯ** : "ಆಗಮೋದಿತಃ"

ಇಲ್ಲಿ ಆಗಮ ಶಬ್ದದಿಂದ ಋಗಾದಿ ಶಾಸ್ತ್ರವನ್ನೇ ಗ್ರಹಿಸಬೇಕು.

"ಋಗ್ಯಜುಸ್ಸಾಮಥರ್ವಾಶ್ಚ ಭಾರತಂ ಪಂಚರಾತ್ರಕಮ್ ।
ಮೂಲ ರಾಮಾಯಣ ಚೈವ ಶಾಸ್ತ್ರಮಿತ್ಯಭಿಧೀಯತೆ ॥"

ಇತ್ಯಾದಿಯಾಗಿ ಸ್ಕಂದ ಪುರಾಣದಲ್ಲಿ ಹೇಳಿರುವಂತೆ ಋಗ್, ಯಜುರ್, ಸಾಮ ಮತ್ತು ಅಥರ್ವ ವೇದಗಳು, ಮಹಾಭಾರತ, ಪಂಚರಾತ್ರ ಹಾಗೂ ಮೂಲ ರಾಮಾಯಣ – ಇವುಗಳೇ ಶಾಸ್ತ್ರ ಎಂದು ಕರೆಯಲ್ಪಡುತ್ತವೆ. ಇವುಗಳಿಗೆ ಅನುಸಾರಿಯಾದ ಪುರಾಣಾದಿಗಳೂ ಶಾಸ್ತ್ರವೆಂದು ಪರಿಗಣಿಸಲ್ಪಡುತ್ತವೆ. ಈ ಪ್ರಕಾರವಾದ ಶಾಸ್ತ್ರಗಳಿಂದ ಜನ್ಮಾದಿಕಾರಣತ್ವೇನ ಶ್ರೀವಿಷ್ಣುವು ಪ್ರತಿಪಾದಿಸಲ್ಪಟ್ಟಿದ್ದಾನೆ. ಆದ್ದರಿಂದ ವಿಷ್ಣುವೇ ಜಿಜ್ಞಾಸ್ಯನು ಎಂದು ಭಾವ.

## ಅಧಿಕರಣ – ೪

## ॥ ಸಮನ್ವಯಾಧಿಕರಣ ॥

## ॥ ಓಂ ತತ್ತು ಸಮನ್ವಯಾತ್ ಓಂ ॥

ತತ್ತು – 'ತದೇವ' ಅಂದರೆ ಆ ಬ್ರಹ್ಮನೇ ಶಾಸ್ತ್ರಪ್ರತಿಪಾದ್ಯನು. ಉಪಕ್ರಮಾದಿ ತಾತ್ಪರ್ಯ ನಿರ್ಣಾಯಕ ಲಿಂಗಗಳಿಂದ ಚೆನ್ನಾಗಿ ಶಾಸ್ತ್ರಗಳನ್ನು ವಿಚಾರ್ಯ ಮಾಡಿದಾಗ ಬ್ರಹ್ಮಾಖ್ಯ ವಿಷ್ಣುವೇ ಜಗತ್ಕಾರಣತ್ವೇನ ಮುಖ್ಯತಃ ಶಾಸ್ತ್ರಗಮ್ಯತ್ವೇನ ತಿಳಿಯಲ್ಪಡುತ್ತಾನೆ. ರುದ್ರಾದಿಗಳಲ್ಲ. ಆದ್ದರಿಂದ ಜಗತ್‌ಕಾರಣತ್ವವು ವಿಷ್ಣುವಿನದ್ದೇ ಲಕ್ಷಣ ಎಂಬುದೇ ಸಿದ್ಧಾಂತ.

**ಅಣುಭಾಷ್ಯ :** ''ಸಮನ್ವಯಾತ್''

ಸಮ್ ಎಂಬ ಶಬ್ದವನ್ನು ಅನೇಕ ರೀತಿಯಲ್ಲಿ ಆವೃತ್ತಿ ಮಾಡಿಕೊಳ್ಳಬಹುದು. ಸಮ್ಯಕ್ ಎಂದು ಒಂದರ್ಥ. ಮುಖ್ಯವಾಗಿ ಎಂದು ಇನ್ನೊಂದರ್ಥ. ಪೂರ್ಣವಾಗಿ ಎಂದು ಮತ್ತೊಂದರ್ಥ. ಸಮುದಾಯ ಅಭಿಪ್ರಾಯದಿಂದ ಸಮನ್ವಯಾತ್ ಎಂಬ ಏಕವಚನ ಪ್ರಯೋಗ. ಶಕ್ತಿ ತಾತ್ಪರ್ಯದಿಂದ ವಿಚಾರ ಮಾಡಿದಾಗ ಅರ್ಥವು ತಿಳಿಯಲ್ಪಡುತ್ತದೆ ಎಂಬುದು ಅನ್ವಯ ಶಬ್ದಾರ್ಥ. ಆದ್ದರಿಂದ ಶಾಸ್ತ್ರಗಳ ಅವಲೋಕನದಿಂದ ಚೆನ್ನಾಗಿ ವಿಚಾರ ಮಾಡಿದಾಗ ಮುಖ್ಯತಃ ಜಗತ್ ಕಾರಣತ್ವನಾಗಿ ವಿಷ್ಣುವೇ ತಿಳಿಯಲ್ಪಡುತ್ತಾನೆ ಎಂದು ತಾತ್ಪರ್ಯ.

## ಅಧಿಕರಣ – ೫

## ॥ ಈಕ್ಷತ್ಯಧಿಕರಣ ॥

## ॥ ಓಂ ಈಕ್ಷತೇರ್ನಾಶಬ್ದಮ್ ಓಂ ॥

ತತ್ ಎಂದು ಇಲ್ಲಿ ಸೇರಿಸಿಕೊಳ್ಳಬೇಕು. ತತ್ ಅಂದರೆ ಬ್ರಹ್ಮನು, ಅಶಬ್ದನಲ್ಲ ಅಂದರೆ ಅವಾಚ್ಯನಲ್ಲ, ವಾಚ್ಯಮೇವ ಎಂದರ್ಥ. ಏಕೆಂದರೆ ಅವನು ಈಕ್ಷಣೀಯ ವಿಷಯನಾದ್ದರಿಂದ, ಅಂದರೆ ಜ್ಞಾನಕ್ಕೆ ಗೋಚರನಾದ್ದರಿಂದ ಎಂದು ತಾತ್ಪರ್ಯ. ಶಾಸ್ತ್ರಕ್ಕೆ ಮುಖ್ಯಾರ್ಥನು ಎಂದು ಅರ್ಥ. ಅವಾಚ್ಯನಾದವನಿಗೆ ಶಾಸ್ತ್ರ ಮುಖ್ಯಾರ್ಥತ್ವವು ಸಂಭವಿಸುವುದಿಲ್ಲ. ಆದ್ದರಿಂದ ಬ್ರಹ್ಮನು ಎಲ್ಲ ಶಾಸ್ತ್ರಗಳಿಂದ, ಎಲ್ಲ ಶಬ್ದಗಳಿಂದ ವಾಚ್ಯನೇ ಆಗಿರುವನು.

**ಅಣುಭಾಷ್ಯ :** ''ಈಕ್ಷತೇಶ್ಚ''

ಜ್ಞಾನಕ್ಕೆ ವಿಷಯನಾದ್ದರಿಂದ ಶಾಸ್ತ್ರಗಳಿಂದ ವಾಚ್ಯನಾಗಿರುವ ವಿಷ್ಣುವೇ ಸರ್ವ ಜಗತ್ ಕಾರಣನು. ''ಚ'' ಶಬ್ದದಿಂದ ವಿಷ್ಣುವೇ ಜಗತ್ಕಾರಣನೆಂಬುದು ಸೂಚಿಸಲ್ಪಟ್ಟಿದೆ. ವಿಷ್ಣುವು ಶಬ್ದವಾಚ್ಯನೇ ಆಗಿದ್ದಾನೆ ಎಂಬುದನ್ನು 'ಚ' ಶಬ್ದದಿಂದ ಸೂಚಿಸಿದ್ದಾರೆ. ಇದನ್ನೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ – ''ಈಕ್ಷಣೀಯತ್ವತೋ ವಿಷ್ಣುಃ ವಾಚ್ಯ ಏವ ನ ಚಾನ್ಯಥಾ''

## ಅಧಿಕರಣ – ೬

## ॥ ಆನಂದಮಯಾಧಿಕರಣ ॥

## ॥ ಓಂ ಆನಂದಮಯೋऽಭ್ಯಾಸಾತ್ ಓಂ ॥

ಆನಂದಮಯ ಶಬ್ದವಾಚ್ಯನು ವಿಷ್ಣುವೇ ಆಗಿರುವನು. ಏಕೆಂದರೆ ತೈತ್ತರೀಯ ಶ್ರುತಿಯಲ್ಲಿ ಆನಂದಮಯನನ್ನು ಹೇಳುವಾಗ "ಅಸನ್ನೇವ ಸ ಭವತಿ। ಅಸದ್ ಬ್ರಹ್ಮೇತಿ ವೇದ ಚೇತ್। ಅಸ್ತಿ ಬ್ರಹ್ಮೇತಿ ಚೇದ್ವೇದ।" ಇತ್ಯಾದಿಯಾಗಿ ಆನಂದಮಯನಲ್ಲಿ ಬ್ರಹ್ಮ ಶಬ್ದವು ಮತ್ತೆ ಮತ್ತೆ ಹೇಳಲ್ಪಟ್ಟಿದೆ. "ತದೇವ ಬ್ರಹ್ಮ ಪರಮಂ ಕವೀನಾಂ ಏತಮೇವ ಬ್ರಹ್ಮೇತ್ಯಾಚಕ್ಷತೇ" "ಬ್ರಹ್ಮ ಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ। ಅಸಂಪೂರ್ಣಾಃ ಪರೇ ಯಸ್ಮಾತ್ ಉಪಚಾರೇಣ ವಾ ಭವೇತ್ ॥" ಇತ್ಯಾದಿ ಶ್ರುತಿ ಸ್ಮೃತಿಗಳಲ್ಲಿ ಪೂರ್ಣತ್ವ ಗುಣವು ವಿಷ್ಣುವಿನಲ್ಲಿಯೇ ಪರಮ ಮುಖ್ಯವೃತಿಯಿಂದ ಬ್ರಹ್ಮ ಶಬ್ದದಿಂದ ಪ್ರತಿಪಾದಿಸಲ್ಪಟ್ಟಿದೆ.

**ಅಣುಭಾಷ್ಯ** : "ಪೂರ್ಣಾನಂದಃ"

ಆನಂದಮಯ ಎಂಬಲ್ಲಿ ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯ ಎಂಬ ಅರ್ಥವಿದೆ. "ಬ್ರಾಹ್ಮಣ ಪ್ರಚುರೋ ಗ್ರಾಮಃ" ಎಂದು ಹೇಳಿದಾಗ ಇತರ ಜಾತಿಯವರೂ ಅಲ್ಪ ಸಂಖ್ಯೆಯಲ್ಲಿರುವ ಸಂಭವವಿದೆ. ಹಾಗೆಯೇ ಆನಂದಮಯನಿಗೂ ಸ್ವಲ್ಪ ಮಟ್ಟಿಗೆ ಅನಾನಂದವೂ ಪ್ರಾಪ್ತಿಯಾಗಬೇಕಾದೀತು. ಹೀಗೆ ಅಪಾರ್ಥವಾಗಬಾರದು ಎಂಬ ಅಭಿಪ್ರಾಯದಿಂದ ಇಲ್ಲಿ 'ಆನಂದಮಯ' ಎಂಬ ಶಬ್ದಕ್ಕೆ ಆನಂದ ಪರಿಪೂರ್ಣ ಎಂಬ ಅರ್ಥದಲ್ಲಿ 'ಪೂರ್ಣಾನಂದಃ' ಎಂದು ಹೇಳಿದ್ದಾರೆ.

## ಅಧಿಕರಣ – ೭

## ॥ ಅಂತಸ್ಥತ್ವಾಧಿಕರಣ ॥

## ॥ ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ॥

ಅಂತಸ್ಥನು ವಿಷ್ಣುವೇ. ಏಕೆಂದರೆ ಅದಕ್ಕೆ ಸಂಬಂಧಪಟ್ಟಂತೆ ಶಾಸ್ತ್ರಗಳಲ್ಲಿ ಸಮುದ್ರಾಂತಸ್ಥತ್ವಾದಿ ಧರ್ಮವು ಪ್ರತಿಪಾದಿಸಲ್ಪಟ್ಟಿದೆ.

**ಅಣುಭಾಷ್ಯ** : "ಅಂತರಃ"

ಅಂತಸ್ಥಃ ಎಂದರ್ಥ. ಅಂತಃ ಶಬ್ದವು ಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿರುವುದರಿಂದ ಎಲ್ಲರ ಒಳಗಿದ್ದು ರಮಿಸುವವನು ಮುಖ್ಯವಾಗಿ ವಿಷ್ಣುವೇ ಎಂದು ತಾತ್ಪರ್ಯ.

**ಅಧಿಕರಣ – ೮**

**॥ ಆಕಾಶಾಧಿಕರಣ ॥**

**॥ ಓಂ ಆಕಾಶಸ್ತಲ್ಲಿಂಗಾತ್ ಓಂ ॥**

ಆಕಾಶ ಶಬ್ದವಾಚ್ಯನು ವಿಷ್ಣುವೇ. ಏಕೆಂದರೆ ಅದಕ್ಕೆ ನಿರ್ಧಾರಕವಾಗಿ ಸರ್ವೋತ್ತಮತ್ವಾದಿ ವಿಷ್ಣುಲಿಂಗವು ಆಕಾಶನಿಷ್ಠತಯಾ ಶ್ರುತವಾಗಿದೆ.

"ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ।
ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ ।"

ಇತ್ಯಾದಿ ಶ್ರುತ್ಯುಕ್ತ ಆಕಾಶವು ವಿಷ್ಣುವನ್ನೇ ಕುರಿತು ಹೇಳುತ್ತದೆ.

**ಅಣುಭಾಷ್ಯ** : "ಖವತ್ ಅಂತರಃ ವಿಷ್ಣುರೇವ"

ಆಕಾಶದಂತೆ ಎಲ್ಲರ ಒಳಗೂ ಹೊರಗೂ ಇದ್ದು ಪ್ರವರ್ತಿಸುವವನು ವಿಷ್ಣುವೇ. ಆದ್ದರಿಂದ ವಿಷ್ಣುವು ಆಕಾಶ ಶಬ್ದ ವಾಚ್ಯನು.

**ಅಧಿಕರಣ – ೯**

**॥ ಪ್ರಾಣಾಧಿಕರಣ ॥**

**॥ ಓಂ ಅತ ಏವ ಪ್ರಾಣಃ ಓಂ ॥**

ತೈತ್ತಿರೀಯ ಶ್ರುತ್ಯುಕ್ತ ಪ್ರಾಣ ಶಬ್ದವಾಚ್ಯನು ವಿಷ್ಣುವೇ. ಏಕೆಂದರೆ "ಅತ ಏವ" "ಲಕ್ಷ್ಮೀಪತಿತ್ವಾದಿ ಲಿಂಗ ಶ್ರವಣಾದೇವ" ಎಂದರ್ಥ.

**ಅಣುಭಾಷ್ಯ** : "ಖವತ್ ಪ್ರಣೇತಾ"

ಆಕಾಶದಂತೆ 'ಪ್ರಣೇತಾ' ಎಂದರೆ ಪ್ರಕೃಷ್ಟನಿಯಾಮಕ ಎಂದರ್ಥ. ಆಕಾಶ ಶಬ್ದದಿಂದ ವಿಷ್ಣುವೇ ಉಕ್ತನಾಗಿದ್ದಾನೆ. ''ಆಕಾಶ ಶಬ್ದವಾಚ್ಯನಾದ ನೀನೇ ಪ್ರಾಣ ಶಬ್ದವಾಚ್ಯನೂ ಆಗಿದ್ದೀಯೆ'' ಇತ್ಯಾದಿ ತೈತ್ತಿರೀಯ ಶ್ರುತ್ಯುಕ್ತ 'ಪ್ರಾಣ' ನು ಪರಮ ಮುಖ್ಯ ವೃತ್ತಿಯಿಂದ ವಿಷ್ಣುವೇ ಹೊರತು ವಾಯುವಲ್ಲ ಎಂಬ ಈ ಅಧಿಕರಣದ ತಾತ್ಪರ್ಯವನ್ನು ಹಾಗೂ ಆಕಾಶಾಧಿಕರಣದ ತಾತ್ಪರ್ಯವನ್ನೂ ಒಟ್ಟಾಗಿ 'ಖವತ್ ಪ್ರಣೇತಾ' ಎಂಬುದರಿಂದ ಇಲ್ಲಿ ಸಂಗ್ರಹಿಸಿದ್ದಾರೆ.

## ಅಧಿಕರಣ – ೧೦

## ।। ಜ್ಯೋತಿರಧಿಕರಣ ।।

## ।। ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ ।।

ಜ್ಯೋತಿ ಶಬ್ದವಾಚ್ಯನು ವಿಷ್ಣುವೇ. ಏಕೆಂದರೆ ಸಾಕಲ್ಯೇನ ಕರ್ಣಾದಿ ಇಂದ್ರಿಯಗಳಿಂದ ಅಜ್ಞೇಯನು ಎಂಬುದಾಗಿ ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ.

**ಅಣುಭಾಷ್ಯ :** ''ಜ್ಯೋತಿಃ''

ಕರ್ಣಾದಿ ವಿದೂರತ್ವಾಖ್ಯ ಲಿಂಗದಿಂದ ವಿಷ್ಣುವೇ ಜ್ಯೋತಿ ಶಬ್ದವಾಚ್ಯನು ಎಂದರ್ಥ. ''ವಿಮೇ ಕರ್ಣಾ ಪತಯತೋ ವಿಚಕ್ಷುರ್ವೀದಂ ಜ್ಯೋತಿರ್ಹೃದಯ ಆಹಿತಂ ಯತ್'' ಎಂದು ಶ್ರುತಿಯಲ್ಲಿ ಉಕ್ತವಾಗಿದೆ. ಇದು ಅಗ್ನಿಸೂಕ್ತವಾಗಿದ್ದರೂ ಇಲ್ಲಿ ಜ್ಯೋತಿ ಶಬ್ದವಾಚ್ಯನು ವಿಷ್ಣುವೇ ಹೊರತು ಅಗ್ನಿಯಲ್ಲ. ''ಜ್ಯಾಯಸೀ ಊತಿಃ ವ್ಯಾಪ್ತಿಃ ಐಶ್ವರ್ಯಂ ವಾ ಅಸ್ಯ'' ಎಂಬ ವ್ಯುತ್ಪತ್ತಿಯಿಂದಲೂ ಪರಮವ್ಯಾಪ್ತತ್ವ ಮತ್ತು ಮಹೈಶ್ವರ್ಯತ್ವಗಳಿಂದಾಗಿ ಜ್ಯೋತಿ ಶಬ್ದವಾಚ್ಯನು ವಿಷ್ಣುವೇ ಎಂಬುದಾಗಿ ತಿಳಿಯತಕ್ಕದ್ದು.

## ಅಧಿಕರಣ – ೧೧

## ।। ಗಾಯತ್ರ್ಯಧಿಕರಣ ।।

## ।। ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣ ನಿಗದಾತ್ ತಥಾಹಿ ದರ್ಶನಮ್ ಓಂ ।।

"ಗಾಯತ್ರೀ ವಾ ಇದಂ ಸರ್ವಂ" ಎಂದು ಹೇಳಲ್ಪಟ್ಟ ಗಾಯತ್ರೀ ಶಬ್ದವು ಛಂದಸ್ಸನ್ನು ಹೇಳುವುದಿಲ್ಲ. ಅದು ವಿಷ್ಣುವನ್ನೇ ಹೇಳುತ್ತದೆ. ಹಾಗೆಂದು ಶ್ರುತಿಯಲ್ಲಿ ಸಮರ್ಥಿತವಾಗಿದೆ. "ಗಾಯತಿ ತ್ರಾಯತಿ ಚ" "ಸ್ತುತಿ ಮಾಡುವವರನ್ನು ರಕ್ಷಿಸುತ್ತದೆ. ಆದ್ದರಿಂದ ಗಾಯತ್ರೀ ಶಬ್ದವು ವಿಷ್ಣುವನ್ನೇ ಹೇಳುತ್ತದೆ" ಎಂಬುದಾಗಿ ಗಾನ ತ್ರಾಣ ಕರ್ತೃತ್ವ ಲಿಂಗ ಬೋಧಕ ಶ್ರುತಿ ಇದೆ.

## ಅಧಿಕರಣ – ೧೨

## ॥ಅಂತಿಯ ಪ್ರಾಣಾಧಿಕರಣ॥

## ॥ ಓಂ ಪ್ರಾಣಃ ತಥಾಽನುಗಮಾತ್ ಓಂ ॥

"ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣ" ಎಂಬುದಾಗಿ ಐತರೇಯ ಶ್ರುತ್ಯುಕ್ತ ಪ್ರಾಣನು ವಿಷ್ಣುವೇ ಹೊರತು ವಾಯುವಲ್ಲ. ಏಕೆಂದರೆ "ತಂ ದೇವಾಃ ಪ್ರಾಣಯಂತ ತಂ ಭೂತಿರಿತಿ ದೇವಾ ಉಪಾಸಾನ್ ಚಕ್ರಿರೇ। ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿ" ಈ ಪ್ರಕಾರವಾಗಿ ಪ್ರಾಣನಿಗೆ ಸರ್ವದೇವೋಪಾಸ್ಯತ್ವ ಸರ್ವವೇದೋಕ್ತತ್ವಾದಿ ವಿಷ್ಣು ಲಿಂಗಗಳು ಹೇಳಲ್ಪಟ್ಟಿವೆ.

**ಅಣುಭಾಷ್ಯ** : "ಇತ್ಯಾದ್ಯೈಃ ಪ್ರಸಿದ್ಧೈರನ್ಯ ವಸ್ತುಷು। ಉಚ್ಯತೇ ವಿಷ್ಣುರೇವೈಕಃ ಸರ್ವೈಃ ಸರ್ವಗುಣತ್ವತಃ ॥"

ಈ ಪ್ರಕಾರವಾಗಿ ಲೋಕದಲ್ಲಿ ಇತರ ವಸ್ತುಗಳಲ್ಲಿ ಪ್ರಸಿದ್ಧವಾದ ಜ್ಯೋತಿ, ಗಾಯತ್ರೀ, ಪ್ರಾಣ ಇತ್ಯಾದಿ ಎಲ್ಲ ಲಿಂಗಾತ್ಮಕ ನಾಮಾತ್ಮಕ ಶಬ್ದಗಳಿಂದ ವಿಷ್ಣುವೊಬ್ಬನೇ ಹೇಳಲ್ಪಡುವನು. ಹೀಗೆ ಎಲ್ಲ ಶಬ್ದಗಳಿಂದ ವಿಷ್ಣುವೇ ಹೇಳಲ್ಪಡುವುದಾದರೆ ಇಂದ್ರ, ಅಗ್ನಿ, ಇತ್ಯಾದಿ ದೇವತಾ ವಾಚಕ ಶಬ್ದಗಳಿಗೆ ಅಸಿದ್ಧಿ ಬರುವುದಿಲ್ಲವೇ ಎಂದು ಆಶಂಕಿಸಿದರೆ ಅಂಥಹ ಪ್ರಸಂಗ ಬರುವುದಿಲ್ಲ. ಇದನ್ನು ಸಮರ್ಥಿಸುವುದಕ್ಕಾಗಿಯೇ ಇಲ್ಲಿ 'ಏಕಃ' ಎಂದು ಹೇಳಿದ್ದಾರೆ. "ಏಕೇ ಮುಖ್ಯಾನ್ಯ ಕೇವಲಾಃ" ಎಂಬ ವಚನವಿರುವುದರಿಂದ 'ಏಕಃ' ಎಂದರೆ ಪರಮಮುಖ್ಯತಯಾ ವಾಚ್ಯಃ ಎಂದರ್ಥ. ಇಂದ್ರಾದಿಗಳಿಗೆ ಆಯಾ ಹೆಸರುಗಳು ಲೋಕದಲ್ಲಿ ಪ್ರಸಿದ್ಧ

ವಾಗಿರುವುದರಿಂದ ಆಯಾ ಶಬ್ದಗಳು ಇಂದ್ರಾದಿಗಳನ್ನು ಮುಖ್ಯವೃತ್ತಿಯಿಂದಲೂ (ಅಂದರೆ ಲೌಕಿಕ ರೂಢಿಯಿಂದಲೂ) ವಿಷ್ಣುವನ್ನು ಪರಮ ಮುಖ್ಯ ಯೌಗಿಕ ವೃತ್ತಿಯಿಂದಲೂ ಪ್ರತಿಪಾದಿಸುತ್ತವೆ ಎಂದು ಹೇಳಿದರೆ ಯಾವ ವಿರೋಧವೂ ಸಂಭವಿಸುವುದಿಲ್ಲ.

ಹಾಗಾದರೆ ಸರ್ವಶಬ್ದಗಳಿಗೂ ಭಗವದ್ ವಾಚಕತ್ವವನ್ನು ಹೇಳಲು ಮುಖ್ಯವಾದ ಹೇತು ಯಾವುದು ಎಂದರೆ ಅದಕ್ಕೆ ಹೇಳುತ್ತಾರೆ. ''ಸರ್ವಗುಣತ್ವತಃ'' ಎಂದು. ಎಲ್ಲ ವಸ್ತುಗಳಲ್ಲಿನ ಎಲ್ಲ ಗುಣಗಳೂ ಅವನಿಂದಲೇ. ಆದ್ದರಿಂದ ಎಲ್ಲ ವಸ್ತುಗಳನ್ನು ಪ್ರತಿಪಾದಿಸುವ ಎಲ್ಲ ಶಬ್ದಗಳಿಂದಲೂ ವಿಷ್ಣುವೇ ಮುಖ್ಯತಯಾ ವಾಚ್ಯನು ಎಂಬುದೇ ಪ್ರಥಮಾಧ್ಯಾಯದ ಪ್ರಥಮಪಾದದ ಸಾರಾಂಶ.

**ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಮೊದಲನೆಯ ಅಧ್ಯಾಯದ ಮೊದಲನೆಯ ಪಾದವು ಮುಕ್ತಾಯವಾಯಿತು.**



## ಮೊದಲನೆಯ ಅಧ್ಯಾಯದ ಎರಡನೆಯ ಪಾದ

ಈ ಪಾದದಲ್ಲಿ ಅನ್ಯತ್ರ ಪ್ರಸಿದ್ಧವಾಗಿರುವ ಲಿಂಗಾತ್ಮಕ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ.

### ಅಧಿಕರಣ – ೧

### ॥ ಸರ್ವಗತತ್ವಾಧಿಕರಣ ॥

### ॥ ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ ॥

''ಏತಮಸ್ಯಾಂ, ಏವಂ ದಿವಿ, ಏತಂ ವಾಯೌ'' ಇತ್ಯಾದಿಯಾಗಿ ಸರ್ವಗತತ್ವವನ್ನು ಹೇಳುವ ಐತರೇಯ ಶ್ರುತಿಯಲ್ಲಿ ''ಏಕಮೇವ ಬ್ರಹ್ಮೇತ್ಯಾಚಕ್ಷತೇ'' ಎಂಬುದಾಗಿ ಸರ್ವಗತತ್ವವು ಬ್ರಹ್ಮನಲ್ಲಿ ಶ್ರುತವಾಗಿದೆ. ಬ್ರಹ್ಮ ಶಬ್ದವು ಶ್ರುತ್ಯಾದಿಗಳಲ್ಲಿ ಮುಖ್ಯತಯಾ ವಿಷ್ಣುವಿನಲ್ಲಿಯೇ ಪ್ರಸಿದ್ಧವು. ಆದ್ದರಿಂದ ವಿಷ್ಣುವೇ ಸರ್ವಗತನು. ಇದರಿಂದ ಬಹುಳವಾದ ಆದಿತ್ಯ ಶ್ರುತಿಗೆ ವಿರೋಧ ಬರುವುದಿಲ್ಲ.

ಏಕೆಂದರೆ "ಸರ್ವನಾಮಾಭಿದೇಯಶ್ಚ ಸರ್ವವೇದೋದಿತಶ್ಚ ಸ" ಇತ್ಯಾದಿ ಸ್ಮೃತಿಯಿಂದ ವಿಷ್ಣುವಿನಲ್ಲಿಯೇ ಆದಿತ್ಯ ನಾಮವತ್ವವನ್ನು ಹೇಳಿದೆ.

**ಅಣುಭಾಷ್ಯ** : "ಸರ್ವಗಃ"

ಅಂದರೆ ಸರ್ವಗತಃ ಎಂದರ್ಥ. ವಿಷ್ಣುವೇ ಸರ್ವಗತನು ಎಂದು ತಾತ್ಪರ್ಯ.

## ಅಧಿಕರಣ – ೨

## ॥ ಅತ್ತೃತ್ವಾಧಿಕರಣ ॥

## ॥ ಓಂ ಅತ್ತಾ ಚರಾಚರಗ್ರಹಣಾತ್ ಓಂ ॥

'ಅತ್ತಾ' ಅಂದರೆ ಸರ್ವಸಂಹಾರಕನು ವಿಷ್ಣುವೇ. ಏಕೆಂದರೆ "ಸರ್ವಂ ವಾ ಅತ್ತಿ" ಎಂದು ಸಕಲ ಚರಾಚರ ವಸ್ತುಗಳನ್ನು ಅನ್ನದಂತೆ ವಿಷ್ಣುವೇ ಸ್ವೀಕರಿಸುತ್ತಾನೆ. ಇದರಿಂದ ಅದಿತಿ ಶ್ರುತಿಗೆ ವಿರೋಧ ಬರುವುದಿಲ್ಲ. "ಯೋ ದೇವಾನಾಂ ನಾಮಧಾ" ಇತ್ಯಾದಿ ಶ್ರುತಿಯಿಂದ 'ಅದಿತಿ' ಮೊದಲಾದ ಎಲ್ಲ ನಾಮಾತ್ಮಕ ಶಬ್ದ ಗಳೂ ವಿಷ್ಣುವನ್ನೇ ಹೇಳುತ್ತವೆ ಎಂದು ತಿಳಿದುಬರುತ್ತದೆ. ವಿಷ್ಣುವಿಗೆ ಸರ್ವ ಅತ್ತೃತ್ವ ಹೇಳುವುದರಲ್ಲಿ ಪ್ರಮಾಣಗಳ ಅಭಾವವಿಲ್ಲ.

**ಅಣುಭಾಷ್ಯ** : 'ಅತ್ತಾ' ಎಂಬ ಶಬ್ದದಿಂದ ಈ ಅಧಿಕರಣದ ಸಾರವನ್ನು ಸಂಗ್ರಹಿಸಲಾಗಿದೆ.

## ಅಧಿಕರಣ – ೩

## ॥ ಗುಹಾಧಿಕರಣ ॥

## ॥ ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ ॥

"ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಕರ್ಮಫಲ ಭೋಕ್ತೃತ್ವವು ಆತ್ಮ – ಅಂತರಾತ್ಮ ಎಂಬುದಾಗಿ ಎರಡು ರೂಪಗಳಿಂದ ಪರಮಾತ್ಮನಿಗೇ ಹೇಳಲ್ಪಟ್ಟಿದೆ.

ಏಕೆಂದರೆ "ಯೋ ವೇದ ನಿಹಿತಂ ಗುಹಾಯಾಂ' ಇತ್ಯಾದಿಗಳಲ್ಲಿ ಈ ವಿಷಯದಲ್ಲಿ ಕೆಳಗೆ ಉದಾಹರಿಸಿರುವ ಬೃಹತ್ ಸಂಹಿತೆಯ ವಚನವು ಪ್ರಮಾಣವಾಗಿದೆ.

"ಆತ್ಮಾಂತರಾತ್ಮೇತಿ ಹರಿಃ ಏಕ ಏವ ದ್ವಿಧಾ ಸ್ಥಿತಃ ।
ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್ ॥"

**ಅಣುಭಾಷ್ಯ :** "ಸರ್ವಗಃ ಅತ್ತಾ"

ಎಲ್ಲ ಚರಾಚರಗಳ ಭಕ್ಷಕ ಎಂದರ್ಥ. ಎಲ್ಲರೊಳಗಿದ್ದು ಸರ್ವ ಶುಭ ಕರ್ಮಗಳ ಫಲ ಭೋಕ್ತೃ ಎಂದು ಮತ್ತೊಂದರ್ಥ.

## ಅಧಿಕರಣ – ೪

## ॥ ಅಂತರಾಧಿಕರಣ ॥

## ॥ ಓಂ ಅಂತರ ಉಪಪತ್ತೇಃ ಓಂ ॥

ಕಣ್ಣಿನೊಳಗಿರುವನು ವಿಷ್ಣುವೇ. "ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ । ಏಷ ಆತ್ಮೇತಿ ಹೋವಾಚ । ಏತದಮೃತಮಭಯಮೇತದ್ ಬ್ರಹ್ಮಾ ॥" ಎಂಬುದಾಗಿ ಅಗ್ನಿ ಶ್ರುತಿಯಲ್ಲಿ ವಿಷ್ಣುವಿಗೇ ಸಂಬಂಧಿಸಿದ ಅಮೃತತ್ವಾದಿ ಲಿಂಗಗಳನ್ನು ಬ್ರಹ್ಮನನ್ನು ಕುರಿತು ಹೇಳಿದೆ. ಬ್ರಹ್ಮ ಶಬ್ದವು ವಿಷ್ಣುವಿನಲ್ಲಿಯೇ ಪ್ರಸಿದ್ಧವು.

## ಅಧಿಕರಣ – ೫

## ॥ ಅಂತರ್ಯಾಮ್ಯಧಿಕರಣ ॥

## ॥ ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ಓಂ ॥

ವಿಷ್ಣುವೇ ಸರ್ವಾಂತರ್ಯಾಮಿಯು. ಅಧಿದೈವ, ಅಧಿಭೂತಾದಿ ಪ್ರಕರಣಗಳಲ್ಲಿ "ಪೃಥಿವ್ಯಾದಿಗಳಲ್ಲಿರುವ ಅಂತರ್ಯಾಮಿಯಾದ ಪುರುಷನನ್ನು ಪೃಥಿವ್ಯಾದಿಗಳು ತಿಳಿದಿಲ್ಲ" ಎಂಬುದಾಗಿ ಅವಿದಿತ್ವಾದಿ ವಿಷ್ಣುವಿನ ಧರ್ಮಗಳು ಹೇಳಲ್ಪಟ್ಟಿವೆ. "ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾಃ ಅಂತರೋ ಯಂ ಪೃಥಿವೀ ನ ವೇದ । ಯಸ್ಯ

ಪೃಥಿವೀ ಶರೀರಂ। ಯಂ ಪೃಥಿವ್ಯಾ ಅಂತರೋಯಮಯತಿ ॥'' ವಿಷ್ಣುವಿಗೆ ಪೃಥಿವ್ಯಾದಿ ಶರೀರತ್ವವನ್ನು ಹೇಳುವುದರಲ್ಲಿ ಅನುಪಪತ್ತಿಯಿಲ್ಲ. ಏಕೆಂದರೆ ಈ ವಿಷಯದಲ್ಲಿ ಕೆಳಗೆ ತೋರಿಸಿರುವ ಸ್ಮೃತಿಯು ಪ್ರಮಾಣವಾಗಿದೆ.

''ಶೀರ್ಯತೇ ನಿತ್ಯಮೇವಾಸ್ಮಾದ್ವಿಷ್ಣೋಸ್ತು ಜಗದೀದೃಶಮ್।
ರಮತೇ ಚ ಪರೋ ಹ್ಯಸ್ಮಿನ್ ಶರೀರಂ ತಸ್ಯ ತಜ್ಜಗತ್ ॥''

**ಅಣುಭಾಷ್ಯ** : ''ನಿಯಂತಾ ಚ''

ಕಣ್ಣಿನೊಳಗಿದ್ದು ನಿಯಾಮಕನು ಎಂದರ್ಥ. (ಅಧಿಕರಣ – ೪) ಮತ್ತೊಂದು ಪಕ್ಷದಲ್ಲಿ ಸರ್ವಾಂತರ್ಯಾಮಿ ಎಂದರ್ಥ. (ಅಧಿಕರಣ –೫)

**ಅಧಿಕರಣ – ೬**

**॥ ಅದೃಶ್ಯತ್ವಾಧಿಕರಣ ॥**

**॥ ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ ॥**

ಅದೃಶ್ಯತ್ವಾದಿ ಅಭಾವ ಸ್ವರೂಪ ಗುಣವುಳ್ಳವನು ವಿಷ್ಣುವೇ. ಏಕೆಂದರೆ ''ಅಥ ಪರಾ ಯಯಾ ತದಕ್ಷರಮಧಿಗಮ್ಯತೇ'' ಎಂಬುದಾಗಿ ಅದೃಶ್ಯತ್ವಾದಿ ಗುಣವುಳ್ಳವನಿಗೆ ಜಗಜ್ಜನ್ಮಾದಿ ಕರ್ತೃತ್ವಾದಿ ಅಸಾಧಾರಣ ವಿಷ್ಣುಧರ್ಮಗಳು ಉಕ್ತವಾಗಿವೆ. ಪರಮ ಮುಖ್ಯವೃತ್ತಿಯಿಂದ ಅಕ್ಷರ ಶಬ್ದವಾಚ್ಯನು ವಿಷ್ಣುವೇ. ''ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ'' ಇತ್ಯಾದಿ ಅಥರ್ವಣ ಶ್ರುತಿಯಲ್ಲಿ ''ತಥಾ ಅಕ್ಷರಾತ್ ಸಂಭವತೀಹ ವಿಶ್ವಮ್ ॥ ಎಂದು ಅಕ್ಷರ ಶಬ್ದವಾಚ್ಯನಿಗೆ ಅದೃಶ್ಯತ್ವಾದಿ ಧರ್ಮಗಳನ್ನು ಹೇಳಿದೆ. ಆದ್ದರಿಂದ ಅದೃಶ್ಯತ್ವಾದಿ ಗುಣವುಳ್ಳನು ವಿಷ್ಣುವೇ ಎಂದರ್ಥ.

**ಅಣುಭಾಷ್ಯ** : ''ದೃಶ್ಯತ್ವಾದ್ಯುಜ್ಝಿತಃ ಸದಾ''

ಇಲ್ಲಿ ದೃಶ್ಯತ್ವಾದಿ ಉಜ್ಝಿತತ್ವ ಎಂದರೆ ಸಾಕಲ್ಯೇನ ಚಕ್ಷುರಾದಿ

ಅಗೋಚರತ್ವವು. ಇಂಥಹ ಅಸಾಧಾರಣವಾದ ವಿಷ್ಣುಧರ್ಮ ಎಂದೂ ಬಿಟ್ಟು ಹೋಗುವುದಿಲ್ಲ ಎಂಬ ಭಾವದಿಂದ "ಸದಾ" ಎಂದು ಹೇಳಿದ್ದಾರೆ.

## ಅಧಿಕರಣ – ೭

## ॥ವೈಶ್ವಾನರಾಧಿಕರಣ॥

## ॥ಓಂ ವೈಶ್ವಾನರಃ ಸಾಧಾರಣ ಶಬ್ದವಿಶೇಷಾತ್ ಓಂ॥

ವೈಶ್ವಾನರ ಶಬ್ದ ವಾಚ್ಯನು ವಿಷ್ಣುವೇ ಹೊರತು ಪ್ರಸಿದ್ಧವಾದ ಅಗ್ನಿಯಲ್ಲ. ಏಕೆಂದರೆ ವಿಷ್ಣುವಿನಲ್ಲಿಯೇ ನಿಷ್ಠವಾದ ಆತ್ಮಶಬ್ದ ವಿಶೇಷಿತತ್ವವು ವೈಶ್ವಾನರನಲ್ಲಿ ಶ್ರುತವಾಗಿದೆ.

"ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ" ಎಂಬುದಾಗಿ ಪರಮಾತ್ಮನೇ ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಹೀಗೆ ವೈಶ್ವಾನರ ಶ್ರುತಿಗೆ ಸ್ಮೃತಿ ಸಮಾಖ್ಯೆಯೂ ಇದೆ.

**ಅಣುಭಾಷ್ಯ :** "ವಿಶ್ವಜೀವಾಂತರತ್ವಾದ್ಯೈಃ ಲಿಂಗೈಃ ಸರ್ವೈಃ ಯುತಃ ಸ ಹಿ"

ವಿಶ್ವಜೀವಾಂತರತ್ವ ಎಂಬುದೇ ವೈಶ್ವಾನರ ಶಬ್ದಕ್ಕೆ ಪರಮ ಯೌಗಿಕ ವೃತ್ತಿಯಿಂದ ಅರ್ಥವು. ವಿಶ್ವನರ ಸಂಬಂಧಿತ್ವ ಅಂದರೆ ಅಂತಸ್ಥತ್ವ ರೂಪ ಸಂಬಂಧವೆಂದೇ ಅರ್ಥವು.

**ಪಾದಾರ್ಥ ಉಪಸಂಹಾರ**

"ಇತ್ಯಾದ್ಯೈ ಲಿಂಗೈಃ" ಇತ್ಯಾದಿಯಾಗಿ ಹೇಳುವ ಮೂಲಕ ಲೋಕದಲ್ಲಿ ಅನ್ಯತ್ರ ಪ್ರಸಿದ್ಧವಾದ ಲಿಂಗಾತ್ಮಕವಾದ ಎಲ್ಲ ಶಬ್ದಗಳನ್ನೂ ವಿಷ್ಣುವಿನಲ್ಲಿಯೇ ಸಮನ್ವಯ ಮಾಡಿದ್ದಾರೆ. ಮೊದಲನೆಯ ಅಧ್ಯಾಯದ ಎರಡನೆಯ ಪಾದದ ಸಾರಾಂಶವನ್ನು ಇದರಿಂದ ಹೇಳಿದಂತಾಯಿತು.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಮೊದಲನೆಯ ಅಧ್ಯಾಯದ ಎರಡನೆಯ ಪಾದವು ಮುಕ್ತಾಯವಾಯಿತು ॥**

## ಮೊದಲನೆಯ ಅಧ್ಯಾಯದ ಮೂರನೆಯ ಪಾದ

ಈ ಪಾದದಲ್ಲಿ ಉಭಯತ್ರ (ಅಂದರೆ ಲೋಕದಲ್ಲಿ ಹಾಗೂ ವಿಷ್ಣುವಿನಲ್ಲಿ ಹೀಗೆ ಎರಡು ಕಡೆಗಳಲ್ಲಿಯೂ) ಪ್ರಸಿದ್ಧವಾದ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯವನ್ನು ಮಾಡಿ ತೋರಿಸುತ್ತಾರೆ.

### ಅಧಿಕರಣ – ೧

### ॥ದ್ಯುಭ್ವಾಧಿಕರಣ॥

### ॥ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ॥

ಸ್ವರ್ಗ, ಭೂಮಿ, ಇತ್ಯಾದಿ ಲೋಕಗಳಿಗೆ ಮುಖ್ಯಾಶ್ರಯನು ವಿಷ್ಣುವೇ. ಏಕೆಂದರೆ ಈ ವಿಷಯವನ್ನು ಪ್ರಸ್ತಾಪಿಸುವ ಆಥರ್ವಣ ಶ್ರುತಿಯಲ್ಲಿ ''ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ'' ಎಂಬುದಾಗಿ ದ್ಯುಭುವಾದಿಗಳಿಗೆ ಆಶ್ರಯತ್ವ ಹೇಳುವಲ್ಲಿ ಆತ್ಮ ಶಬ್ದವು ಶ್ರುತವಾಗಿದೆ. ಸ್ವಶಬ್ದಕ್ಕೆ ಪರ್ಯಾಯವಾದ ಆತ್ಮಶಬ್ದವು ವಿಷ್ಣುವಿನಲ್ಲಿ ಮಾತ್ರ ಪ್ರಸಿದ್ಧವು.

''ಆತ್ಮ ಬ್ರಹ್ಮಾದಯಃ ಶಬ್ದಾಃ ತಮೃತೇ ವಿಷ್ಣುಮವ್ಯಯಂ ।
ನ ಸಂಭವಂತಿ ಯಸ್ಮಾತ್ತೈಃ ನೈವಾಪ್ತಾ ಗುಣಪೂರ್ಣತಾ ॥''

ಎಂದು ಹೇಳುವ ಬ್ರಹ್ಮಾಂಡ ಪುರಾಣದ ವಾಕ್ಯವು ಇದಕ್ಕೇ ಪ್ರಮಾಣವು.

**ಅಣುಭಾಷ್ಯ** : 'ಸರ್ವಾಶ್ರಯಃ'

ಸರ್ವಸ್ಯ ಎಂದರೆ ದ್ಯುಭುವಾದಿ ಎಲ್ಲಕ್ಕೂ ''ವಿಷ್ಣುರೇವ ಆಶ್ರಯಃ'' ವಿಷ್ಣುವೇ ಆಶ್ರಯನು ಎಂದರ್ಥ.

### ಅಧಿಕರಣ – ೨

### ॥ ಭೂಮಾಧಿಕರಣ ॥

### ॥ ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ ॥

'ಭೂಮಾ' ಎಂದರೆ ಪೂರ್ಣ ಎಂದರ್ಥ. ಭೂಮ ಶಬ್ದ ವಾಚ್ಯನು

ವಿಷ್ಣುವೇ. ಏಕೆಂದರೆ ಅವನು ಸುಖ ಪೂರ್ಣನಾದ್ದರಿಂದ ಪೂರ್ಣ ಪ್ರಮಾಣದಲ್ಲಿ ಪ್ರಸನ್ನನಾಗುವನು. ಪೂರ್ಣಾನುಗ್ರಹ ಮಾಡುವನು ಎಂದರ್ಥ. ''ಯೋ ವೈ ಭೂಮಾ ತತ್ಸುಖಂ'' ಎಂಬುದಾಗಿ ಛಾಂದೋಗ್ಯಶ್ರುತಿಯಲ್ಲಿ ಪೂರ್ಣಸುಖ ಸ್ವರೂಪನೇ ಭೂಮ ಶಬ್ದವಾಚ್ಯನು ಎಂದು ಹೇಳಿದೆ.

**ಅಣುಭಾಷ್ಯ** : ''ಪೂರ್ಣಗುಣಃ''

ಇಲ್ಲಿ ಭೂಮ ಶಬ್ದಕ್ಕೆ ಗುಣಪೂರ್ಣತ್ವವೇ ಪ್ರವೃತ್ತಿನಿಮಿತ್ತವು ಎಂದು ಜ್ಞಾಪಿಸಲು ಭೂಮ ಎನ್ನುವ ಬದಲಿಗೆ ಪೂರ್ಣಗುಣಃ ಎಂದು ಹೇಳಿದ್ದಾರೆ. ಗುಣಪೂರ್ಣ ಎಂದು ಹೇಳದೇ ಪೂರ್ಣಗುಣಃ ಎಂದು ಹೇಳುವುದರಲ್ಲಿಯೂ ಒಂದು ಮುಖ್ಯ ಪ್ರಯೋಜನವಿದೆ. ಪ್ರತ್ಯೇಕವಾಗಿ ಪ್ರತಿಯೊಂದು ಗುಣವೂ ಪೂರ್ಣತ್ವವನ್ನು ಹೊಂದಿರುವುದು ಎಂಬುದಾಗಿ ಇದು ಸೂಚಿಸುತ್ತದೆ.

### ಅಧಿಕರಣ – ೩

### ||ಅಕ್ಷರಾಧಿಕರಣ||

### ||ಓಂ ಅಕ್ಷರಮಂಬರಾಂತಧೃತೇಃ ಓಂ||

ಅಕ್ಷರ ಶಬ್ದ ವಾಚ್ಯನು ವಿಷ್ಣುವೇ. ಏಕೆಂದರೆ ಅಂಬರ ಅಂದರೆ ಆಕಾಶ ಶಬ್ದದಿಂದ ಹೇಳಲ್ಪಡುವ ಯಾವ ಶ್ರೀತತ್ತ್ವಕ್ಕೂ 'ಅಂತೇ' ಆಚೆಯಿದ್ದು ಅವೆಲ್ಲವನ್ನೂ ಧಾರಣ ಮಾಡುವವನೇ ವಿಷ್ಣುವು. ಸರ್ವವನ್ನೂ ಧರಿಸಿರುವ ಆಕಾಶನಾಮಕ ಪ್ರಕೃತಿ ತತ್ವವನ್ನೂ ಧಾರಣ ಮಾಡಿರುವವನು ಶ್ರೀವಿಷ್ಣುವು. ''ಏತಸ್ಮಿನ್ ಖಲು ಅಕ್ಷರೇ ಗಾರ್ಗಿ ಆಕಾಶಃ ಓತಶ್ಚ ಪ್ರೋತಶ್ಚ'' ಇತ್ಯಾದಿಯಾಗಿ ಬೃಹದಾರಣ್ಯದಲ್ಲಿ ಹೇಳಿದೆ.

**ಅಣುಭಾಷ್ಯ** : ''ಸೋಽಕ್ಷರಃ''

ಸಃ ಅಂದರೆ ಈ ಪೂರ್ವದಲ್ಲಿ ಹೇಳಲ್ಪಟ್ಟಿರುವ ವಿಷ್ಣುವೇ ಅಕ್ಷರನು. ಚತುರ್ವಿಧ ನಾಶರಹಿತ್ವ ರೂಪವಾದ ಮಹಾಯೋಗ ಹಾಗೂ ವಿದ್ವತ್ ರೂಢಿ ವೃತ್ತಿಗಳಿಂದ ಅಕ್ಷರ ಶಬ್ದ ವಾಚ್ಯನು ವಿಷ್ಣುವೇ ಹೊರತು ಶ್ರೀತತ್ತ್ವವಲ್ಲ.

## ಅಧಿಕರಣ – ೪

## ॥ ಸದಧಿಕರಣ ॥

## ॥ ಓಂ ಈಕ್ಷತಿಕರ್ಮವ್ಯಪದೇಶಾತ್ ಸಃ ಓಂ ॥

"ಸದೇವ ಸೋಮ್ಯೇದಮಗ್ರ ಆಸೀತ್" ಇತ್ಯಾದಿ ಶ್ರುತನಾದ 'ಸತ್' ಶಬ್ದವಾಚ್ಯನು ವಿಷ್ಣುವೇ ಆಗಿರುವನು. ಏಕೆಂದರೆ ಸತ್ ಶಬ್ದವಾಚ್ಯನಿಗೆ "ತದೈಕ್ಷತ" ಎಂಬುದಾಗಿ ಈಕ್ಷಣಾದಿ ಕರ್ಮವು ಹೇಳಲ್ಪಟ್ಟಿದೆ. ಜಡವಾದ ಪ್ರಕೃತ್ಯಾದಿಗಳಿಗೆ ಈಕ್ಷತ್ಯಾದಿ ವ್ಯಾಪಾರಾಭಾವದ ಪ್ರಯುಕ್ತ 'ಸತ್' ಶಬ್ದವು ಕೂಡುವುದಿಲ್ಲ.

**ಅಣುಭಾಷ್ಯ :** 'ಸನ್'

ವಿಷ್ಣುರೇವ 'ಸನ್' ಅಂದರೆ ಸತ್ ಶಬ್ದವಾಚ್ಯನು ಎಂದರ್ಥ.

## ಅಧಿಕರಣ – ೫

## ॥ ದಹರಾಧಿಕರಣ ॥

## ॥ ಓಂ ದಹರ ಉತ್ತರೇಭ್ಯಃ ಓಂ ॥

ದಹರಾಕಾಶವೆಂದು ಹೇಳಲ್ಪಡುವ ಸೂಕ್ಷ್ಮವಾದ ಹೃದಯ ಕಮಲದಲ್ಲಿರುವವನು ವಿಷ್ಣುವೇ ಹೊರತು ಕೇವಲ ಭೂತಾಕಾಶವಲ್ಲ. ಏಕೆಂದರೆ ಅದೇ ಶ್ರುತಿಯಲ್ಲಿ ಮುಂದಿನ ವಾಕ್ಯದಲ್ಲಿ "ಯ ಆತ್ಮಾ ಅಪಹತಪಾಪ್ಮಾ ವಿಜಿಘಿತ್ಸೋಽಪಿಪಾಸಃ, ಸತ್ಯಕಾಮಃ, ಸತ್ಯಸಂಕಲ್ಪಃ, ಸೋಽನ್ವೇಷ್ಟವ್ಯಃ। ಸ ವಿಜಿಜ್ಞಾಸಿತವ್ಯಃ।" ಇತ್ಯಾದಿಯಾಗಿ ವಿಷ್ಣುಧರ್ಮಗಳನ್ನು ಹೇಳಲಾಗಿದೆ.

**ಅಣುಭಾಷ್ಯ :** 'ಹೃದಬ್ಜಗಃ'

ಹೃದಯ ಪದ್ಮದಲ್ಲಿರುವವನು ವಿಷ್ಣುವೇ ಎಂದರ್ಥ.

## ಅಧಿಕರಣ – ೬

## ॥ ಅನುಕೃತ್ಯಧಿಕರಣ ॥

## ॥ ಓಂ ಅನುಕೃತೇಸ್ತಸ್ಯ ಚ ಓಂ ॥

ಜ್ಞಾನಕ್ಕಾಗಿ ಪ್ರಾರ್ಥಿಸಲ್ಪಡುವ ಜ್ಞಾನಿಗಳಿಗೆ ಅವರ ಸ್ವರೂಪಸುಖವನ್ನು ಪ್ರಕಾಶಿಸುವಂತೆ ಮಾಡಿ, ಅವರ ಪ್ರಾರ್ಥನೆಯನ್ನು ಆನುಕೂಲ್ಯದಿಂದ ಸ್ವೀಕರಿಸುವ ವಿಷ್ಣುವೇ ಇಲ್ಲಿ ಪರಮ ಸುಖಸ್ವರೂಪನೆಂದು ವರ್ಣಿಸಲ್ಪಟ್ಟಿದ್ದಾನೆ. ಇಲ್ಲಿ ಜ್ಞಾನಿ ಸುಖವನ್ನು ಪ್ರತಿಪಾದಿಸಿಲ್ಲ. ಶ್ರುತಿ ಸ್ಮೃತಿಗಳೂ ಇದನ್ನೇ ಹೇಳುತ್ತವೆ. ''ತದೇತದಿತಿ ಮನ್ಯಂತೇऽ ನಿರ್ದೇಶ್ಯಂ ಪರಮಂ ಸುಖಮ್ । ಕಥಮುತದ್ವಿಜಾನೀಯಾಂ ಕಿಮುಭಾತಿ ನ ಭಾತಿ ವಾ ॥'' ಎಂದು ಕಾಠಕ ಶ್ರುತಿಯು ವಿಷ್ಣುವನ್ನೇ ಪರಮ ಸುಖವೆಂದು ಹೇಳುತ್ತದೆ. ''ತಮೇವ ಭಾಂತಂ ಅನುಭಾತಿ ಸರ್ವಂ'', ''ತಸ್ಯ ಭಾಸಾ ಸರ್ವಮಿದಂ ವಿಭಾತಿ'' ಇತ್ಯಾದಿ ಶ್ರುತಿಗಳು ಸಾಕ್ಷಾತ್ ಸರ್ವಜಗತ್ ಪ್ರಕಾಶತ್ವ ಗುಣವುಳ್ಳವನು ವಿಷ್ಣುವೇ ಎಂದು ಹೇಳುತ್ತವೆ. ''ಯದಾದಿತ್ಯ ಗತಂ ತೇಜೋ ಜಗದ್ಭಾಸಯತೇऽಖಿಲಮ್'' ಇತ್ಯಾದಿ ಪ್ರಮಾಣದಿಂದ ವಿಷ್ಣು ಲಿಂಗತ್ವವೇ ಸಮರ್ಥಿತವಾಗುತ್ತದೆ.

**ಅಣುಭಾಷ್ಯ :** ''ಸೂರ್ಯಾದಿ ಭಾಸಕಃ''

ಸೂರ್ಯಾದಿಗಳ ತೇಜಸ್ಸನ್ನು ಪ್ರಕಾಶ ಪಡಿಸುವವನು ವಿಷ್ಣುವೇ ಎಂದರ್ಥ.

## ಅಧಿಕರಣ – ೭

## ॥ವಾಮನಾಧಿಕರಣ॥

## ॥ಓಂ ಶಬ್ದಾದೇವ ಪ್ರಮಿತಃ ಓಂ॥

''ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ। ಊರ್ಧ್ವಂ ಪ್ರಾಣಮುನ್ನಯತಿ ಅಪಾನಂ ಪ್ರತ್ಯಗಸ್ಯತಿ । ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ ॥'' ಹೀಗೆ ಕಾಠಕಶ್ರುತಿಯಲ್ಲಿ ಹೇಳಲ್ಪಟ್ಟಿರುವ ಈಶಾನ ಶಬ್ದವಾಚ್ಯನು ವಾಯುವೇ ಎಂದು ಏಕೆ ಹೇಳಬಾರದು ಎಂದರೆ ಅದು ಸರಿಯಲ್ಲ. ಏಕೆಂದರೆ ''ಮಧ್ಯೇ ವಾಮನಮಾಸೀನಂ''

ಎಂಬುದಾಗಿ ವಾಮನ ಶ್ರುತಿಯಿದೆ. ಕಾಠಕ ಶ್ರುತಿಯಲ್ಲಿ ಉಕ್ತವಾಗಿರುವ ಪ್ರಾಣಾದಿ ವ್ಯವಸ್ಥಾಪಕತ್ವ ಲಿಂಗಕ್ಕಿಂತ ವಾಮನ ಶ್ರುತಿಯು ಪ್ರಬಲವಾಗಿದೆ. ಲಿಂಗಾಪೇಕ್ಷೆಗಿಂತ ಶ್ರುತಿಗೆ ಪ್ರಾಬಲ್ಯವು. ಆದ್ದರಿಂದ ಈಶಾನ ಶಬ್ದವಾಚ್ಯನು ವಿಷ್ಣುವೇ ಆಗಿರುವನು.

**ಅಣುಭಾಷ್ಯ :** ''ಪ್ರಾಣಪ್ರೇರಕಃ''

ಮುಖ್ಯವಾಗಿ ಸರ್ವರಿಗೂ ವಿಷ್ಣುವೇ ಪ್ರಾಣಪ್ರೇರಕನು. ಇದು ವಿಷ್ಣುವಿನದೇ ಆದ ಅಸಾಧಾರಣ ಧರ್ಮವು. ಆದ್ದರಿಂದ ಈಶಾನ ಶಬ್ದವಾಚ್ಯನು ವಿಷ್ಣುವೇ ಆಗಿರುವನು ಎಂದರ್ಥ.

## ಅಧಿಕರಣ – ೮

## ।। ದೇವತಾಧಿಕರಣ ।।

### ।। ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ ।।

ಯೋಗ್ಯ ಅಧಿಕಾರಿಗಳಿಗೆ ವಿದ್ಯೆ ಮತ್ತು ಕರ್ಮಗಳಿಂದ ದೇವಾದಿ ಪದವಿ ಪ್ರಾಪ್ತಿಯ ನಂತರವೂ ದೇವತೆಗಳಿಗೆ ವೇದಾದಿ ವಿದ್ಯಾಧಿಕರವು ಇದ್ದೇ ಇರುವುದು. ದೇವತೆಗಳಿಗೆ ಪದವಿ ಪ್ರಾಪ್ತಿಯ ನಂತರ ವೇದ ವಿದ್ಯೆಗೆ ಅರ್ಥಿತ್ವ (ಬೇಕು ಎಂಬ ಅಪೇಕ್ಷೆ ಇರುವುದಿಲ್ಲವಾದ್ದರಿಂದ ಅವರಿಗೆ ವೇದವಿದ್ಯಾಧಿಕಾರವಿಲ್ಲ ಎಂದು ಹೇಳಬಾರದು. ದೇವಾದಿಪದಯೋಗ್ಯರಿಗೆ ದೇವಾದಿತ್ವ ಪ್ರಾಪ್ತಿಯ ನಂತರವೂ, ಆಯಾ ಪದವಿಗಳು ಅನಿತ್ಯವಾದುದರಿಂದ, ಅವರಿಗೂ ನಿತ್ಯ ಫಲವಾದ ಮೋಕ್ಷಾಪೇಕ್ಷೆಯಿರುವುದು. ಅದಕ್ಕಾಗಿ ವೇದವಿದ್ಯೆಯಿಂದ ಪರಮಾತ್ಮನನ್ನು ಸರಿಯಾಗಿ ತಿಳಿದುಕೊಂಡು ಉಪಾಸನೆ ಮಾಡಬೇಕಾದ್ದು ಅವಶ್ಯಕವು.

**ಅಣುಭಾಷ್ಯ :** ''ದೈವತ್ವೈರಪಿ ಜ್ಞೇಯಃ''

ವೇದ ವಿದ್ಯಾಧಿಕಾರವುಳ್ಳ ದೇವತೆಗಳಿಂದಲೂ ಮೋಕ್ಷಾಖ್ಯ ಫಲಕ್ಕಾಗಿ ವೇದ ಗಳಿಂದ ತಿಳಿಯಲ್ಪಡತಕ್ಕವನು ವಿಷ್ಣುವೇ ಎಂದರ್ಥ. ದೇವಾದಿ ಎಲ್ಲ ಅಧಿಕಾರಿ ಗಳಿಗೂ ವಿಷ್ಣುವನ್ನು ತಿಳಿಯಲು ವೇದಗಳೇ ಮುಖ್ಯ ಉಪಾಯ. ಅನ್ಯಥಾ ಅಸಂಭವವು ಎಂದು ಭಾವ.

## ಅಧಿಕರಣ – ೯

## ॥ಅಪಶೂದ್ರಾಧಿಕರಣ॥

## ॥ಓಂ ಶುಗಸ್ಯ ತದನಾದರ ಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ ಓಂ॥

ಶೂದ್ರರಿಗೆ ವೇದ ವಿದ್ಯಾಧಿಕಾರವಿಲ್ಲ. ಹಾಗಾದರೆ ರೈಕ್ವನಿಂದ ಶೂದ್ರ ಎಂದು ಸಂಬೋಧಿತನಾದ ಪೌತ್ರಾಯಣನಿಗೆ ವೇದವಿದ್ಯಾಧಿಕಾರವು ಹೇಗೆ? ಎಂದು ಕೇಳಿದರೆ ಅದಕ್ಕೆ ಹೇಳುತ್ತಾರೆ –

ಪೌತ್ರಾಯಣನು ಹಂಸಗಳ ಅನಾದರಕೃತ ಮಾತಿನ ಶ್ರವಣದಿಂದ ಶೋಕ ಹೊಂದಿ ಧಾವಿಸಿ ಬಂದಿದ್ದರಿಂದ (ಶುಚಾ ಆದ್ರವಣಾತ್ ಶೂದ್ರಃ) ಶೂದ್ರ ಎಂದು ಸಂಭೋಧಿಸಲ್ಪಟ್ಟಿದ್ದೇ ಹೊರತು ಶೂದ್ರ ಜಾತಿ ಎಂಬರ್ಥದಲ್ಲಿ ಹೇಳಲ್ಪಟ್ಟಿಲ್ಲ. ಏಕೆಂದರೆ ರೈಕ್ವರು ಪೌತ್ರಾಯಣನನ್ನು 'ಶೂದ್ರ' ಎಂದು ಸಂಬೋಧಿಸುವ ಸಂದರ್ಭದಲ್ಲಿ 'ಕ್ಷತ್ತಾರಮುವಾಚ' ಎಂಬುದಾಗಿ ಶೋಕ ಜ್ಞಾಪಿಸುವ ವ್ಯಗ್ರೋಕ್ತಿಯ ಪ್ರಯೋಗವಿದೆ. ಅಲ್ಲದೆ ಚೈತ್ರ ರಥ ಲಿಂಗದಿಂದ ಕ್ಷತ್ರಿಯತ್ವವು ಸೂಚಿತವಾಗಿದೆ.

**ಅಣುಭಾಷ್ಯ** : "ಜ್ಞೇಯೋ ನ ವೇದೈಃ ಶೂದ್ರಾದ್ಯೈಃ"

ಇಲ್ಲಿ ಆದಿ ಶಬ್ದದಿಂದ ಸಾಧಾರಣ ಸ್ತ್ರೀಯರನ್ನು ಹಾಗೂ ವರ್ಣಬಾಹ್ಯರನ್ನೂ ಗ್ರಹಿಸತಕ್ಕದ್ದು. ಶೂದ್ರಾದಿಗಳಿಗೆ ಉಪನಯನಾದಿ ಸಂಸ್ಕಾರವಿರುವುದಿಲ್ಲ. ಆದ್ದರಿಂದ ವೇದ ವಿದ್ಯಾಧಿಕಾರವಿಲ್ಲ. ಅವರೇನಿದ್ದರೂ ಇತಿಹಾಸ, ಪುರಾಣಾದಿಗಳ ಶ್ರವಣಾದಿಗಳಿಂದ ವಿಷ್ಣುವನ್ನು ತಿಳಿದುಕೊಳ್ಳಬೇಕು ಎಂದು ತಾತ್ಪರ್ಯ.

## ಅಧಿಕರಣ – ೧೦

## ॥ ಕಂಪನಾಧಿಕರಣ ॥

## ॥ ಓಂ ಕಂಪನಾತ್ ಓಂ ॥

ಶ್ರುತ್ಯುಕ್ತ ವಜ್ರಶಬ್ದವಾಚ್ಯನು ವಿಷ್ಣುವೇ. ಏಕೆಂದರೆ ಕಾಠಕಶ್ರುತಿಯಲ್ಲಿ

ವಜ್ರಶಬ್ದ ವಾಚ್ಯನಿಗೆ 'ಏಜತಿ' ಎಂಬುದಾಗಿ ಸಕಲ ಜಗತ್ ಚೇಷ್ಟಕತ್ವ ರೂಪವಾದ ನಿರವಕಾಶ ಲಿಂಗವು ಹೇಳಲ್ಪಟ್ಟಿದೆ. ಯಾರು ಈ ವಜ್ರನನ್ನು ತಿಳಿಯುತ್ತಾರೆ ಅವರು ಮುಕ್ತರಾಗುತ್ತಾರೆ ಎಂಬುದಾಗಿ ಅಲ್ಲಿಯೇ ಮುಂದಿನ ವಾಕ್ಯದಲ್ಲಿ ಹೇಳಿದೆ. "ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಸ್ಸೃತಮ್ । ಮಹದ್ ಭಯಂ ವಜ್ರಮುದ್ಯತಂ ಯ ಏತದ್ವಿದುಃ ಅಮೃತಾಃ ತೇ ಭವಂತಿ॥" ಎಂಬುದಾಗಿ ಕಾಠಕಶ್ರುತಿಯು. ಆದ್ದರಿಂದ ವಜ್ರಶಬ್ದವು ವಿಷ್ಣುವನ್ನೇ ಹೇಳುತ್ತದೆ ಹೊರತು ಇಂದ್ರನ ಆಯುಧವಾದ ವಜ್ರವಲ್ಲ.

**ಅಣುಭಾಷ್ಯ :** 'ಕಂಪಕಃ'

ಸಕಲ ಜಗತ್ ಚೇಷ್ಟಕಃ ಎಂದರ್ಥ. ಆದ್ದರಿಂದ ವಿಷ್ಣುವೇ ಇಲ್ಲಿ ವಜ್ರ ಶಬ್ದವಾಚ್ಯನು ಎಂದು ತಾತ್ಪರ್ಯ.

## ಅಧಿಕರಣ — ೧೧

## ॥ಜ್ಯೋತಿರಧಿಕರಣ॥

## ॥ಓಂ ಜ್ಯೋತಿರ್ದರ್ಶನಾತ್ ಓಂ॥

ಜ್ಯೋತಿಃ ಶಬ್ದ ವಾಚ್ಯನು ವಿಷ್ಣುವೇ. ಏಕೆಂದರೆ "ವಿಷ್ಣುರೇವ ಜ್ಯೋತಿಃ" ಎಂಬುದಾಗಿ ಚತುರ್ವೇದ ಶಿಖೆಯಲ್ಲಿ ಹೇಳಿದೆ. "ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ ಉಭೌ ಲೋಕಾವನುಸಂಚರತಿ" ಎಂಬುದಾಗಿ ಬೃಹದಾರಣ್ಯದಲ್ಲಿ ಹೇಳಿರುವ ಜ್ಯೋತಿಯು ವಿಷ್ಣುವೇ, ಜೀವನಲ್ಲ. "ಉಭಯ ಲೋಕಗಳಲ್ಲಿ ಅನುಸಂಚರಣ' ಎಂಬ ಜೀವ ಲಿಂಗವಿದ್ದರೂ, "ಪ್ರಾಜ್ಞೇನ ಆತ್ಮನಾನ್ವಾರೂಢಃ ಉತ್ಸರ್ಜದ್ಯತಿ" ಅಂದರೆ "ಜೀವನನ್ನು ಕರೆದುಕೊಂಡು ಈಶ್ವರನೇ ಉಭಯಲೋಕಸಂಚರಣ ಮಾಡುವನು" ಎಂದು ವಿಷ್ಣುವಿನ ಧರ್ಮವೇ ಹೇಳಲ್ಪಟ್ಟಿದೆ.

## ಅಧಿಕರಣ – ೧೨

## ॥ ಆಕಾಶಾಧಿಕರಣ ॥

**॥ಓಂ ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್ ಓಂ॥**

ಆಕಾಶಶಬ್ದವಾಚ್ಯನು ವಿಷ್ಣುವೇ ಹೊರತು ಪ್ರಸಿದ್ಧ ಆಕಾಶವಲ್ಲ. ಏಕೆಂದರೆ ಆಕಾಶಕ್ಕೆ ಅರ್ಥಾಂತರವು ಹೇಳಲ್ಪಟ್ಟಿದೆ. ಅಂದರೆ ವಿಷ್ಣುವಿಗೇ ಸಂಬಂಧಿಸಿದ ನಾಮರೂಪರಾಹಿತ್ಯ ರೂಪವಾದ ವಿಲಕ್ಷಣವಾದ ಅರ್ಥವು ಹೇಳಿದೆ.

ಬ್ರಹ್ಮತ್ವ, ಅಮೃತತ್ವ ಇತ್ಯಾದಿ ವಿಷ್ಣುವಿನ ಧರ್ಮಗಳೂ ಅಲ್ಲಿ ಹೇಳಲ್ಪಟ್ಟಿವೆ.

ಅಣುಭಾಷ್ಯದಲ್ಲಿ ಇವೆರಡು ಅಧಿಕರಣಗಳ ತಾತ್ಪರ್ಯವನ್ನು ಶ್ರೀಮದಾಚಾರ್ಯರು ಇಲ್ಲಿ ಪ್ರತ್ಯೇಕವಾಗಿ ಹೇಳಿಲ್ಲ. ಪ್ರಥಮ ಪಾದದಲ್ಲಿ ಸಮನ್ವಿತವಾದ ಶಬ್ದ ಸಮನ್ವಯದಲ್ಲಿಯೇ ಈ ವಿಷಯವು ಹೇಳಲ್ಪಟ್ಟಿದೆ.

**ಅಧಿಕರಣ – ೧೩**

**॥ ಸುಷುಪ್ತ್ಯಧಿಕರಣ ॥**

**॥ ಓಂ ಸುಷುಪ್ತ್ಯುತ್ಕ್ರಾಂತ್ಯೋಃ ಭೇದೇನ ಓಂ ॥**

ಸ್ವಪ್ನಾದಿ ದ್ರಷ್ಟನು ವಿಷ್ಣುವೇ ಹೊರತು ಜೀವನಲ್ಲ. ಸುಷುಪ್ತಿ ಮತ್ತು ಉತ್ಕ್ರಾಂತಿ ಪ್ರಕರಣಗಳಲ್ಲಿ ಜೀವೇಶರಿಗೆ ಭೇದವೇ ಹೇಳಲ್ಪಟ್ಟಿದೆ. ಸ್ವಪ್ನಾದಿದ್ರಷ್ಟೃವಾದ ವಿಷ್ಣುವಿಗೆ ಅಸಂಗತ್ವ ಹೇಳಲ್ಪಟ್ಟಿದೆ. "ಅಸಂಗೋ ಹ್ಯಯಂ ಪುರುಷಃ" ಎಂದು. ಈಶ – ಜೀವರಿಗೆ ಅಭೇದವಿರುವುದರಿಂದ ಜೀವನೇ ಇಲ್ಲಿ ಉಕ್ತನಾಗಿದ್ದಾನೆ ಎಂದು ಹೇಳುವುದು ಅಯುಕ್ತವು. "ಪ್ರಾಜ್ಞೇನಾತ್ಮನಾಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ ನಾಂತರಮ್" ಈ ಪ್ರಕಾರವಾಗಿ ಜೀವ – ಈಶರಿಗೆ ಭೇದವೇ ಹೇಳಲ್ಪಟ್ಟಿದೆ.

**ಅಣುಭಾಷ್ಯ :** "ಅನ್ಯಶ್ಚ ಜೀವತಃ"

ಪರಮಾತ್ಮನು ಜೀವನಿಂದ ಭಿನ್ನನೇ ಆಗಿರುವನು ಎಂದರ್ಥ.

**ಅಧಿಕರಣ – ೧೪**

**॥ ಬ್ರಾಹ್ಮಣಾಧಿಕರಣ ॥**

**॥ ಓಂ ಪತ್ಯಾದಿ ಶಬ್ದೇಭ್ಯಃ ಓಂ ॥**

ಬ್ರಾಹ್ಮಣ ಶಬ್ದವಾಚ್ಯನು ವಿಷ್ಣುವೇ. ಏಕೆಂದರೆ ''ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ'' ''ನ ಕರ್ಮಣಾ ವರ್ಧತೇ ನೋ ಕನೀಯಾನ್'' ''ಸರ್ವಸ್ಯ ವಶೀ, ಸರ್ವಸ್ಯ ಈಶಾನಃ, ಸರ್ವಸ್ಯಾಧಿಪತಿಃ, ಏಷ ಸರ್ವೇಶ್ವರಃ'' ಇತ್ಯಾದಿ ಬೃಹದಾರಣ್ಯ ಉಪನಿಷತ್ತಿನ ವಾಕ್ಯಗಳು ಬ್ರಾಹ್ಮಣ ಶಬ್ದ ವಾಚ್ಯನಿಗೆ ಸರ್ವಾಧಿಪತಿತ್ವಾದಿ ವಿಷ್ಣುಧರ್ಮಗಳನ್ನೇ ಹೇಳುತ್ತವೆ. 'ಬ್ರಹ್ಮಣಾ ಅಣ್ಯತೇ'' ಅಂದರೆ ವೇದದಿಂದ ತಿಳಿಯಲ್ಪಡುತ್ತಾನೆ ಎಂಬ ಯೌಗಿಕ ಉತ್ಪತ್ತಿಯಿಂದಲೂ ವಿಷ್ಣುವಿಗೇನೆ ಬ್ರಾಹ್ಮಣ ಶಬ್ದ ವಾಚ್ಯತ್ವವು ಕೂಡುತ್ತದೆ.

**ಅಣುಭಾಷ್ಯ :** ''ಪತಿತ್ವಾದಿ ಗುಣೈರ್ಯುಕ್ತಃ''

ಆದಿಶಬ್ದದಿಂದ ವಶಿತ್ವಾದಿ ವಿಷ್ಣುಧರ್ಮಗಳನ್ನು ಗ್ರಹಿಸಬೇಕು. ಪತಿತ್ವಾದಿ ಗುಣಗಳಿಂದ ಯುಕ್ತನಾದುದರಿಂದ ಬ್ರಾಹ್ಮಣ ಶಬ್ದವಾಚ್ಯನು ವಿಷ್ಣುವೇ ಹೊರತು ವಿರಿಂಚಿಯಲ್ಲ ಎಂದು ತಾತ್ಪರ್ಯ.

**ಪಾದಾರ್ಥ ಉಪಸಂಹಾರ**

''ತದನ್ಯತ್ರ ವಾಚಕೈಃ । ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ ॥''

'ತದ್' ಅಂದರೆ 'ತಸ್ಮಾತ್' ಆದ್ದರಿಂದ ಎಂಬುದಾಗಿ ಒಂದರ್ಥ, 'ತಸ್ಮಿನ್' ಅಂದರೆ 'ವಿಷ್ಣೌ' ಎಂದು ಮತ್ತೊಂದರ್ಥ. 'ವಾಚಕೈಃ' ಎಂಬುದನ್ನು 'ಉಭಯತ್ರ' ಎಂದು ಕೂಡಿಸಿಕೊಂಡು ಓದಬೇಕು. ಅಂದರೆ ಉಭಯತ್ರ ಪ್ರಸಿದ್ಧವಾದ ಎಲ್ಲ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳಿಂದಲೂ ಪರಮಮುಖ್ಯ ವೃತ್ತಿಯಿಂದ ವಿಷ್ಣುವೊಬ್ಬನೇ ವಾಚ್ಯನು ಎಂದು ಮೊದಲನೆಯ ಅಧ್ಯಾಯ ಮೂರನೆಯ ಪಾದದ ಸಾರಸಂಗ್ರಹನ್ನು ಈ ಪ್ರಕಾರವಾಗಿ ಶ್ರೀಮದಾಚಾರ್ಯರು ಇಲ್ಲಿ ಅಣುಭಾಷ್ಯದಲ್ಲಿ ಮಾಡಿ ತೋರಿಸಿದ್ದಾರೆ.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಮೊದಲನೆಯ ಅಧ್ಯಾಯದ ಮೂರನೆಯ ಪಾದವು ಮುಕ್ತಾಯವಾಯಿತು ॥**

# ಮೊದಲನೆಯ ಅಧ್ಯಾಯದ ನಾಲ್ಕನೆಯ ಪಾದ

ಈ ಪಾದದಲ್ಲಿ ಬೇರೆ ಕಡೆಯಲ್ಲಿಯೇ (ಅನ್ಯತ್ರೈವ) ಪ್ರಸಿದ್ಧವಾದ ಉಭಯ ರೂಪಾತ್ಮಕ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುತ್ತಾರೆ.

## ಅಧಿಕರಣ – ೧

## ॥ ಆನುಮಾನಿಕಾಧಿಕರಣ ॥

**॥ ಓಂ ಆನುಮಾನಿಕಮಪ್ಯೇಕೇಷಾಂ ಇತಿ ಚೇನ್ನ ಶರೀರ ರೂಪಕ ವಿನ್ಯಸ್ತ ಗೃಹಿತೇಃ ದರ್ಶಯತಿ ಚ ಓಂ ॥**

ಅನುಮಾನ ಪರಿಕಲ್ಪಿತವಾದ ಪ್ರಧಾನಾದಿಗಳೇ ಅವ್ಯಕ್ತಾದಿ ಪದಗಳಿಂದ ಕೆಲವು ವೇದಶಾಖೆಗಳಲ್ಲಿ ಹೇಳಲ್ಪಡುತ್ತವೆ ಎಂದು ಹೇಳುವುದು ಅಯುಕ್ತವು. ಆ ಶಾಖೆಗಳಲ್ಲಿಯೂ ಅವ್ಯಕ್ತಾದಿ ಶಬ್ದಗಳಿಂದ ವಿಷ್ಣುವೇ ಹೇಳಲ್ಪಟ್ಟಿದ್ದಾನೆ. ಏಕೆಂದರೆ ಹಾಗೆ ಪಿಪ್ಪಲಾದ ಶಾಖೆಯ ಶ್ರುತಿಯಲ್ಲಿ ಹೇಳಿದೆ – ''ಅವ್ಯಕ್ತಮಚಲಂ ಶಾಂತಂ ನಿಷ್ಕಲಂ ನಿಷ್ಕ್ರಿಯಂ ಪರಮ್ । ಯೋ ವೇದ ಹರಿಮಾತ್ಮಾನಂ ಸ ಭಯಾದನುಮುಚ್ಯತೇ ॥'' ಭಗವದ್ಗೀತೆಯಲ್ಲಿಯೂ ''ಅಕ್ಷರಂ ಪರಮಂ ಬ್ರಹ್ಮ'' ''ಅವ್ಯಕ್ತೋಽಕ್ಷರ ಇತ್ಯುಕ್ತಃ'' ಇತ್ಯಾದಿಯಾಗಿ ಅವ್ಯಕ್ತಾದಿಗಳು ಪರಬ್ರಹ್ಮನನ್ನೇ ಹೇಳುತ್ತವೆ ಎಂಬುದನ್ನು ದೃಢಪಡಿಸುತ್ತದೆ. ಪ್ರಧಾನಾದಿಗಳು ಸ್ವತಂತ್ರವಲ್ಲ. ಪಾರತಂತ್ರ್ಯವಾದ ಶರೀರವುಳ್ಳ ಪ್ರಧಾನಾದಿಗಳಲ್ಲಿ ಅವ್ಯಕ್ತನಾಗಿ ಒಳಗಿರುವ ಸ್ವತಂತ್ರವಾದ ವಿಷ್ಣುವನ್ನು ಪ್ರಧಾನಾದಿ ಶರೀರ ರೂಪಕತ್ವದ ಕಾರಣ ಅವ್ಯಕ್ತ ಪ್ರಕೃತಿ, ಪಧಾನ ಇತ್ಯಾದಿ ಪದಗಳಿಂದ ವ್ಯವಹರಿಸುತ್ತಾರೆ. ಪ್ರಕೃತ್ಯಾದಿಗಳಲ್ಲಿದ್ದು ಅವುಗಳ ಪ್ರವೃತ್ತಿಗೆ ನಿಮಿತ್ತವಾದ್ದರಿಂದ ವಿಷ್ಣುವನ್ನು ಆಯಾ ಪದಗಳಿಂದ ಹೇಳುತ್ತಾರೆ. ಪರಮಮುಖ್ಯ ವೃತ್ತಿಯಿಂದ ಅವ್ಯಕ್ತ ಪ್ರಧಾನಾದಿ ಶಬ್ದಗಳಿಂದ ವಿಷ್ಣುವೇ ವಾಚ್ಯನು ಎಂದರ್ಥ.

**ಅಣುಭಾಷ್ಯ :** 'ಅವ್ಯಕ್ತಃ'

''ಅವ್ಯಕ್ತ ಶಬ್ದವಾಚ್ಯೋ ವಿಷ್ಣುರೇವ'' ಅವ್ಯಕ್ತ ಶಬ್ದವಾಚ್ಯನು ವಿಷ್ಣುವೇ, ಪ್ರಧಾನಾದಿಗಳಲ್ಲ ಎಂದು ತಾತ್ಪರ್ಯ.

## ಅಧಿಕರಣ – ೨

## ॥ ಜ್ಯೋತಿರುಪಕ್ರಮಾಧಿಕರಣ ॥

## ॥ ಓಂ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತ ಏಕೇ ಓಂ ॥

"ವಸಂತೇ ವಸಂತೇ ಜ್ಯೋತಿಷಾ ಯಜೇತ" ಇತ್ಯಾದಿ ಶ್ರುತ್ಯುಕ್ತವಾದ ಜ್ಯೋತಿಯೇ ಮೊದಲಾದ ಶಬ್ದಗಳಿಂದ ವಿಷ್ಣುವೇ ವಾಚ್ಯನು. ಜ್ಯೋತಿಷ್ಟೋಮಾದಿ ಕರ್ಮ, ತದಂಗಗಳಲ್ಲ. ಏಕೆಂದರೆ ಒಂದು ಶಾಖಿಗಳು "ಏಷ ಇಮಂ ಲೋಕಂ ಅಭ್ಯಾರ್ಚತ್" ಎಂದು ಉಪಕ್ರಮಿಸಿ, ವಿಶೇಷವಾಗಿ ಜ್ಯೋತಿರಾದಿ ಶಬ್ದವಾಚ್ಯತ್ವ ರೂಪದಿಂದ "ತಾ ವಾ ಏತಾ ಸರ್ವಾ ಋಚಃ" ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವಂತೆ ವಿಷ್ಣುವನ್ನು ಅಧ್ಯಯನ ಮಾಡುತ್ತಾರೆ. ಕರ್ಮ, ತದಂಗವಾದ ಸರ್ವಶಬ್ದವಾಚ್ಯತ್ವ ವನ್ನು ವಿಷ್ಣುವಿಗೆ ಹೇಳುವುದರಿಂದ ಕರ್ಮಾದಿಗಳಿಗೆ ಅಸಿದ್ಧಿ ಬರುವುದಿಲ್ಲ. ಆಯಾ ಕರ್ಮವಾಚಕ ಶಬ್ದಗಳು ರೂಢಿ ವೃತ್ತಿಯಿಂದ ಕರ್ಮಗಳನ್ನು ಹೇಳುತ್ತವೆ. ಆದರೆ ಅವೆಲ್ಲಕ್ಕೂ ಮುಖ್ಯಕಾರಣೀಭೂತನಾದ ಹಾಗೂ ಮುಖ್ಯ ಫಲರೂಪಕನಾದ ವಿಷ್ಣುವೇ ಪರಮ ಮುಖ್ಯ ವೃತ್ತಿಯಿಂದ ಆಯಾ ಕರ್ಮಾಂಗ ಪದಗಳಿಂದ ವಾಚ್ಯನು ಎಂದು ತಿಳಿಯತಕ್ಕದ್ದು.

**ಅಣುಭಾಷ್ಯ :** "ಕರ್ಮ ವಾಕ್ಯೈಶ್ಚ ವಾಚ್ಯಃ ವಿಷ್ಣುರೇವ"

ಕರ್ಮ, ತದಂಗ, ತತ್ಕ್ರಮ, ದೇಶ, ಕಾಲ, ಅಧಿಕಾರಿ ಇತ್ಯಾದಿ ವಾಚಕಗಳಾದ ಅನ್ಯತ್ರ ಪ್ರಸಿದ್ಧವಾದ ಶಬ್ದಗಳಿಂದಲೂ ಮುಖ್ಯತಃ ವಿಷ್ಣುವೇ ವಾಚ್ಯನು ಎಂದರ್ಥ.

## ಅಧಿಕರಣ – ೩

## ॥ ನ ಸಂಖ್ಯೋಪಸಂಗ್ರಹಾಧಿಕರಣ ॥

## ॥ ಓಂ ನ ಸಂಖ್ಯೋಪಸಂಗ್ರಹಾದಪಿ ನಾನಾ ಭಾವಾದತೀರೇಕಾಚ್ಚ ಓಂ ॥

ಪಂಚಜನಾದಿ ಶಬ್ದವಾಚ್ಯನು ವಿಷ್ಣುವೇ. ಏಕೆಂದರೆ ಎಲ್ಲವೂ ಅವನ ಅಧೀನವೇ ಆಗಿವೆ. "ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ" ಹೀಗೆ ಶ್ರುತ್ಯುಕ್ತವಾದ ಬಹುಸಂಖ್ಯಾವಾಚಕ ಶಬ್ದ ಸಂಗ್ರಹಕ್ಕೆ ಇದರಿಂದ ವಿರೋಧ

ಬರುವುದಿಲ್ಲ. ಏಕೆಂದರೆ ವಿಷ್ಣುವು ಒಬ್ಬನೇ ಆಗಿದ್ದರೂ ಅನೇಕ ರೂಪತ್ವವನ್ನು ಹೊಂದಿರುವನು. ಸ್ವಗತಭೇದ ಶೂನ್ಯನಾಗಿದ್ದರೂ ಪ್ರತಿಶರೀರದಲ್ಲೂ ಪ್ರಾಣಾದಿ ಪಂಚಜನರನ್ನು ನಿಯಮನ ಮಾಡಲಿಕ್ಕಾಗಿ ಬಹುರೂಪತ್ವವನ್ನು ಹೊಂದುವುದ ರಿಂದ ವಿಷ್ಣುವಿಗೆ ಬಹುತ್ವವು ಯುಕ್ತವೇ ಆಗಿದೆ.

**ಅಣುಭಾಷ್ಯ** : ''ಏಕೋಽಮಿತಾತ್ಮಕಃ''

ವಿಷ್ಣುವು ಒಬ್ಬನೇ ಆಗಿದ್ದರೂ ಬಹುರೂಪಾತ್ಮಕ ಎಂದರ್ಥ. ಇಲ್ಲಿ ಅಮಿತಾತ್ಮಕ ಎಂದು ಹೇಳಿರುವುದರಿಂದ ರೂಪ – ರೂಪಿ ಭೇದವು ಇಲ್ಲ ಎಂದು ಸೂಚಿಸಿದ್ದಾರೆ. ಹಾಗಿಲ್ಲದಿದ್ದರೆ 'ಅಮಿತರೂಪವಾನ್' ಎಂದು ಹೇಳಬೇಕಿತ್ತು. ಶ್ರುತಿಯಲ್ಲಿರುವ ಪಂಚಜನ ಶಬ್ದ ಸಮನ್ವಯಕ್ಕಾಗಿ ಪಂಚರೂಪಾತ್ಮಕ ಎಂದೇ ಹೇಳಬೇಕಿತ್ತು. ಅಮಿತಾತ್ಮಕ ಎಂದು ಹೇಳಿದ್ದು ಅಸಂಗತ ಎಂದು ಹೇಳುವುದು ಯುಕ್ತವಲ್ಲ. ಪಂಚಜನ ಎಂಬುದು ಬಹುತ್ವ ಸಂಖ್ಯಾವಾಚಕವು. ಆದ್ದರಿಂದ ಬಹುಸಂಖ್ಯಾ ವಿಶಿಷ್ಟ ವಾಚಕತ್ವವನ್ನು ಸಮರ್ಥಿಸಿಲು ಇಲ್ಲಿ 'ಅಮಿತಾತ್ಮಕ' ಎಂದು ಹೇಳಿರುವುದು ಯುಕ್ತವೇ ಆಗಿದೆ. ಬಹುತ್ವದಲ್ಲಿ ಪಂಚತ್ವವೂ ಸೇರಿದೆ.

## ಅಧಿಕರಣ – ೪
## ॥ ಆಕಾಶಾಧಿಕರಣ ॥
## ॥ಓಂ ಕಾರಣತ್ವೇನ ಚ ಆಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ ಓಂ॥

ಕಾರಣತ್ವದಿಂದಲೂ ಕಾರ್ಯತ್ವದಿಂದಲೂ ಸಹ ಆಕಾಶಾದಿ ಶಬ್ದ ವಾಚ್ಯನು ವಿಷ್ಣುವೇ ಆಗಿರುವನು. ಹಾಗಾದರೆ ಕಾರ್ಯ – ಕಾರಣ ವಿರೋಧ ಬರುವು ದಿಲ್ಲವೇ ಎಂದು ಆಕ್ಷೇಪಿಸಿದರೆ, ಆಕಾಶಾದಿಗಳಲ್ಲಿ ಅಂತರ್ಯಾಮಿತ್ವೇನ ನಿಂತು ವಿಷ್ಣುವೇ ಕಾರ್ಯ – ಕಾರಣಗಳಿಗೆ ನಿಯಾಮಕನಾಗಿರುವುದರಿಂದ ಕಾರ್ಯ – ಕಾರಣ ವಿರೋಧ ಬರುವುದಿಲ್ಲ. ''ಯ ಆಕಾಶೇ ತಿಷ್ಠನ್, ಯೋ ವಾಯೌ ತಿಷ್ಠನ್'' ಇತ್ಯಾದಿಗಳಲ್ಲಿ ಆಕಾಶಾದಿಗಳಲ್ಲಿ ಸ್ಥಿತತ್ವ ಹೇಳಲ್ಪಟ್ಟಿದೆ. ಹಾಗಿದ್ದರೂ ವಿಷ್ಣುವೇ ಏಕೆ ಎಂದರೆ, ''ಸ ಯೋಽತೋ ಶ್ರುತಃ'' ''ಯಮಾಕಾಶೋ ನ ವೇದ''

ಇತ್ಯಾದಿಗಳಲ್ಲಿ ವಿಷ್ಣುವು ಅವುಗಳಲ್ಲಿದ್ದರೂ ಅವುಗಳಿಗೆ ಅವ್ಯಕ್ತನಾಗಿಯೇ ಇರುವನು ಎಂದು ಹೇಳಲಾಗಿದೆ.

**ಅಣುಭಾಷ್ಯ :** ''ಅವಾಂತರಂ ಕಾರಣಂ ಚ''

ವಿಷ್ಣುವು ಕೇವಲ ಮೂಲಕಾರಣವಾಚಕವಾದ ಆತ್ಮ ಶಬ್ದವಾಚ್ಯ ಮಾತ್ರವೇ ಅಲ್ಲ, ಜೊತೆಗೆ ಅವಾಂತರ ಕಾರಣ ಆಕಾಶಾದಿ ಶಬ್ದ ವಾಚ್ಯನೂ ವಿಷ್ಣುವೇ ಎಂದರ್ಥ. ''ಆತ್ಮಾನಃ ಆಕಾಶಃ ಸಂಭೂತಃ, ಆಕಾಶಾದ್ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥಿವೀ, ಪೃಥಿವ್ಯಾ ಓಷಧಯಃ, ಓಷಧಿಭ್ಯೋಽನ್ನಂ'' ಹೀಗೆ ಶ್ರುತ್ಯುಕ್ತ ಅವಾಂತರ ಕಾರಣ ಆಕಾಶಾದಿ ಶಬ್ದವಾಚ್ಯನು ವಿಷ್ಣುವೇ ಆಗಿರುವನು. 'ಚ' ಶಬ್ದವು 'ಅಪಿ' ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಆದ್ದರಿಂದ ಮೂಲ ಕಾರಣನಷ್ಟೇ ಅಲ್ಲ ಎಂದು ತಿಳಿಯಬೇಕು.

## ಅಧಿಕರಣ - ೫

## ॥ ಸಮಾಕರ್ಷಾಧಿಕರಣ ॥

'ಸಮಾಕರ್ಷಾತ್' ಇತ್ಯಾದಿ ಎಂಟು ಸೂತ್ರ ಯುಕ್ತವಾದ ೫ನೇ 'ಸಮಾಕರ್ಷಾಧಿಕರಣ'ದ ತಾತ್ಪರ್ಯವನ್ನು ಇಲ್ಲಿ ಸಂಗ್ರಹಿಸಿಲ್ಲ. ಇದು 'ಕಾರಣತ್ವೇನ' ಎಂಬ ಆಕಾಶಾಧಿಕರಣದ ಶೇಷವಾದ್ದರಿಂದ ಶ್ರೀಮದಾಚಾರ್ಯರು ಇಲ್ಲಿ ಪ್ರತ್ಯೇಕವಾಗಿ ಇದರ ತಾತ್ಪರ್ಯವನ್ನು ಸಂಗ್ರಹಿಸಿಲ್ಲ ಎಂಬುದಾಗಿ ತತ್ತ್ವ ಪ್ರದೀಪ ಮೊದಲಾದ ಗ್ರಂಥಗಳಲ್ಲಿ ಸಮರ್ಥಿಸಿದ್ದಾರೆ.

## ಅಧಿಕರಣ – ೬

## ॥ ಪ್ರಕೃತ್ಯಧಿಕರಣ ॥

**॥ ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ ॥**

ವಿಷ್ಣುವು ಕೇವಲ ಪುಲ್ಲಿಂಗ ಶಬ್ದವಾಚ್ಯ ಮಾತ್ರವಲ್ಲ, ಪ್ರಕೃತ್ಯಾದಿ ಸ್ತ್ರೀಲಿಂಗ ಶಬ್ದಗಳಿಂದಲೂ ವಾಚ್ಯನು. ''ಹಂತ ಏತಮೇವ ಪುರುಷಂ ಸರ್ವಾಣಿ ನಾಮಾನಿ

ಅಭಿವದಂತಿ'' ಎಂಬ ಶ್ರುತಿಯಲ್ಲಿ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ಪ್ರತಿಜ್ಞಾ ಪೂರ್ವಕವಾಗಿ ಹೇಳಿದೆ. ಅದೇ ಶ್ರುತಿಯಲ್ಲಿಯೇ ''ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮಭಿವಿಶಂತಿ । ಏವಮೇವ ಏತಾನಿ ನಾಮಾನಿ'' ಎಂಬುದಾಗಿ ನದಿ, ಸಮುದ್ರ ದೃಷ್ಟಾಂತವನ್ನು ನೀಡಿ ಸರ್ವಶಬ್ದವಾಚ್ಯತ್ವವನ್ನು ಸಮರ್ಥಿಸಲಾಗಿದೆ. ಭಗವಂತನು ಮೋಹಿನ್ಯಾದಿ ಅವತಾರಗಳಲ್ಲಿ ಸ್ತ್ರೀರೂಪತ್ವ ವನ್ನು ತೋರಿಸಿರುವುದರಿಂದ ಸ್ತ್ರೀಶಬ್ದವಾಚ್ಯತ್ವವು ಅಯುಕ್ತವಲ್ಲ. ಈ ವಿಷಯದಲ್ಲಿ ಪ್ರಮಾಣದ ಅಭಾವವೂ ಇಲ್ಲ. ''ಏಷ ಸ್ತ್ರೀ ಏಷ ಪುರುಷಃ, ಏಷ ಪ್ರಕೃತಿಃ'' ಎಂಬುದಾಗಿ ಶ್ರುತಿಯಿದೆ.

**ಅಣುಭಾಷ್ಯ** : 'ಪ್ರಕೃತಿಃ'

ಪರಮಾತ್ಮನಿಗೆ ಪ್ರಕೃತ್ಯಾದಿ ಸ್ತ್ರೀಶಬ್ದವಾಚ್ಯತ್ವವು ಕೂಡುತ್ತದೆ ಎಂದರ್ಥ.

## ಅಧಿಕರಣ – ೭

## ॥ ಏತೇನ ಸರ್ವವ್ಯಾಖ್ಯಾತಾಧಿಕರಣ ॥

## ॥ ಓಂ ಏತೇನ ಸರ್ವೇ ವ್ಯಾಖ್ಯಾತಾಃ ವ್ಯಾಖ್ಯಾತಾಃ ಓಂ ॥

ಎಲ್ಲವೂ ಪರಮಾತ್ಮನ ಅಧೀನ ಇತ್ಯಾದಿಯಾಗಿ ಈ ಹಿಂದೆ ಹೇಳಿದ ಯುಕ್ತಿಸಮೂಹದಿಂದ ಶೂನ್ಯ ಮೊದಲಾದ ಎಲ್ಲ ಶಬ್ದಗಳೂ ಭಗವಂತನಲ್ಲಿ ಮುಖ್ಯವಾಚಕತ್ವ ರೂಪದಿಂದ ಪ್ರತಿಪಾದಿಸಲ್ಪಟ್ಟಂತಾಯಿತು. ಪರಮಾತ್ಮನಲ್ಲಿಯೇ ಸತ್, ಅಸತ್, ಇತ್ಯಾದಿ ಸರ್ವಶಬ್ದವಾಚ್ಯತ್ವವು ಯುಕ್ತವೇ ಆಗಿದೆ. ಪರಮಾತ್ಮನಲ್ಲಿ ನಿಷೇಧಾತ್ಮಕವಾದ ಅಸುಖವೇದ್ಯತ್ವಾದಿ ಅಭಾವವಿದ್ದರೂ, ''ಏಷ ಹ್ಯೇವ ಶೂನ್ಯಃ ಏಷ ಹ್ಯೇವ ತುಚ್ಛಃ ಏಷ ಹ್ಯೇವಾವ್ಯಕ್ತೋಽದೃಶ್ಯಃ'' ಇತ್ಯಾದಿಯಾಗಿ ಮಹೋಪನಿಷತ್‌ನಲ್ಲಿ ಹೇಳಿದೆ. ಶೂನ್ಯ, ತುಚ್ಛ ಇತ್ಯಾದಿ ಶಬ್ದಗಳು ಪರಮಾತ್ಮನಲ್ಲಿ ಹೇಗೆ ಕೂಡುತ್ತವೆ ಎಂಬುದನ್ನು ಮಹಾಕೂರ್ಮಪುರಾಣವು ಹೀಗೆ ಹೇಳುತ್ತದೆ :

''ಶಮೂನಂ ಕುರುತೇ ವಿಷ್ಣುರದೃಶ್ಯಸ್ಸನ್ ಪರಃ ಸ್ವಯಮ್ ।
ತಸ್ಮಾತ್ ಶೂನ್ಯ ಇತಿ ಪ್ರೋಕ್ತಃ ತೋದನಾತ್ ತುಚ್ಛ ಉಚ್ಯತೇ ॥''

**ಅಣುಭಾಷ್ಯ :** 'ಶೂನ್ಯಮೇವ ಚ'

ಇಲ್ಲಿ ಚ ಶಬ್ದವು ಹಿಂದೆ ಹೇಳಿದಂತೆ ಸರ್ವಶಬ್ದವಾಚ್ಯತ್ವವನ್ನು ಸೂಚಿಸುವ ಸಮುಚ್ಚಯಾರ್ಥಕವು. ಏವಕಾರವು ಅಯೋಗ್ಯವ್ಯವಚ್ಛೇದಕವು (ಅಂದರೆ ಯೌಗಿಕಾರ್ಥದಲ್ಲಿ ಸಮರ್ಥನೆಯು). ಅಥವಾ ಬೇರೆಯವರಲ್ಲಿ ಕೂಡುವುದಿಲ್ಲ ಎಂಬುದನ್ನೂ ಏವಕಾರವು ಸೂಚಿಸುತ್ತದೆ. ಒಟ್ಟಿನಲ್ಲಿ ಸಂಸಾರವನ್ನು ಛೇದನ ಮಾಡಿ ಮೋಕ್ಷವನ್ನು ಕೊಡುವ ಜನಾರ್ದನನೇ ಶೂನ್ಯಾದಿ ಸರ್ವಶಬ್ದವಾಚ್ಯನು ಎಂದು ತಾತ್ಪರ್ಯ.

**ಪಾದಾರ್ಥ ಉಪಸಂಹಾರ**

**ಅಣುಭಾಷ್ಯ :** ಇತ್ಯಾದಿ ಅನ್ಯತ್ರ ನಿಯತೈರಪಿ ಮುಖ್ಯ ತಯೋದಿತಃ।
ಶಬ್ದೈರತೋऽನಂತಗುಣೋ ಯಚ್ಛಬ್ದಾ ಯೋಗವೃತ್ತಯಃ ॥

ಅಂದರೆ ಪೂರ್ವೋಕ್ತವಾದ ಅವ್ಯಕ್ತಾದಿ ಶಬ್ದಗಳು, ಬೇರೆ ಕಡೆಯಲ್ಲಿಯೇ ನಿಯತಗಳಾಗಿದ್ದು, ಶ್ರುತಿ ಲಿಂಗಾದಿಗಳಿಂದ ಬೇರೆ ಕಡೆಯಲ್ಲಿಯೇ ಪ್ರಸಿದ್ಧಗಳಾದವು ಎಂದರ್ಥ. ಅಂಥಹ ನಾಮಲಿಂಗಾತ್ಮಕವಾದ ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳಿಂದ ಜನಾರ್ದನನೇ ಮುಖ್ಯ ವೃತ್ತಿಯಿಂದ ಹೇಳಲ್ಪಟ್ಟಿರುವನು. ಆದ್ದರಿಂದಲೇ ಪರಮಾತ್ಮನು ಅನಂತಗುಣನು ಎಂದರ್ಥ. ಪ್ರತಿಯೊಂದು ಶಬ್ದವೂ ಸ್ವರ, ವರ್ಣ, ಪದ, ವಾಕ್ಯಾತ್ಮಕತಯಾ ಯೋಗ ವೃತ್ತಿಯಿಂದ ಅನಂತರೂಪದಿಂದ ವಿಷ್ಣುವನ್ನೇ ಹೇಳುತ್ತದೆ. ಆದ್ದರಿಂದ ವಿಷ್ಣುವು ಅನಂತಗುಣನು ಎಂದು ತಾತ್ಪರ್ಯ.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಮೊದಲನೆಯ ಅಧ್ಯಾಯದ ನಾಲ್ಕನೆಯ ಪಾದವು ಮುಕ್ತಾಯವಾಯಿತು ॥**

**॥ ಇಲ್ಲಿಗೆ ಮೊದಲನೆಯ ಅಧ್ಯಾಯವು ಸಮಾಪ್ತವಾಯಿತು ॥**



# ಎರಡನೆಯ ಅಧ್ಯಾಯ

## ಮೊದಲನೆಯ ಪಾದ

### ಅಧಿಕರಣ – ೧

### ॥ ಸ್ಮೃತ್ಯಧಿಕರಣ ॥

**॥ ಓಂ ಸ್ಮೃತ್ಯನವಕಾಶದೋಷ ಪ್ರಸಂಗಃ ಇತಿ ಚೇನ್ನ ಅನ್ಯಸ್ಮೃತ್ಯನವಕಾಶದೋಷ ಪ್ರಸಂಗಾತ್ ಓಂ ॥**

**ತಾತ್ಪರ್ಯ :** ಸರ್ವಜ್ಞರಾದ ರುದ್ರಾದಿಗಳಿಂದ ರಚಿಸಲ್ಪಟ್ಟ ಶೈವಾದಿ ಸ್ಮೃತಿಗಳಿಗೆ ನಿರವಕಾಶತ್ವ ರೂಪವಾದ ಪ್ರಾಬಲ್ಯವಿದೆ. ಆದ್ದರಿಂದ ವಿಷ್ಣುವಿಗೆ ಜಗತ್‌ಕರ್ತೃತ್ವ ಇತ್ಯಾದಿಗಳನ್ನು ಪ್ರತಿಪಾದಿಸುವ ಶ್ರುತಿಗೆ ಅಪ್ರಾಮಾಣ್ಯವೆಂಬ ದೋಷವು ಬರುವುದು ಎಂದು ಹೇಳಿದರೆ ಅದು ಸರಿಯಲ್ಲ. ಅತಿ ಸರ್ವಜ್ಞನಾದ ವಿಷ್ಣುವಿನಿಂದ ರಚಿಸಲ್ಪಟ್ಟ ಪಂಚರಾತ್ರವೇ ಮೊದಲಾದ ಸ್ಮೃತಿಗಳಿಗೆ ನಿರವಕಾಶತ್ವ ರೂಪವಾದ ಅತ್ಯಂತ ಪ್ರಾಬಲ್ಯವಿರುವುದರಿಂದ, ಅವುಗಳಿಗೆ ಸಹಕಾರಿಯಾದ ಶ್ರುತಿಗಳಿಗೆ ಶೈವಾದಿ ಸ್ಮೃತಿಗಳೇ ವಿರುದ್ಧವಾಗುತ್ತವೆ. ಆದ್ದರಿಂದ ಶೈವಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯ ದೋಷ ಪ್ರಸಂಗವು. ಈ ಕಾರಣದಿಂದ ವಿಷ್ಣುವಿನ ಸರ್ವಕರ್ತೃತ್ವಕ್ಕೆ ಯಾವುದೇ ವಿರೋಧ ಬರುವುದಿಲ್ಲ.

"ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿ ಶ್ರುತಿಯು ವಿಷ್ಣುವಿಗೇ ಜಗತ್ಕಾರಣತ್ವವನ್ನು ಪ್ರತಿಪಾದಿಸುತ್ತದೆ. ಶ್ರುತಿಗೆ ವಿರುದ್ಧವಾದ ಶೈವಾದಿ ಸ್ಮೃತಿಗಳಿಗೇ ಅಪ್ರಾಮಾಣ್ಯವು. ಪಂಚರಾತ್ರಾದಿ ಸ್ಮೃತಿಗಳಲ್ಲಿ ಪ್ರತಿಪಾದಿತವಾದ ವಿಷ್ಣುವಿನ ಸರ್ವಜ್ಞತ್ವ, ಸರ್ವಕರ್ತೃತ್ವಾದಿಗಳಿಗೆ ಶ್ರುತಿ ಸಂವಾದವೂ ಇದೆ. ಆದರೆ ರುದ್ರಾದಿ ಪ್ರಣೀತ ಸ್ಮೃತಿಗಳಿಗೆ ಶ್ರುತಿಸಂವಾದವಿಲ್ಲವಾದ್ದರಿಂದ ಅವುಗಳಿಗೆ ಅಪ್ರಾಮಾಣ್ಯತ್ವ ಬರುತ್ತದೆ. ಈ ಪ್ರಕಾರವಾಗಿ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವೇ ಆಗಿದೆ ಎಂಬುದು ಈ ಅಧಿಕರಣದ ತಾತ್ಪರ್ಯ.

**ಅಣುಭಾಷ್ಯ :** ''ಶ್ರೌತಸ್ಮೃತಿ ವಿರುದ್ಧತ್ವಾತ್ ಸ್ಮೃತಯೋ ನ ಗುಣಾನ್ ಹರೇಃ ನಿಷೇದ್ಧುಂ ಶಕ್ನುಯುಃ।''

ಪಾಶುಪತಾದಿ ಸ್ಮೃತಿಗಳು ಶ್ರೀಹರಿಯ ಜಗತ್ಕಾರಣತ್ವಾದಿ ಗುಣಗಳನ್ನು ನಿಷೇಧಿಸಲು ಶಕ್ಯವಾಗುವುದಿಲ್ಲ. ಏಕೆಂದರೆ ಅವು ಪಂಚರಾತ್ರಾದಿ ವೈಷ್ಣವ ಸ್ಮೃತಿಗಳಿಂದ ಬಾಧಿಸಲ್ಪಡುತ್ತವೆ. ಒಂದು ಸ್ಮೃತಿಗೆ ಮತ್ತೊಂದು ಸ್ಮೃತಿಯು ಬಾಧಿತವಾಗುತ್ತದೆ ಎಂದು ಹೇಗೆ ಹೇಳುತ್ತೀರಿ ಎಂದರೆ, ವಿಷ್ಣುವಿನಿಂದ ರಚಿಸಲ್ಪಟ್ಟಿರುವುದರಿಂದ, ವಿಷ್ಣುವಿಗೆ ಸರ್ವಜ್ಞತ್ವ ಹಾಗೂ ಆಪ್ತತ್ವವಿರುವ ಪ್ರಯುಕ್ತ. ಅಲ್ಲದೇ ಶ್ರುತಿ ಸಂವಾದವೂ ಪ್ರಬಲವಾಗಿದೆ. ಆದ್ದರಿಂದ ವೈಷ್ಣವ ಸ್ಮೃತಿಗಳನ್ನು ವಿರೋಧಿಸಲು ಶೈವ ಸ್ಮೃತಿಗಳಿಗೆ ಸಾಧ್ಯವಿಲ್ಲ ಎಂದು ತಾತ್ಪರ್ಯ.

## ಅಧಿಕರಣ – ೨

## ॥ ನ ವಿಲಕ್ಷಣತ್ವಾಧಿಕರಣ ॥

## ॥ ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ ॥

ವೇದಾದಿಗಳಿಗೆ ನಿತ್ಯತ್ವಾದಿ ವಿಲಕ್ಷಣತ್ವವಿರುವುದರಿಂದ, ಪಾಶುಪತಾದಿ ಸ್ಮೃತಿಗಳಂತೆ ಅಪ್ರಾಮಾಣ್ಯತ್ವ ಬರುವುದಿಲ್ಲ. ಏಕೆಂದರೆ ವೇದಾದಿಗಳಿಗೆ ನಿತ್ಯತ್ವ ಪ್ರತಿಪಾದಕವಾದ ''ವಾಚಾ ವಿರೂಪಾ ನಿತ್ಯಯಾ'' ಇತ್ಯಾದಿ ಶ್ರುತಿಯೂ ''ಅನಾದಿ ನಿಧನಾ ನಿತ್ಯಾ'' ಇತ್ಯಾದಿ ಸ್ಮೃತಿಯೂ ಪ್ರಮಾಣವಾಗಿವೆ.

**ಅಣುಭಾಷ್ಯ :** ''ವೇದಾಃ ನಿತ್ಯತ್ವಾತ್ ಮಾನಮುತ್ತಮಮ್''

ವೇದಗಳು ನಿತ್ಯತ್ವ, ಅಪೌರುಷೇಯತ್ವಗಳನ್ನು ಹೊಂದಿರುವುದರಿಂದ ಪ್ರತ್ಯಕ್ಷ, ಅನುಮಾನಗಳ ಅಪೇಕ್ಷೆಯಿಂದ ಅತ್ಯುತ್ತಮವಾದ, ಮುಖ್ಯವಾದ ಪ್ರಮಾಣವು. ಶ್ರುತ್ಯಾದಿಗಳ ಪ್ರಾಮಾಣ್ಯದಲ್ಲಿ ಯುಕ್ತಿವಿರೋಧವಿಲ್ಲ ಎಂದು ತಾತ್ಪರ್ಯ.

## ಅಧಿಕರಣ – ೩

## ॥ ಅಭಿಮಾನ್ಯಧಿಕರಣ ॥

## ॥ ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ ॥

"ಮೃದಬ್ರವೀತ್" "ಆಪೋऽಬ್ರುವನ್" ಇತ್ಯಾದಿ ವೇದವಾಕ್ಯಗಳಲ್ಲಿ ಅಭಿಮಾನಿ ದೇವತೆಗಳನ್ನು ಕುರಿತಾಗಿಯೇ ಹೇಳಲ್ಪಟ್ಟಿದೆ ಹೊರತು ಜಡವಾದ ಮಣ್ಣು ನೀರು ಇತ್ಯಾದಿಗಳ ಬಗ್ಗೆ ಅಲ್ಲ. ದೇವತೆಗಳಿಗೆ ಸಾಮರ್ಥ್ಯ ವಿಶೇಷ ಹಾಗು ದೇಹಸಹಿತ ವ್ಯಾಪ್ತಿಗಳು ಇರುವುದರಿಂದ, ಮೇಲಿನ ವೇದವಾಕ್ಯಗಳನ್ನು ಅಭಿಮಾನಿ ದೇವತೆಗಳ ಪರವಾಗಿ ಅರ್ಥೈಸುವುದರಿಂದ ಅನುಪಪತ್ತಿ ಉಂಟಾಗದು. ಆದಕಾರಣ ವೇದವು ಅಪ್ರಮಾಣವಲ್ಲ. ಅಂದರೆ ಪ್ರಮಾಣವೇ ಆಗಿದೆ ಎಂದು ತಾತ್ಪರ್ಯ.

**ಅಣುಭಾಷ್ಯ :** "ದೇವತಾ ವಚನಾದಾಪೋ ವದಂತೀತ್ಯಾದಿಕಂ ವಚಃ ನಾಯುಕ್ತವಾದಿ"

"ಆಪೋ ವದಂತಿ" ಇತ್ಯಾದಿ ವೇದವಾಕ್ಯವು ಅಯುಕ್ತವಾದಿಯಲ್ಲ. ಅಂದರೆ ಯುಕ್ತಿ ವಿರುದ್ಧಾರ್ಥತ್ವವು ಆಗುವುದಿಲ್ಲ ಎಂದರ್ಥ. ಆದಿಪದದಿಂದ "ತತ್ತೇಜ ಐಕ್ಷತ" "ಓಷಧಯಃ ಸಂವದಂತ" "ತಾ ಆಪ ಐಕ್ಷಂತ" ಮುಂತಾದ ವೇದ ವಚನಗಳನ್ನೂ ಗ್ರಹಿಸಬೇಕು.

## ಅಧಿಕರಣ – ೪

## ॥ ಅಸದಧಿಕರಣ ॥

## ॥ ಓಂ ಅಸದಿತಿ ಚೇನ್ನ ಪ್ರತಿಷೇದಮಾತ್ರತ್ವಾತ್ ॥

"ಅಸದೇವೇದಮಗ್ರ ಆಸೀತ್" ಎಂಬ ಶ್ರುತಿಯಿರುವುದರಿಂದ ಅಸತ್ತಿಗೆ ಜಗತ್ ಕಾರಣತ್ವವನ್ನು ಹೇಳುವುದು ಸರಿಯಲ್ಲ. ವಿಷ್ಣುವೇ ಜಗತ್ಕಾರಣನು. ಅಸತ್ ಎಂದರೆ ಅಭಾವ ಎಂದರ್ಥ. ಇಲ್ಲಿ ಸೃಷ್ಟಿಗೆ ಮುಂಚೆ ಅಸತ್ ಮಾತ್ರ ಇತ್ತು ಎಂದರೆ ಜಗತ್ತಿನ ಅಭಾವವಿತ್ತು ಎಂದಷ್ಟೇ ಅರ್ಥ (ನಿಷೇಧರೂಪವಾದ ಅರ್ಥ). ಅಸತ್ ಮಾತ್ರದಿಂದಲೇ ಜಗತ್ ಹುಟ್ಟಿತು ಎಂದರ್ಥವಲ್ಲ. ಇದಕ್ಕೆ ಪ್ರಮಾಣವಿಲ್ಲ.

ಅತ್ಯಂತಾಭಾವವಾದ ಶಶವಿಷಾಣಕ್ಕೆ (ಮೊಲದ ಕೋಡು) ಯಾವುದೇ ಕಾರಣತ್ವವು ಅಸಂಭವ. ಅಸತ್ ಮೊದಲಾದ ಎಲ್ಲ ಶಬ್ದಗಳೂ ವಿಷ್ಣುವನ್ನೇ ಹೇಳುತ್ತವೆ. ಏತೇನ ''ಸರ್ವೇ ವ್ಯಾಖ್ಯಾತಾಃ'' ಎಂಬುದಾಗಿ ಮೊದಲನೆಯ ಅಧ್ಯಾಯದ ಕೊನೆಯಲ್ಲಿ ಇದನ್ನು ಹೇಳಲಾಗಿದೆ.

**ಅಣುಭಾಷ್ಯ :**

ಅಸನ್ನೈವ ಕಾರಣಂ ದೃಶ್ಯತೇ ಕ್ವಚಿತ್ ।
ಅಸಜ್ಜೀವ ಪ್ರಧಾನಾದಿ ಶಬ್ದಾಃ ಬ್ರಹ್ಮೈವ ನಾಪರಮ್ ॥
ವದಂತಿ ಕಾರಣತ್ವೇನ ಕ್ವಾಪಿ ಪೂರ್ಣಗುಣೋ ಹರಿಃ ।
ಸ್ವಾತಂತ್ರ್ಯಾತ್ ಸರ್ವಕರ್ತೃತ್ವಾತ್ ನಾಯುಕ್ತಂ ತದ್ವದೇತ್ ಶ್ರುತಿಃ ॥

'ಅಸತ್' ಎಂದರೆ ಶಶವಿಷಾಣಾದಿ ಅಭಾವಾತ್ಮಕ ಪದಾರ್ಥಗಳು 'ಕ್ವಚಿತ್' ಅಂದರೆ ಯಾವ ದೇಶದಲ್ಲಾಗಲೀ ಕಾಲದಲ್ಲಾಗಲೀ, 'ಕ್ವಚಿತ್' ಅಂದರೆ ಯಾವುದೇ ಕಾರ್ಯಕ್ಕಾಗಲೀ ಕಾರಣವಾಗುವುದಿಲ್ಲ. ಹಾಗೆ ಎಲ್ಲಿಯೂ ಕಂಡೇ ಇಲ್ಲ ಎಂದರ್ಥ. ಅಸತ್ತಿಗೆ ಕಾರಣತ್ವವನ್ನು ಹೇಳುವ ಶ್ರುತಿ ಇರುವಾಗ ಅದು ಅಪ್ರಮಾಣವೆಂದು ಹೇಗೆ ಆಗುತ್ತದೆ ಎಂದರೆ, ಅಸತ್, ಜೀವ, ಪ್ರಧಾನಾದಿಗಳಿಗೆ ಅಕಾರಣತ್ವವನ್ನು ಹೇಳುವ ಶ್ರುತಿಗಳು ಅನೇಕವಾಗಿವೆ. ಈ ಶ್ರುತಿಗಳಿಗೆ ವಿರೋಧ ಬರುವುದರಿಂದ 'ಅಸದೇವ' ಎಂಬ ಶ್ರುತಿಗೆ ವಿಷ್ಣುಪರವಾಗಿ ಅರ್ಥಮಾಡಬೇಕು. ಹೀಗೆ ಮಾಡುವುದು ಅಯುಕ್ತವಲ್ಲ. ಏಕೆಂದರೆ ಅಸತ್ ಮೊದಲಾದ ಎಲ್ಲ ಶಬ್ದಗಳಿಗೂ ವಿಷ್ಣುವಾಚಕತ್ವವನ್ನು ಮೊದಲನೆಯ ಅಧ್ಯಾಯದಲ್ಲಿ ಸಮರ್ಥಿಸಲಾಗಿದೆ. ಆದ್ದರಿಂದ ಅಸತ್, ಜೀವ, ಪ್ರಧಾನಾದಿ ಎಲ್ಲ ಶಬ್ದಗಳೂ ವಿಷ್ಣುವನ್ನೇ ಹೇಳುತ್ತವೆ. ವಿಷ್ಣುವೇ ಜಗತ್‌ಕಾರಣನು, ಅಸದಾದಿಗಳಲ್ಲ ಎಂದು ತಾತ್ಪರ್ಯ.

''ಅಸದೇವೇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳು ವಿಷ್ಣುವನ್ನೇ ಜಗತ್ ಕಾರಣನನ್ನಾಗಿ ಹೇಳುತ್ತವೆ. ಎಲ್ಲಿಯೂ ''ಅಪರಮ್'' ಎಂದರೆ ಅಸದಾದಿಗಳನ್ನು ಕಾರಣತ್ವ ರೂಪದಿಂದ ಪ್ರತಿಪಾದಿಸುವುದಿಲ್ಲ. ಈ ಅಸದಾದಿ ಶಬ್ದಗಳಾದರೂ

ವಿಷ್ಣುವಾಚಕವು ಎಂಬುದು ಹೇಗೆ ಎಂದರೆ 'ಪೂರ್ಣಗುಣೋ ಹರಿಃ' ಎಂದು ಹೇಳುತ್ತಾರೆ. ಅಸದಾದಿ ಸರ್ವಶಬ್ದ ಪ್ರವೃತ್ತಿ ನಿಮಿತ್ತವಾದ ಗುಣಗಳಿಂದ ಶ್ರೀಹರಿಯು ಪರಿಪೂರ್ಣನು. ಹೀಗೆ ಅಂಗೀಕರಿಸದಿದ್ದರೆ ವಿಷ್ಣುವಿಗೆ ಗುಣಪರಿಪೂರ್ಣತ್ವವೇ ಕೂಡುವುದಿಲ್ಲ. ''ಸರ್ವಕರ್ತೃತ್ವಾತ್'' ಎಂಬುದು ಗುಣಪೂರ್ಣತ್ವ ಹೇತುವು(ಕಾರಣವು). ಅದಕ್ಕೂ ಕೂಡ 'ಸ್ವಾತಂತ್ರ್ಯಾತ್' ಎಂಬುದೇ ಹೇತುವು.

## ಅಧಿಕರಣ - ೫

## ॥ ಭೋಕ್ತ್ರಧಿಕರಣ ॥

## ॥ ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾತ್ ಲೋಕವತ್ ಓಂ ॥

''ಪರೇಽವ್ಯಯೇ ಸರ್ವ ಏಕೀ ಭವಂತಿ'' ಇತ್ಯಾದಿ ಶ್ರುತಿಯಲ್ಲಿ ಜೀವ-ಬ್ರಹ್ಮರಿಗೆ ಐಕ್ಯವನ್ನು ಹೇಳಿರುವ ಪ್ರಯುಕ್ತ ಭೋಕ್ತೃವಾದ ಜೀವನಿಗೆ ಬ್ರಹ್ಮತ್ವ ಪ್ರಾಪ್ತಿಯಾಗುತ್ತದೆ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಒಂದು ನೀರಿನಲ್ಲಿ ಮತ್ತೊಂದು ನೀರು ಸೇರಿಸಿದಾಗ ಎರಡು ನೀರುಗಳೂ ಒಂದೇ ಆಗುವುದಿಲ್ಲ. ಒಂದೇ ಸ್ಥಳದಲ್ಲಿ ಕೂಡುತ್ತವೆ. ಹಾಗಿಲ್ಲದಿದ್ದರೆ ನೀರಿನ ಪ್ರಮಾಣವು ಹೆಚ್ಚಾಗುತ್ತಿರಲಿಲ್ಲ. ಇದು ಲೋಕದಲ್ಲಿ ಕಂಡಿದೆ. ಅದೇ ರೀತಿ 'ಏಕೀ ಭವಂತಿ' ಎಂಬ ಶ್ರುತಿಯಲ್ಲಿಯೂ ಜೀವಬ್ರಹ್ಮರಿಗೆ ಸ್ಥಾನೈಕ್ಯವನ್ನು ಹೇಳಿದೆಯೇ ಹೊರತು ಅಭೇದವನ್ನಲ್ಲ. ಹೀಗೆ ಈ ಶ್ರುತಿಯಲ್ಲಿ ಜೀವ-ಬ್ರಹ್ಮರಿಗೆ ಅಭೇದವನ್ನು ನಿರಾಕರಿಸಲಾಗಿದೆ. ಆದ್ದರಿಂದ ವಿಷ್ಣುವಿನ ಜಗತ್ ಕರ್ತೃತ್ವಾದಿ ಧರ್ಮಗಳಿಗೆ ವಿರೋಧ ಬರುವುದಿಲ್ಲ, ವಿಷ್ಣುವೇ ಜಗತ್ಕಾರಣನು, ಜೀವನಲ್ಲ ಎಂಬುದೇ ಸಿದ್ಧಾಂತ.

ಈ ಅಧಿಕರಣದ ತಾತ್ಪರ್ಯವು, ಪ್ರಥಮಾಧ್ಯಾಯದ ತೃತೀಯ ಪಾದದ ಹದಿಮೂರನೆಯ ಅಧಿಕರಣದ ತಾತ್ಪರ್ಯವನ್ನು ಸಂಗ್ರಹಿಸುವ ಅಣುಭಾಷ್ಯದ ''ಅನ್ಯಶ್ಚ ಜೀವತಃ'' ಎಂಬ ವಚನದಿಂದಲೇ ಹೇಳಲ್ಪಟ್ಟಿದೆ. ಆದ್ದರಿಂದ ಇಲ್ಲಿ ಮತ್ತೆ ಅದನ್ನು ಹೇಳಿಲ್ಲ.

## ಅಧಿಕರಣ - ೬

## ॥ ಆರಂಭಣಾಧಿಕರಣ ॥

## ॥ ಓಂ ತದನನ್ಯತ್ವಮಾರಂಭಣ ಶಬ್ದಾದಿಭ್ಯಃ ಓಂ ॥

ಬ್ರಹ್ಮನೊಬ್ಬನೇ ಸ್ವತಂತ್ರಸಾಧನನು. ಅನ್ಯಸಾಧನಗಳು ಬ್ರಹ್ಮನ ಅಧೀನವು. ಏಕೆಂದರೆ "ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ" ಇತ್ಯಾದಿ ಶ್ರುತಿಯಲ್ಲಿ ಈಶ್ವರನು ಬೇರೆ ಯಾವ ಸ್ವತಂತ್ರ ಸಾಧನದ ಅಪೇಕ್ಷೆಯಿಲ್ಲದೇ ಸಾಧನ ಸತ್ತಾದಿಗಳನ್ನು ಹೊಂದಿಸುವನು ಎಂದು ಪ್ರತಿಪಾದಿಸಲ್ಪಟ್ಟಿದೆ. ಬೇರೆ ಯಾವ ಸ್ವತಂತ್ರ ಸಾಧನವಾಗಲೀ, ಅಧಿಷ್ಠಾನವಾಗಲೀ ಅಪೇಕ್ಷಿಸದೇ ಈಶ್ವರನು ಜಗತ್‌ಕರ್ತೃತ್ವಾದಿಗಳನ್ನು ಮಾಡುವನು. ಅವನು ಸ್ವತಂತ್ರನು, ಬೇರೆಲ್ಲವೂ ಅವನ ಅಧೀನವಾದ್ದರಿಂದ ಎಂದು ತಾತ್ಪರ್ಯ. "ಕಾಲ ಆಸೀತ್, ಪುರುಷ ಆಸೀತ್, ಪರಮ ಆಸೀತ್, ತದ್ಯದಾಸೀತ್, ತದಧೀನಮಾಸೀತ್, ತದಾವೃತಮಾಸೀತ್" ಎಂಬುದಾಗಿಯೂ ಶ್ರುತಿಯಲ್ಲಿ ಉಕ್ತವಾಗಿದೆ. (ಕಾಷಾಯಣ ಶ್ರುತಿ).

"ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ ।
ಕ್ಷೋಭಯಾಮಾಸ ಭಗವಾನ್ ಸೃಷ್ಟ್ಯರ್ಥಂ ಜಗತೋ ವಿಭುಃ ॥"

ಎಂಬುದಾಗಿ ಕೌರ್ಮಪುರಾಣವೂ ಭಗವಂತನ ಸ್ವಾತಂತ್ರ್ಯ, ಸರ್ವಕರ್ತೃತ್ವಗಳಿಗೆ ಪ್ರಮಾಣವಾಗಿದೆ. ಆದ್ದರಿಂದ ಪರಮಾತ್ಮನ ಸರ್ವಗುಣಪೂರ್ಣತ್ವಕ್ಕೆ ವಿರೋಧದ ಗಂಧವೂ ಇರುವುದಿಲ್ಲ.

**ಅಣುಭಾಷ್ಯ** : "ಸ್ವಾತಂತ್ರ್ಯಾತ್ ಸರ್ವಕರ್ತೃತ್ವಾತ್"

ಸ್ವತಂತ್ರಸಾಧನ ನಿರಪೇಕ್ಷನಾಗಿ ಶ್ರೀಹರಿಯು ಜಗತ್ ಸೃಷ್ಟ್ಯಾದಿ ವ್ಯಾಪಾರವನ್ನು ಮಾಡುತ್ತಾನೆ ಆದ್ದರಿಂದ ಶ್ರೀಹರಿಯು ಸರ್ವಗುಣ ಪೂರ್ಣನು ಎಂದು ತಾತ್ಪರ್ಯ.

## ಅಧಿಕರಣ - ೭

## ॥ ಇತರವ್ಯಪದೇಶಾಧಿಕರಣ ॥

## ॥ ಓಂ ಇತರ ವ್ಯಪದೇಶಾದ್ಧಿತಾಕರಣಾದಿ ದೋಷಪ್ರಸಕ್ತಿಃ ಓಂ॥

''ಜೀವಾದ್ಭವಂತಿ ಭೂತಾನಿ'' ಇತ್ಯಾದಿ ಜೀವಾದಿ ಕರ್ತೃತ್ವವನ್ನು ಶ್ರುತಿಯು ಹೇಳುವುದರಿಂದ ಜೀವನಿಗೆ ಸ್ವತಂತ್ರಕರ್ತೃತ್ವವಿದೆ ಎಂದು ಒಪ್ಪಿದ ಪಕ್ಷದಲ್ಲಿ, ಜೀವನು ತನಗೆ ಹಿತವಾದುದನ್ನು ಮಾಡಿಕೊಳ್ಳದಿರುವುದು ಅಥವಾ ಅಹಿತವಾದುದನ್ನು ಮಾಡಿಕೊಳ್ಳುವುದು ಇತ್ಯಾದಿ ದೋಷವು ಬರುವುದು. ಹೀಗೆ ಹಿತ ಅಕರಣ, ಅಹಿತಕರಣಗಳು ಲೋಕದಲ್ಲಿ ಕಂಡಿರುವ ಪ್ರಯುಕ್ತ ಜೀವನಿಗೆ ಸ್ವತಂತ್ರಕರ್ತೃತ್ವವು ಇರುವುದಿಲ್ಲ.

''ಜೀವನು ಯಾವ ಕರ್ಮವನ್ನು ಆರಂಭಿಸುತ್ತಾನೋ ಅದನ್ನು ಮುಗಿಸಿಯೇ ತೀರುತ್ತಾನೆ'' ಎಂಬುದು ಲೋಕದಲ್ಲಿ ಅನೇಕ ಕಡೆಗಳಲ್ಲಿ ಕಂಡಿದೆಯಾದ್ದರಿಂದ ಜೀವನಿಗೆ ಕರ್ತೃತ್ವವನ್ನು ಹೇಳುತ್ತೇವೆ ಎಂದರೆ ಅದು ಯುಕ್ತವಲ್ಲ. ಜೀವನ ಕಾರ್ಯದ ಉಪಸಂಹಾರದಲ್ಲಿ ಈಶ್ವರನೇ ನಿಮಿತ್ತನು. ಮೇಲ್ನೋಟಕ್ಕೆ ಜೀವನಲ್ಲಿ ಕಾರ್ಯನಿಮಿತ್ತತ್ವವು ಕಂಡರೂ ಅದು ಜೀವನಿಂದಲೇ ಆಯಿತು ಎಂದು ಹೇಳುವ ಹಾಗಿಲ್ಲ. ''ಯ ಆತ್ಮಾನಮಂತರೋ ಯಮಯತಿ'' ಎಂಬ ಅಂತರ್ಯಾಮಿ ಬ್ರಾಹ್ಮಣ ಶ್ರುತಿಯಿಂದಲೂ ''ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ'' ಎಂಬ ಸ್ಮೃತಿ ವಚನದಿಂದಲೂ, ಜೀವನಲ್ಲಿ ಕಾಣುವ ಕಾರ್ಯೋಪಸಂಹಾರವು ಜೀವನೊಳಗಿದ್ದು ನಿಯಮನ ಮಾಡುವ ಶ್ರೀಹರಿಯಿಂದಲೇ. ಎಲ್ಲರೊಳಗಿದ್ದು ಎಲ್ಲವನ್ನೂ ಮಾಡಿಸುವ ಶ್ರೀಹರಿಗೇ ಮುಖ್ಯವಾಗಿ ಕರ್ತೃತ್ವವು. ಜೀವನಿಗೆ ಈಶಾಧೀನವಾದ ಕರ್ತೃತ್ವವು ಎಂದು ತಾತ್ಪರ್ಯ.

**ಅಣುಭಾಷ್ಯ :**

ಪೂರ್ವೋಕ್ತವಾದ ಅಣುಭಾಷ್ಯದ ''ಅಸಜ್ಜೀವ'' ಇತ್ಯಾದಿ ವಚನದಿಂದಲೇ ಈ ಅಧಿಕರಣದ ತಾತ್ಪರ್ಯವನ್ನೂ ಶ್ರೀಮದಾಚಾರ್ಯರು ಹೇಳಿದ್ದಾರೆ. ಆದ್ದರಿಂದ ಇಲ್ಲಿ ಅನುಕ್ತಿ ಎಂಬ ದೋಷ ಬರುವುದಿಲ್ಲ.

## ಅಧಿಕರಣ - ೮

## ॥ ಶ್ರುತೇಸ್ತು ಶಬ್ದಮೂಲತ್ವಾಧಿಕರಣ ॥

## ॥ ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ ॥

ಈಶ್ವರನಿಗೆ ಸರ್ವಕರ್ತೃತ್ವವನ್ನು ಅಂಗೀಕರಿಸಿದ ಪಕ್ಷದಲ್ಲಿ ಜೀವನಂತೆ 'ಕೃತ್ಸ್ನಪ್ರಸಕ್ತಿ' ಮೊದಲಾದ ದೋಷ ಬರುವುದು. ಹೇಗೆಂದರೆ ಈಶ್ವರನು ಎಲ್ಲ ಕಾರ್ಯಗಳಲ್ಲಿಯೂ ಪೂರ್ಣಶಕ್ತಿಯಿಂದ ಪ್ರವರ್ತಿಸುತ್ತಾನೆ ಎಂದು ಹೇಳಿದರೆ ಒಂದು ಹುಲ್ಲು ಕಡ್ಡಿ ಎತ್ತುವುದಕ್ಕೂ ಪೂರ್ಣ ಶಕ್ತಿಯನ್ನು ಉಪಯೋಗಿಸಬೇಕು. ಅಲ್ಪ ಶಕ್ತಿಯ ಅವಶ್ಯಕತೆ ಇರುವಲ್ಲಿ ಹೀಗೆ ಮಾಡಿದರೆ ಅದು ದೋಷವಲ್ಲವೇ ? ಶಕ್ತಿಯ ಸ್ವಲ್ಪ ಭಾಗವನ್ನು ಮಾತ್ರ ಉಪಯೋಗಿಸುತ್ತಾನೆ ಎಂದು ಹೇಳಿದರೆ ಈಶ್ವರನಿಗೆ ಅಂಶತ್ವದ ಪ್ರಸಕ್ತಿ ಬರುತ್ತದೆ. ಇದರಿಂದ "ನೇಹನಾನಾಸ್ತಿ ಕಿಂಚನ" ಇತ್ಯಾದಿ ಅನಂಶತ್ವ ಪ್ರತಿಪಾದಕ ಶ್ರುತಿಗೆ ವಿರೋಧ ಬರುತ್ತದೆ. ಹೀಗೆ "ಕೃತ್ಸ್ನಪ್ರಸಕ್ತಿ", 'ಅಂಶತ್ವ' ಇತ್ಯಾದಿ ದೋಷ ಬರುವುದರಿಂದ ಈಶ್ವರನಿಗೆ ಸರ್ವಕರ್ತೃತ್ವ ಕೂಡುವುದಿಲ್ಲ ಎಂದು ಹೇಳಿದರೆ ಅದು ಸರಿಯಲ್ಲ. ಈಶ್ವರನಲ್ಲಿರುವ ಧರ್ಮಗಳು ಜೀವರಿಗಿಂತ ಅತ್ಯಂತ ವಿಲಕ್ಷಣವು. "ಯೋಽಸೌ ವಿರುದ್ಧೋಽ ವಿರುದ್ಧ" ಇತ್ಯಾದಿ ಶ್ರುತಿಗಳು ಈಶ್ವರನಲ್ಲಿ ಲೋಕವಿರುದ್ಧವಾದ ಧರ್ಮಗಳನ್ನು ಪ್ರತಿಪಾದಿಸುತ್ತವೆ. ಶ್ರುತ್ಯುಕ್ತವಾಗಿದ್ದರೂ ಯುಕ್ತಿ ವಿರುದ್ಧವಾದ್ದರಿಂದ ಈಶ್ವರನಲ್ಲಿ ಜೀವನಲ್ಲಿ ಕಾಣುವ ಕೃತ್ಸ್ನ ಪ್ರಸಕ್ತ್ಯಾದಿ ದೋಷಗಳನ್ನು ಹೇಗೆ ನಿರಾಕರಿಸುವಿರಿ ? ಎಂದರೆ, ಪ್ರತ್ಯಕ್ಷ ಯುಕ್ತಿಗಳಿಂದ ಈಶ್ವರನ ವೈಲಕ್ಷಣ್ಯವನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಏಕೆಂದರೆ ಈಶ್ವರನು "ಶಬ್ದೈಕ ಸಮಧಿಗಮ್ಯನು" ಅಂದರೆ ಆಗಮಗಳಿಂದ ಮಾತ್ರ ತಿಳಿಯಲ್ಪಡತಕ್ಕವನು. ಶ್ರುತಿಗಳು ಈಶ್ವರನಿಗೆ ಲೋಕವಿಲಕ್ಷಣವಾದ, ಅಂಚಿತ್ಯವಾದ ಶಕ್ತಿಮತ್ತ್ವವನ್ನು ಹೇಳುತ್ತವೆ. ಜೀವರಲ್ಲಿ ಅಂಥಹ ವಿಲಕ್ಷಣವಾದ ಶಕ್ತಿಮತ್ತ್ವವಿಲ್ಲ. ಆದಕಾರಣ ಶ್ರೀಹರಿಯೇ ಸರ್ವಜಗತ್‌ಕರ್ತೃವು ಎಂದು ತಾತ್ಪರ್ಯ.

**ಅಣುಭಾಷ್ಯ :** 'ಪೂರ್ಣಗುಣಃ'

ಆಗಮೈಕವೇದ್ಯವಾದ ವಿಚಿತ್ರ ಶಕ್ತಿಮತ್ವಾದಿ ಗುಣಗಳಿಂದ ಪೂರ್ಣನಾದ ಶ್ರೀಹರಿಯೇ ಜಗತ್‌ಸೃಷ್ಟ್ಯಾದಿ ಕರ್ತೃವು, ಜೀವನಲ್ಲ ಎಂದು ತಾತ್ಪರ್ಯ.

## ಅಧಿಕರಣ - ೯

## ॥ನ ಪ್ರಯೋಜನವತ್ವ ಅಧಿಕರಣ ॥

## ॥ಓಂ ನ ಪ್ರಯೋಜನವತ್ತ್ವಾತ್ ಓಂ ॥

ತನಗೆ ಪ್ರಯೋಜನವಿಲ್ಲದಿದ್ದರೂ ಭಗವಂತನು ಸೃಷ್ಟ್ಯಾದಿ ವ್ಯಾಪಾರವನ್ನು ಮಾಡುತ್ತಾನೆ. ಈಶ್ವರನು ಪೂರ್ಣಾನಂದನು ಆದ್ದರಿಂದ ಜಗತ್‌ಕರ್ತೃತ್ವಾದಿಗಳಿಂದ ಅವನಿಗೆ ಏನೂ ಪ್ರಯೋಜನ ಬೇಕಿಲ್ಲ.

''ದೇವಸ್ಯೈಷಃ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ'' ಇತ್ಯಾದಿ ಶ್ರುತಿಗಳೇ ಇದಕ್ಕೆ ಪ್ರಮಾಣ. ಯಾವುದೇ ಫಲೋದ್ದೇಶವಿಲ್ಲದಿದ್ದರೂ ಲೋಕದಲ್ಲಿ ಕೇವಲ ಲೀಲೆಯಿಂದಲೇ ನೃತ್ಯಗಾನಾದಿಗಳನ್ನು ಮಾಡುವಂತೆ, ಯಾವುದೇ ಪ್ರಯೋಜನವಿಲ್ಲದಿದ್ದರೂ ತಾನಾಗಿಯೇ ಕೈ ಕಾಲುಗಳನ್ನು ಚಲಿಸುವಂಥಹ ಪ್ರಕ್ರಿಯೆಗಳನ್ನು ಮಾಡುವಂತೆ, ಈಶ್ವರನೂ ಕೇವಲ ಲೀಲೆಯಿಂದಲೇ ಜಗತ್‌ಕರ್ತೃತ್ವಾದಿಗಳನ್ನು ಮಾಡುತ್ತಾನೆ. ಆದ್ದರಿಂದ ಈಶ್ವರನಿಗೆ ಸರ್ವಕರ್ತೃತ್ವವನ್ನು ಹೇಳುವುದು ಅಯುಕ್ತವೂ ಅಲ್ಲ, ಅಪ್ರಾಮಾಣಿಕವೂ ಅಲ್ಲ ಎಂದು ತಾತ್ಪರ್ಯ.

**ಅಣುಭಾಷ್ಯ** : 'ಪೂರ್ಣಗುಣಃ'

ಈಶ್ವರನು ಆನಂದಾದಿ ಗುಣಪೂರ್ಣನು. ಭಗವಂತನು ಪೂರ್ಣಾನಂದನಾಗಿದ್ದರೂ ಕೂಡ (ಅವನಿಗೆ ಯಾವುದೇ ಪ್ರಯೋಜನವಿಲ್ಲದಿದ್ದರೂ) ಲೋಕಾನುಗ್ರಹಕ್ಕೋಸ್ಕರವಾಗಿಯೇ ಸೃಷ್ಟ್ಯಾದಿ ಕ್ರೀಡೆಯನ್ನು ನಡೆಸುತ್ತಾನೆ ಎಂದು ಭಾವ.

## ಅಧಿಕರಣ - ೧೦

## ॥ ವೈಷಮ್ಯ ನೈರ್ಘೃಣ್ಯಾಧಿಕರಣ ॥

**॥ ಓಂ ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾಹಿ ದರ್ಶಯತಿ ಓಂ ॥**

ಪರಮಾತ್ಮನಿಗೆ ವೈಷಮ್ಯ, ನೈರ್ಘೃಣ್ಯಾದಿಗಳ ಪ್ರಸಕ್ತಿಯೇ ಇಲ್ಲ. ಏಕೆಂದರೆ ಎಲ್ಲವನ್ನೂ ಅವರವರ ಕರ್ಮವನ್ನು ನೋಡಿಯೇ ಮಾಡುವನು. ''ಪುಣ್ಯೇನ ಪುಣ್ಯಂ ಲೋಕಂ ನಯತಿ'' ಇತ್ಯಾದಿ ಶ್ರುತಿಯು ಪರಮಾತ್ಮನ ಕರ್ಮಸಾಪೇಕ್ಷತ್ವ ರೂಪವಾದ ಫಲದಾತೃತ್ವವನ್ನು ಹೇಳುತ್ತದೆ. ಹಾಗಾದರೆ ಪರಮಾತ್ಮನಿಗೆ ಅಸ್ವಾತಂತ್ರ್ಯದ ಪ್ರಸಂಗವು ಎಂದು ಹೇಳಬಾರದು. ಏಕೆಂದರೆ ಜೀವರ ಅನಾದಿಕರ್ಮ, ಸ್ವಭಾವ ಎಲ್ಲವೂ ಪರಮಾತ್ಮನ ಅಧೀನವೇ ಆಗಿದೆ. ತನ್ನ ಅಧೀನವಾದುದನ್ನೇ ಅಪೇಕ್ಷಿಸಿ ಪ್ರವೃತ್ತನಾಗುವುದರಿಂದ ಈಶ್ವರನ ಸ್ವಾತಂತ್ರ್ಯಕ್ಕೆ ಯಾವುದೇ ಧಕ್ಕೆ ಬರುವುದಿಲ್ಲ.

**ಅಣುಭಾಷ್ಯ :** ''ಸ್ವಾತಂತ್ರ್ಯಾತ್ ಸರ್ವಕರ್ತೃತ್ವಾತ್''

ಕರ್ಮಾಪೇಕ್ಷೆಯಿಂದ ಫಲ ನೀಡಬೇಕೆಂಬುದು ಈಶ್ವರನ ಸಂಕಲ್ಪ. ಅದರಂತೆಯೇ ಮಾಡುವುದಕ್ಕೆ ಅವನು ಸ್ವತಂತ್ರನು. ಕರ್ಮಾಪೇಕ್ಷೆಯಿಂದಲೇ ಎಲ್ಲ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಈಶ್ವರನಿಗೆ ವೈಷಮ್ಯಾದಿ ದೋಷ ಪ್ರಸಂಗವಿಲ್ಲ ಎಂದು ತಾತ್ಪರ್ಯ.

## ಅಧಿಕರಣ - ೧೧

## ॥ಸರ್ವಧರ್ಮೋಪಪತ್ತ್ಯಧಿಕರಣ ॥

**॥ಓಂ ಸರ್ವಧರ್ಮೋಪಪತ್ತೇಶ್ಚ ಓಂ ॥**

ಈಶ್ವರನು ಸ್ವತಂತ್ರನಾದ್ದರಿಂದ ಸರ್ವ ಧರ್ಮಗಳೂ ಅಂದರೆ ಜ್ಞಾನಾನಂದಾದಿ ಸರ್ವಗುಣಗಳೂ ಈಶ್ವರನಲ್ಲಿ ಕೂಡುತ್ತವೆ. ಇದಕ್ಕೆ ''ಗುಣಾಃ ಶ್ರುತಾಃ'' ಇತ್ಯಾದಿ ಶ್ರುತಿ ಸಂವಾದವೂ ಇದೆ. ಸ್ವಾತಂತ್ರ್ಯ ಹೊಂದಿರುವನಿಗೆ ಗುಣಪೂರ್ಣತ್ವವೂ ನಿಯಮೇನ ಇರುತ್ತದೆ.

**ಅಣುಭಾಷ್ಯ :** ''ಸ್ವಾತಂತ್ರ್ಯಾತ್ ಗುಣಪೂರ್ಣಃ''

ವಿಷ್ಣುವು ಸರ್ವಗುಣಪೂರ್ಣನು ಸ್ವತಂತ್ರನಾದ್ದರಿಂದ. ದೇವದತ್ತನು ಅಸ್ವತಂತ್ರನು ಜೀವನಾದ್ದರಿಂದ. ಆದ್ದರಿಂದ ಗುಣಪೂರ್ಣನಲ್ಲ. ಈಶ್ವರನು ಸ್ವತಂತ್ರನಾದ್ದರಿಂದಲೇ ಗುಣಪೂರ್ಣನು. ಗುಣಪೂರ್ಣನಾದ್ದರಿಂದಲೇ ಸರ್ವಕರ್ತೃವು ಎಂದು ತಾತ್ಪರ್ಯ.

**ಪಾದಾರ್ಥ ಉಪಸಂಹಾರ**

''ನಾಯುಕ್ತಂ ತದ್ವದೇತ್ ಶ್ರುತಿಃ''

'ತತ್' ಅಂದರೆ ''ತಸ್ಮಾತ್'' - ಸಕಲಯುಕ್ತಿ ವಿರೋಧಗಳು ಪರಿಹೃತವಾದುದರಿಂದ, ''ಶ್ರುತಿಃ'' - ಜಗತ್ಕಾರಣತ್ವ ಪ್ರತಿಪಾದಕವಾದ ಶ್ರುತಿಯು, ''ಅಯುಕ್ತಂ'' - ಯುಕ್ತಿಗೆ ವಿರುದ್ಧವಾದುದನ್ನು, ''ನ ವದೇತ್'' - ಹೇಳುವುದಿಲ್ಲ.

**''ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಎರಡನೆಯ ಅಧ್ಯಾಯದ ಮೊದಲನೆಯ ಪಾದವು ಮುಕ್ತಾಯವಾಯಿತು''**



# ಎರಡನೆಯ ಅಧ್ಯಾಯದ ಎರಡನೆಯ ಪಾದ

ವಿಷ್ಣುವಿನಲ್ಲಿ ಗುಣಪರಿಪೂರ್ಣತ್ವ ಪ್ರತಿಪಾದನೆಗಾಗಿ ಸರ್ವಶಬ್ದಗಳ ಸಮನ್ವಯದ ವಿಷಯದಲ್ಲಿ ಸಮಯಗಳ ವಿರೋಧವನ್ನು ಈ ಪಾದದಲ್ಲಿ ಪರಿಹರಿಸುತ್ತಾರೆ.

**ಅಧಿಕರಣ – ೧**

**॥ ರಚನಾನುಪಪತ್ತ್ಯಧಿಕರಣ ॥**

**॥ ಓಂ ರಚನಾನುಪಪತ್ತೇಶ್ಚ ನಾನುಮಾನಂ ಓಂ ॥**

**ತಾತ್ಪರ್ಯ :** ಅನುಮಾನದಿಂದ ಪರಿಕಲ್ಪಿತವಾದ ಪ್ರಧಾನವು (ಪ್ರಕೃತಿಯು) ಜಗತ್‌ಕರ್ತೃವಲ್ಲ. ಏಕೆಂದರೆ ಅಚೇತನಕ್ಕೆ ಸ್ವತಃ ಪ್ರವೃತ್ತಿಯು ಕೂಡುವುದಿಲ್ಲ. ಚ ಶಬ್ದದಿಂದ ಸಾಧಕ ಪ್ರಮಾಣದ ಅಭಾವವನ್ನು ಸೂಚಿಸುತ್ತಾರೆ.

ಪ್ರಕೃತಿಗೇನೇ ಮಹತ್ ತತ್ವಾದಿ ಕಾರಣತ್ವವಿರುವುದರಿಂದ ವಿಷ್ಣುವಿಗೆ ಜಗತ್‌ಕರ್ತೃತ್ವವನ್ನು ಹೇಳುವುದು ಆಯುಕ್ತವು. ಪ್ರಕೃತಿಗೆ ಪ್ರೇರಕತ್ವರೂಪದಿಂದ ಈಶ್ವರನನ್ನು ಅಂಗೀಕರಿಸಬೇಕಿಲ್ಲ. ಕೇವಲ ಪ್ರಕೃತಿಗೇನೆ ಕರ್ತೃತ್ವಾದಿಗಳಿವೆಯೆಂದು ಶ್ರುತಿಗಳಿಂದ ತಿಳಿದು ಬರುತ್ತದೆ. ಹೀಗೆ ನಿರೀಶ್ವರ ಸಾಂಖ್ಯರು (ಇವರು ಈಶ್ವರನನ್ನು ಒಪ್ಪುವುದಿಲ್ಲ) ಹೇಳುತ್ತಾರೆ. ಈ ಮತವನ್ನು ಈ ಅಧಿಕರಣದಲ್ಲಿ ನಿರಾಕರಿಸಿದ್ದಾರೆ. ಕೇವಲ ಪ್ರಕೃತಿಯು ಜಡವಸ್ತು. ಚೇತನನ ವ್ಯಾಪಾರವಿಲ್ಲದೇ ಕೇವಲ ಜಡವಸ್ತುವಿಗೆ ಪ್ರವೃತ್ತಿಯಿಲ್ಲ. ಉದಾಹರಣೆಗೆ ಘಟವು ಅಚೇತನ ಪದಾರ್ಥವಾಗಿದ್ದು ಅದಕ್ಕೆ ಸ್ವತಃ ಪ್ರವೃತ್ತಿಯಿಲ್ಲದ್ದು ಲೋಕದಲ್ಲಿ ಕಂಡಿದೆ.

## ಅಧಿಕರಣ – ೨

## ॥ ಅನ್ಯತ್ರಾಭಾವಾಧಿಕರಣ ॥

## ॥ ಓಂ ಅನ್ಯತ್ರಾಭಾವಾಚ್ಚ ನ ತೃಣಾದಿವತ್ ಓಂ ॥

ಭಗವಂತನ ಪ್ರೇರಣೆಯಿಲ್ಲದೆ ಜಗತ್ತಿನ ಯಾವ ವಸ್ತುವೂ ಇರುವುದು ಸಾಧ್ಯವಿಲ್ಲ. ಈ ಅಧಿಕರಣದಲ್ಲಿ ಸೇಶ್ವರ ಸಾಂಖ್ಯಮತವನ್ನು ನಿರಾಕರಿಸುತ್ತಾರೆ. ಅವರು ಈಶ್ವರನನ್ನು ಒಪ್ಪುತ್ತಾರೆಯಾದರೂ ಸ್ವತಂತ್ರ ಕಾರಣನನ್ನಾಗಿ ಒಪ್ಪುವುದಿಲ್ಲ. ಹುಲ್ಲು ಕಡ್ಡಿ ಮೊದಲಾದವುಗಳಿಗೆ ಪೃಥಿವಿಯೇ ಪ್ರಧಾನಕಾರಣವು, ಮಳೆ ಇತ್ಯಾದಿಗಳು ಅನುಗ್ರಾಹಕ ರೂಪ ಕಾರಣವು. ಅದೇ ರೀತಿ ಜಗದುತ್ಪತ್ತಿಗೆ ಮಹದಾದಿ ಪ್ರಕೃತಿಯೇ ಪ್ರಧಾನಕಾರಣವು. ಈಶ್ವರನು ಕೇವಲ ಅನುಗ್ರಾಹಕ ರೂಪ ಕಾರಣನು. ಹೀಗೆ ಸೇಶ್ವರ ಸಾಂಖ್ಯರು ಹೇಳುತ್ತಾರೆ. ಇದು ಅಯುಕ್ತವು. ವಿಷ್ಣುವು ಈ ಜಗತ್ತಿಗೆ ಸ್ವತಂತ್ರ ಕಾರಣನು (ಅಂದರೆ ಪ್ರಧಾನ ಕಾರಣನು) ಕೇವಲ ಅನುಗ್ರಾಹಕರೂಪ ಕಾರಣನಲ್ಲ. ಇದೇ ಸಿದ್ಧಾಂತವು ''ಯಚ್ಚ ಕಿಂಚಿತ್ ಜಗತ್ ಸರ್ವಂ'' ಇತ್ಯಾದಿ ಶ್ರುತಿಯಿಂದ ಈಶ್ವರನು ಪ್ರಕೃತ್ಯಾದಿ ಸರ್ವ ಪದಾರ್ಥಗಳಲ್ಲಿಯೂ ಒಳಗಿದ್ದು, ಅವುಗಳಿಗೆ ಸತ್ತಾ, ಪ್ರವೃತ್ತಿ ಮೊದಲಾದವುಗಳನ್ನು ನೀಡುವವನು. ಈಶ್ವರನ ಪ್ರೇರಣೆಯಿಲ್ಲದೆ ಯಾವುದೇ ವಸ್ತುವಿನ ಸತ್ವವೇ ಅಸಂಭವವು ಇದೇ ಸಿದ್ಧಾಂತವು.

## ಅಧಿಕರಣ – ೩

## ॥ ಅಭ್ಯುಪಗಮಾಧಿಕರಣ ॥

## ॥ ಓಂ ಅಭ್ಯುಪಗಮೇಽಪ್ಯರ್ಥಾಭಾವಾತ್ ಓಂ ॥

ಈ ಅಧಿಕರಣದಲ್ಲಿ ಚಾರ್ವಾಕ ಮತವನ್ನು ನಿರಾಸೆ ಮಾಡುತ್ತಾರೆ.

ಚಾರ್ವಾಕನು ತನ್ನ ಶಾಸ್ತ್ರಕ್ಕೆ ಸಿದ್ಧಾಂತತ್ವವನ್ನು ಅಂಗೀಕರಿಸಿದರೂ, ಆ ಸಿದ್ಧಾಂತಕ್ಕೆ ವ್ಯಾಪಕವಾದ ವಿಷಯಾದಿಗಳಿಗೆ ಅಭಾವವನ್ನು ಒಪ್ಪಬೇಕಾಗುತ್ತದೆ. ಸ್ವವ್ಯಾಹತಿಯಿಂದಲೇ ಆ ಮತವು ಅಯುಕ್ತವು ಎಂದು ತಾತ್ಪರ್ಯ.

ಪ್ರತ್ಯಕ್ಷವೊಂದೇ ಪ್ರಮಾಣ ಎಂಬುದು ಚಾರ್ವಾಕನ ಸಿದ್ಧಾಂತ. ಈಶ್ವರನು ಜಗದುತ್ಪತ್ತಿಗೆ ಕಾರಣವೆಂಬುದು ಪ್ರತ್ಯಕ್ಷಕ್ಕೆ ಗೋಚರವಲ್ಲ. ಚಾರ್ವಾಕನ ದೃಷ್ಟಿಯಲ್ಲಿ ಅದೃಷ್ಟವೆಂಬುದೇ ಇಲ್ಲ. ಅದೃಷ್ಟ ವಿಷಯದ ಬಗ್ಗೆ ಹೇಳುವ ಶಾಸ್ತ್ರವು ಅಪ್ರಮಾಣವು. ಅತೀಂದ್ರಿಯ ವಸ್ತುವೆಂಬುದೇ ಇಲ್ಲ. ಆದ್ದರಿಂದ ಧರ್ಮಾದಿಗಳಿಗೆ ಅಸಿದ್ಧಿ ಬರುವುದು ಎಂದು ಹೇಳುವ ಹಾಗಿಲ್ಲ. ಧರ್ಮಾದಿಗಳಿಗೆ ಚಾರ್ವಾಕನ ವಾಕ್ಯವೇ ಪ್ರಮಾಣ. ಅವನ ಪ್ರಕಾರ ಸ್ವರ್ಗ ಅಪವರ್ಗಾದಿಗಳು ಅದೃಷ್ಟಫಲವಾದ್ದರಿಂದ ಅವುಗಳು ಅಪ್ರಮಾಣ. ಹೀಗೆ ಚಾರ್ವಾಕನ ವಾದ. ಇದು ಅಯುಕ್ತವು. ಚಾರ್ವಾಕನ ಮತಕ್ಕೆ ವಿಷಯ, ಅಧಿಕಾರಿ, ಸಂಬಂಧಾದಿಗಳೇ ಇಲ್ಲ. ಆದ್ದರಿಂದ ಅದು ಅತ್ಯಂತ ಅಪ್ರಾಮಾಣಿಕವು. ಹೀಗೆ ಚಾರ್ವಾಕ ಮತವು ನಿರಸ್ತವಾದ್ದರಿಂದ, ವಿಷ್ಣುವೇ ಜಗತ್ಕಾರಣನೆಂಬುದೇ ಸಿದ್ಧಾಂತವು.

## ಅಧಿಕರಣ : ೪

## ॥ ಪುರುಷಾಶ್ಮಾಧಿಕರಣ ॥

## ॥ ಓಂ ಪುರುಷಾಶ್ಮವದಿತಿ ಚೇತ್ತಥಾಪಿ ಓಂ ॥

ಈ ಅಧಿಕರಣದಲ್ಲಿ ನಿರೀಶ್ವರ ಸಾಂಖ್ಯದಲ್ಲಿ ಏಕದೇಶಿಯರಾದ ಪ್ರಕೃತಿಗೇ ಕರ್ತೃತ್ವವನ್ನು ಅಂಗೀಕರಿಸುವ ಮತವನ್ನು ನಿರಾಕರಿಸುತ್ತಾರೆ.

ಪುರುಷನಾದ ಚೇತನನ ಸಂಬಂಧದಿಂದಾಗಿ ಅಚೇತನವಾದ ಶರೀರವು

ಕಲ್ಲು ಮೊದಲಾದವುಗಳನ್ನು ಎತ್ತಿಕೊಂಡು ಹೋಗುತ್ತದೆ. ಇದೇ ರೀತಿ ಪ್ರಕೃತಿಯು ಅಚೇತನವಾದರೂ ಚೇತನನಾದ ಪುರುಷನ ಸಂಬಂಧದಿಂದಾಗಿ ಪ್ರವರ್ತಿಸುತ್ತದೆ. ಆದ್ದರಿಂದ ಪ್ರಕೃತಿಯ ಕರ್ತೃತ್ವವನ್ನು ಒಪ್ಪಲು ಸ್ವತಂತ್ರನಾದ ಈಶ್ವರನನ್ನು ಒಪ್ಪಬೇಕಾದ ಅಗತ್ಯವಿಲ್ಲ. ಪ್ರಕೃತಿಗೆ ಸಹಾಯಕನಾಗಿ ಒಬ್ಬ ಚೇತನನನ್ನು (ಜೀವವನ್ನು) ಅಂಗೀಕರಿಸಿದರೆ ಇಷ್ಟಸಿದ್ಧಿಯಾಗುತ್ತದೆ. ಹೀಗೆ ಪ್ರಕೃತಿ ಮತ್ತು ಪುರುಷನ ಸಂಬಂಧದಿಂದ ಈ ಜಗತ್ತು ಪ್ರವರ್ತಿಸುತ್ತದೆ ಎಂದು ನಿರೀಶ್ವರ ಸಾಂಖ್ಯದಲ್ಲಿ ಒಂದು ವರ್ಗದವರು ಹೇಳುತ್ತಾರೆ. ಇದು ಅಪ್ರಮಾಣವು. ಪುರುಷೋಪಸರ್ಜನದಿಂದ ಅಂದರೆ ಪುರುಷ – ಪ್ರಕೃತಿಗಳ ಪರಸ್ಪರ ಸಹಕಾರದಿಂದ ಈ ಜಗದಾದಿಗಳು ಪ್ರವರ್ತಿಸುತ್ತವೆ ಎಂದು ಒಪ್ಪಲು ಯಾವುದೇ ಪ್ರಮಾಣವಿಲ್ಲ. 'ಪುರುಷಾಶ್ಮವತ್' ಎಂಬ ಅನುಮಾನವೂ ಅಯುಕ್ತವು ''ನ ಋತೇ ತ್ವತ್ ಕ್ರಿಯತೇ ಕಿಂಚನಾರೇ'' ಇತ್ಯಾದಿ ಶ್ರುತಿಯಿಂದ ಶರೀರಾದಿ ಅಚೇತನಗಳ ಪ್ರವೃತ್ತಿಯೂ ಪರಮಾತ್ಮನ ಅಧೀನವೇ ಆಗಿದೆ. ವಿಷ್ಣುವೇ ಜಗತ್‌ಕಾರಣನೆಂಬುದಕ್ಕೆ ಹಿಂದಿನ ಅನೇಕ ಪ್ರಕರಣಗಳಲ್ಲಿ ಪ್ರಮಾಣವನ್ನು ನೀಡಲಾಗಿದೆ. ಆದ್ದರಿಂದ ವಿಷ್ಣುವೇ ಸ್ವಾತಂತ್ರ್ಯೇಣ ಜಗತ್ ಕಾರಣನು ಎಂಬುದೇ ಸಿದ್ಧಾಂತ.

## ಅಧಿಕರಣ – ೫

## ॥ ಅನ್ಯಥಾನುಮಿತ್ಯಧಿಕರಣ ॥

## ॥ ಓಂ ಅನ್ಯಥಾನುಮಿತೌ ಚ ಜ್ಞ ಶಕ್ತಿ ವಿಯೋಗಾತ್ ಓಂ ॥

ಪ್ರಕೃತಿಯ ಸಹಯೋಗದೊಂದಿಗೆ ಜೀವನಿಗೆ ಕರ್ತೃತ್ವವನ್ನು ಹೇಳುವ ಮತ್ತೊಂದು ವರ್ಗದ ನಿರೀಶ್ವರ ಸಾಂಖ್ಯ ಮತವನ್ನು ಇಲ್ಲಿ ನಿರಾಸೆ ಮಾಡುತ್ತಾರೆ. ಚೇತನನಾದ ಪುರುಷನಿಗೆ ಅಚೇತನನಾದ ಶರೀರದ ಸಂಬಂಧವು ಒದಗುವುದಾದರೂ ಹೇಗೆ? ಜ್ಞಃ ಅಂದರೆ ಪುರುಷನು (ಜಾನಾತೀತಿ ಜ್ಞಃ). ಪುರುಷನಿಗೆ ಶರೀರವನ್ನು ಪಡೆದುಕೊಳ್ಳಲು ಸ್ವತಃ ಸಾಮರ್ಥ್ಯವಿಲ್ಲ. ಪುರುಷನಿಗೆ ಶರೀರದ ಸಂಬಂಧವನ್ನು ಹೊಂದಿಸಿ ಕೊಡುವುದಕ್ಕಾದರೂ ಮತ್ತೊಬ್ಬ ಶಕ್ತಿಯುತ

ಚೇತನನನ್ನು ಅಂದರೆ ಸರ್ವಶಕ್ತನಾದ ಈಶ್ವರನನ್ನು ಅಂಗೀಕರಿಸಲೇಬೇಕು. ಆದ್ದರಿಂದ ಸರ್ವಶಕ್ತನಾದ ಸ್ವತಂತ್ರನಾದ ಈಶ್ವರನನ್ನೇ ಜಗತ್ಕಾರಣನೆಂಬುದಾಗಿ ಅಂಗೀಕರಿಸಲೇಬೇಕು ಎಂಬುದೇ ಸಿದ್ಧಾಂತ.

## ಅಧಿಕರಣ – ೬
## ॥ ವೈಶೇಷಿಕಾಧಿಕರಣ ॥
## ॥ ಓಂ ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ ಓಂ ॥

ಅಧಿಕರಣದಲ್ಲಿ ಅಣುಕಾರಣತಾವಾದಿ ನೈಯಾಯಿಕ ವೈಶೇಷಿಕ ಮತವನ್ನು ನಿರಾಕರಣ ಮಾಡುತ್ತಾರೆ.

ಹೇಗೆ ಮಹತ್ವವನ್ನೂ ದೀರ್ಘವತ್ವನ್ನೂ ಒಳಗೊಂಡಿರುವ ತ್ರ್ಯಣುಕಾದಿಗಳಿಂದ ಚತುರಣುಕಾದಿ ಪರಿಮಾಣವು ಹುಟ್ಟುತ್ತದೋ ಹಾಗೆಯೇ ಹ್ರಸ್ವವಾದ ದ್ವ್ಯಣುಕದಿಂದ ತ್ರ್ಯಣುಕ ಪರಿಮಾಣವು ಉತ್ಪತ್ತಿಯಾಗುತ್ತದೆ. ಪರಮಾಣು ಪರಿಮಾಣದಿಂದ ದ್ವ್ಯಣುಕ ಪರಿಮಾಣವು ಉತ್ಪತ್ತಿಯಾಗುತ್ತದೆ. ಹೀಗೆ ಪರಮಾಣುವಿನಿಂದ ದ್ವ್ಯಣುಕ, ದ್ವ್ಯಣುಕದಿಂದ ತ್ರ್ಯಣುಕ, ಹಾಗೆ ಚತುರಣುಕ ಇತ್ಯಾದಿ ಉತ್ಪತ್ತಿಯಿಂದ ಮಹದಾದಿ ತತ್ವಗಳಿಂದ ಕೂಡಿದ ಜಗತ್ತು ಉತ್ಪತ್ತಿಯಾಗುತ್ತದೆ. ಆದಕ್ಕಾಗಿ ಈಶ್ವರನ ಅವಶ್ಯಕತೆಯಿಲ್ಲ. ಕೇವಲ ಪರಮಾಣುಗಳಿಂದಲೇ ಜಗದುತ್ಪತ್ತಿ ಸಂಭವಿಸುವುದು. ಹೀಗೆ ವೈಶೇಷಿಕ ಮತದ ಒಂದು ವರ್ಗದವರು ಹೇಳುತ್ತಾರೆ. ಇದು ಅಪ್ರಾಮಾಣಿಕವಾದ್ದರಿಂದ ಅಯುಕ್ತವು. ಮೊದಲೊಂದು ಪರಮಾಣುವಿರಬೇಕು. ಅದಕ್ಕೆ ಮತ್ತೊಂದು ಪರಮಾಣುವಿನ ಸಂಯೋಗವಾಗಬೇಕು. ಹೀಗೆ ಅನಂತ ಪರಮಾಣುವಿನ ಪರಿಮಾಣಗಳು ಸಂಯೋಜನೆಗೊಳ್ಳಬೇಕು. ಈ ಪ್ರಕಾರವಾಗಿ ಸಂಯೋಜನೆಯಾಗುವುದು ಹೇಗೆ? ಜಡವಾದ ಪರಮಾಣುವಿಗೆ ಸ್ವತಃ ಪ್ರವೃತ್ತಿಯಿಲ್ಲ. ಈ ಪ್ರಕಾರವಾಗಿ ಜಗದುತ್ಪತ್ತಿಯಾಗುತ್ತದೆ ಎಂಬುದಕ್ಕೆ ಯಾವುದೇ ಪ್ರಮಾಣವಿಲ್ಲ. ಆದ ಪ್ರಯುಕ್ತ ಅನಂತಗುಣಪೂರ್ಣನಾದ ಈಶ್ವರನನ್ನು ಒಪ್ಪದೇ ಗತ್ಯಂತರವಿಲ್ಲ ಎಂಬುದೇ ಸಿದ್ಧಾಂತ.

## ಅಧಿಕರಣ – ೭

## ॥ಸಮುದಾಯಾಧಿಕರಣ॥

## ॥ಓಂ ಸಮುದಾಯ ಉಭಯ ಹೇತುಕೇಽಪಿ ತದಪ್ರಾಪ್ತಿಃ ಓಂ॥

ಈ ಅಧಿಕರಣದಲ್ಲಿ ಬೌದ್ಧರ ಒಂದು ಪ್ರಭೇದವಾದ ವೈಭಾಷಿಕ ಸೌತ್ರಾಂತಿಕ ಮತವನ್ನು ನಿರಾಸೆ ಮಾಡುತ್ತಾರೆ.

ಜಗದುತ್ಪತ್ತಿಗೆ ಮೂಲವಾಗಿ ಪರಮಾಣು ಕಾರಣತ್ವವನ್ನು ನಾವು ಹೇಳುವುದಿಲ್ಲ, ಸಮುದಾಯಕಾರಣತ್ವವನ್ನು ಹೇಳುತ್ತೇವೆ ಎಂದರೆ ಅದೂ ಅಯುಕ್ತವು. ಅನೇಕ ಪರಮಾಣುಗಳ ಮೇಲನವನ್ನು ಒಪ್ಪಿದರೂ ಸಮುದಾಯವು ಉಂಟಾಗುವುದಿಲ್ಲ. ಏಕೆಂದರೆ ಅನೇಕ ಪರಮಾಣುಗಳ ಮೇಲನವು ಆತ್ಮಾದಿಗಳನ್ನು ಆಶ್ರಯಿಸಿಯೇ ಆಗಬೇಕು ಆದ್ದರಿಂದ ಈ ಮತವು ಅಯುಕ್ತವು.

ವೈಭಾಷಿಕ ಸೌತ್ರಾಂತಿಕ ಮತದವರು ಪಂಚಸ್ಕಂಧಾತ್ಮಕವಾದ ಜಗತ್ತನ್ನು ಒಪ್ಪುತ್ತಾರೆ. ಪಂಚತನ್ಮಾತ್ರಗಳಾದ ಪರಮಾಣುಗಳು ರೂಪಸ್ಕಂಧ, ನಾನು ಎಂಬ ನಿರ್ವಿಕಲ್ಪಕ ಜ್ಞಾನವು ವಿಜ್ಞಾನಸ್ಕಂಧ, ದುಃಖವು ವೇದನಾಸ್ಕಂಧ, ಸವಿಕಲ್ಪಕ ಜ್ಞಾನವು ಸಂಜ್ಞಾಸ್ಕಂಧ, ರಾಗದ್ವೇಷ ಮೋಹಾದಿರೂಪವಾದ ಸಂಸ್ಕಾರ ಸ್ಕಂಧ – ಹೀಗೆ ಪಂಚಸ್ಕಂಧ.

ಇವುಗಳಿಂದ ಅವಸ್ಥಿತಿಯನ್ನು ಪಡೆದಿರುವ ಜಗತ್ತು ಪರಮಾರ್ಥ ಸತ್ಯ. ಅಶೇಷ ಪರಮಾಣು ಸಮುದಾಯಾತ್ಮಕವಾದ ಈ ಜಗತ್ತಿಗೆ 'ಅವಯವೀ' ಎಂಬುದು ಯಾವುದೂ ಇಲ್ಲ, ಇರುವುದೆಲ್ಲ ಕ್ಷಣಿಕವಾದ ಅವಯವಗಳೇ. ಇಂಥಹ ನಿರವಯವಿಯಾದ ಜಗತ್ತಿನ ಕಾರ್ಯವು ಕಾಲ, ಕರ್ಮ, ರೂಪ, ನಿಮಿತ್ತದಿಂದಲೇ ನಡೆಯುತ್ತದೆ. ಇದರಲ್ಲಿ ಈಶ್ವರನ ಪಾತ್ರವೆಲ್ಲಿದೆ? ಈಶ್ವರನಿದ್ದಾನೆ ಎಂಬುದಕ್ಕೆ ಪ್ರಮಾಣವಿಲ್ಲ. ಏಕೆಂದರೆ ನಾವು ವೇದಾದಿಗಳನ್ನು ಪ್ರಮಾಣವೆಂದು ಒಪ್ಪುವುದಿಲ್ಲ. ಹೀಗೆ ವೈಭಾಷಿಕ ಸೌತ್ರಾಂತಿಕ ಮತದವರು ಹೇಳುತ್ತಾರೆ. ಈ ಮತವು ಕೇವಲ ಕಾಲ್ಪನಿಕವು (ಸ್ವಕಪೋಲಕಲ್ಪಿತವು). ಇದಕ್ಕೆ ಯಾವುದೇ

ಪ್ರಮಾಣದ ಆಧಾರವಿಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣನೆಂಬುದೇ ಪರಮ ಪ್ರಾಮಾಣಿಕವಾದ ಸಿದ್ಧಾಂತ.

## ಅಧಿಕರಣ – ೮

## ॥ ಅಸದಧಿಕರಣ ॥

## ॥ ಓಂ ನಾಸತೋಽದೃಷ್ಟತ್ವಾತ್ ಓಂ ॥

ಅಸತ್ತು ಜಗತ್ತಿಗೆ ಕಾರಣವಲ್ಲ. ಏಕೆಂದರೆ ಅದು ಅಪ್ರಾಮಾಣಿಕವು.

ಈ ಅಧಿಕರಣದಲ್ಲಿ ಶೂನ್ಯ ಕಾರಣತಾವಾದಿ ಮಾಧ್ಯಮಿಕ ಮತವನ್ನು ನಿರಾಸೆಮಾಡುತ್ತಾರೆ.

ಗುಣತ್ರಯ ರಹಿತವಾದ ಒಂದೇ ಒಂದಾದ ಶೂನ್ಯವೇ ಪರಮಾರ್ಥ ಸತ್ಯ. ಶೂನ್ಯಶಕ್ತಿ ಸಂವೃತಿಯ ಸಂಬಂಧದಿಂದ ಅಶೇಷವಾದ ಜಗತ್ತು ಉತ್ಪತ್ತಿಯಾಗಿದೆ. ಇದಕ್ಕೆ ಶ್ರುತಿಯ ವಿರೋಧವೂ ಇಲ್ಲ. ಆದ್ದರಿಂದ ಈಶ್ವರನ ಪ್ರಸಕ್ತಿಯೇ ಇಲ್ಲ. ಹೀಗೆ ಶೂನ್ಯಕಾರಣತಾವಾದಿಗಳು ಹೇಳುತ್ತಾರೆ. ಇದು ಆಯುಕ್ತವು. ಏಕೆಂದರೆ ಶೂನ್ಯವೇ ಜಗತ್ಕಾರಣ ಎಂಬುದಕ್ಕೆ ಯಾವುದೇ ಪ್ರಮಾಣವಿಲ್ಲ. ಪ್ರತ್ಯಕ್ಷವಂತೂ ಪ್ರಮಾಣವಾಗಲು ಸಾಧ್ಯವಿಲ್ಲ. ಏಕೆಂದರೆ ಅಸತ್ತಿಗೆ ಕಾರಣತ್ವವನ್ನು ತೋರಿಸಲು ಯಾವುದೇ ದೃಷ್ಟಾಂತವಿಲ್ಲ. ಇನ್ನು ಆಗಮವನ್ನು ಅವರು ಪ್ರಮಾಣವಾಗಿ ಹೇಳಬೇಕು. ಅದೂ ಸಾಧ್ಯವಿಲ್ಲ. ಏಕೆಂದರೆ ಅವರು ಆಗಮಕ್ಕೆ ಪ್ರಾಮಾಣ್ಯವನ್ನೇ ಅಂಗೀಕರಿಸಿಲ್ಲ. ಹೀಗೆ ಯಾವುದೇ ಪ್ರಮಾಣವಿಲ್ಲದಿರುವುದರಿಂದ ಅಸತ್ತಿಗೆ ಜಗತ್ ಕಾರಣತ್ವವನ್ನು ಒಪ್ಪುವ ಹಾಗಿಲ್ಲ. ಆದ್ದರಿಂದ ವಿಷ್ಣುವಿಗೇ ಜಗತ್ಕಾರಣತ್ವವನ್ನು ಒಪ್ಪಬೇಕು ಎಂಬುದೇ ಸಿದ್ಧಾಂತ.

## ಅಧಿಕರಣ – ೯

## ॥ ಅನುಪಲಬ್ಧ್ಯಧಿಕರಣ ॥

## ॥ ಓಂ ನ ಭಾವೋಽನುಪಲಬ್ಧೇಃ ಓಂ ॥

ಈ ಅಧಿಕರಣದಲ್ಲಿ ವಿಜ್ಞಾನಕ್ಕೆ ಹೊರತಾದ ಜಗತ್ತೇ ಇಲ್ಲ ಎಂದು ಹೇಳುವ ಯೋಗಾಚಾರಿಗಳ ಮತವನ್ನು ನಿರಾಕರಣೆ ಮಾಡುತ್ತಾರೆ.

ಪ್ರಪಂಚವು ವಿಜ್ಞಾನಾತ್ಮಕವೆಂದು ಹೇಳುವುದು ಸರಿಯಲ್ಲ. ಏಕೆಂದರೆ ಜಗತ್ತು ವಿಜ್ಞಾನಾತ್ಮಕವೆಂಬುದಕ್ಕೆ ಪ್ರಮಾಣಗಳು ಕಂಡುಬರುವುದಿಲ್ಲ.

ವಿಜ್ಞಾನವಾದಿಯ ಮತವು ಅಯುಕ್ತವು ಹಾಗೂ ಅಪ್ರಾಮಾಣಿಕವು. ವಿಜ್ಞಾನವನ್ನು ಬಿಟ್ಟು ಬೇರೆ ಜಗತ್ತಿಲ್ಲ ಎನ್ನುವವನನ್ನು ಕೇಳಬೇಕು ''ವಿಜ್ಞಾನ ತತ್ವದಲ್ಲಿ ಜಗತ್ತು ಆರೋಪಿತವೋ ಅಥವಾ ವಿಜ್ಞಾನ ತತ್ವಕ್ಕೂ ಜಗತ್ತಿಗೂ ಅಭೇದವೋ'' ಎಂದು. ನಿರ್ಬಾಧವಾದುದೇ ಸತ್ಯ ಎಂದು ಒಪ್ಪಿರುವುದರಿಂದ ಆರೋಪಿತತ್ವವು ಕೂಡುವುದಿಲ್ಲ. ಎರಡನೆಯ ಪಕ್ಷದಲ್ಲಿ ಜಗತ್ತು ವಿಜ್ಞಾನಾತ್ಮಕ ಎಂಬುದಕ್ಕೆ ಪ್ರಮಾಣವಿಲ್ಲ. ಜೊತೆಗೆ ಅದು ಪ್ರಮಾಣಗಳಿಗೆ ವಿರುದ್ಧವೂ ಆಗಿದೆ. ಆದ್ದರಿಂದ ವಿಷ್ಣುವೇ ಜಗತ್ಕಾರಣನೆಂಬುದು ಯುಕ್ತವೇ ಆಗಿದೆ ಎಂಬುದೇ ಸಿದ್ಧಾಂತ.

## ಅಧಿಕರಣ – ೧೦

## ।। ನೈಕಸ್ಮಿನ್ನಧಿಕರಣ ।।

## ।। ಓಂ ನೈಕಸ್ಮಿನ್ನಸಂಭವಾತ್ ಓಂ ।।

ಈ ಅಧಿಕರಣದಲ್ಲಿ ಸಪ್ತಭಂಗಿ ಜಗತ್ತು ಎಂದು ಹೇಳುವ ಜೈನರ ಮತವನ್ನು ನಿರಾಸೆ ಮಾಡುತ್ತಾರೆ.

ಒಂದೇ ವಸ್ತುವಿನಲ್ಲಿ ಸತ್ವಾದಿ ಅನೇಕ ಪ್ರಕಾರಗಳು ಯುಕ್ತವಲ್ಲ. ಏಕೆಂದರೆ ಅದು ಅಪ್ರಾಮಾಣಿಕವಾದ್ದರಿಂದ ಅಸಂಭವವು.

ಜೈನರು ಈ ಜಗತ್ತು ಸಪ್ತಭಂಗಿ ಎಂದು ಹೇಳುತ್ತಾರೆ. ಅದು ಹೇಗೆಂದರೆ – ಸತ್, ಅಸತ್, ಸದಸತ್, ಸದಸದ್ವಿಲಕ್ಷಣ, ಸತ್ ಇರುವಾಗಲೇ ಸತ್‌ಗಿಂತ ವಿಲಕ್ಷಣವಾಗಿರುವುದು, ಅಸತ್ ಆಗಿರುವಾಗಲೇ ಅಸತ್‌ಗಿಂತ ವಿಲಕ್ಷಣವಾಗಿರುವುದು ಹಾಗೂ ಸದಸದಾತ್ಮಕವಾಗಿದ್ದು ಸದಸದ್ವಿಲಕ್ಷಣವಾಗಿರುವುದು. ಇಂಥಹ

ಸಪ್ತಭಂಗಿ ಜಗತ್ತು ಆತ್ಮನಿಗೂ ಇತರರಿಗೂ ಅದೃಷ್ಟವಾದ ಸಾಧನಗಳಿಂದ ರೂಪುಗೊಳ್ಳುವುದು. ಹೀಗಿರುವಾಗ ಈಶ್ವರನು ಏಕೆ ಬೇಕು? ಹೀಗೆ ಜೈನರ ಸಿದ್ಧಾಂತ. ಇದು ಅಯುಕ್ತವು. ಏಕೆಂದರೆ ಸತ್, ಅಸತ್‌ಗಳಿಂದ ವ್ಯತಿರಿಕ್ತವಾದ ಜಗತ್ತು ಎಂಬುದೇ ಇಲ್ಲ. ಅದು ಅಪ್ರಾಮಾಣಿಕವು ಹಾಗೂ ಪ್ರಮಾಣವಿರುದ್ಧವು ಆದ್ದರಿಂದ ವಿಷ್ಣುವಿಗೇ ಜಗತ್‌ಕಾರಣತ್ವವು ಎಂಬುದೇ ಸಿದ್ಧಾಂತ.

## ಅಧಿಕರಣ – ೧೧

## ॥ ಪತ್ಯುರಧಿಕರಣ ॥

## ॥ ಓಂ ಪತ್ಯುರಸಾಮಂಜಸ್ಯಾತ್ ಓಂ ॥

ಈ ಅಧಿಕರಣದಲ್ಲಿ ಪಾಶುಪತಮತದ ನಿರಾಸೆ ಮಾಡಿದ್ದಾರೆ. ಪತ್ಯುಃ ಎಂದರೆ ಪಶುಪತಿಗೆ ಜಗತ್ಕಾರಣತ್ವವು ಯುಕ್ತವಲ್ಲ. ಏಕೆಂದರೆ ಶ್ರುತಿಗಳಲ್ಲಿ ಪಶುಪತಿಗೆ ಪಾರತಂತ್ರ್ಯಾದಿ ದೋಷವನ್ನು ಹೇಳಿದೆ. ಅಂಥಹ ಪಶುಪತಿಗೆ ಜಗತ್ ಕಾರಣತ್ವವನ್ನು ಹೇಳುವುದು ಸಮಂಜಸವಲ್ಲ.

''ಪಶುಪತಿಯು ಸಾರ್ವಜ್ಞಾದಿ ಗುಣಯುಕ್ತನಾಗಿದ್ದು ಮಾಯೆಯನ್ನು ಉಪಾದಾನ ಮಾಡಿಕೊಂಡು ಹರಿ, ಹರ, ಹಿರಣ್ಯಗರ್ಭ ಮೊದಲಾದವರಿಂದ ಕೂಡಿದ ಜಗತ್ತಿನ ಉತ್ಪತ್ತ್ಯಾದಿಗಳನ್ನು ಮಾಡುತ್ತಾನೆ. ಶ್ರುತಿಗಳು ಈ ಅರ್ಥದಲ್ಲಿಯೇ ಇವೆ''.

ಹೀಗೆ ಪಾಶುಪತ ಮತದವರು ಹೇಳುತ್ತಾರೆ. ಇದು ಯುಕ್ತವಲ್ಲ. ಏಕೆಂದರೆ ಪಾಶುಪತಾದಿ ಮತವು ಅಪ್ರಾಮಾಣಿಕವು. ಪಶುಪತಿಯು ಪಾರತಂತ್ರ್ಯ, ಜನನ ಮರಣಾದಿ ದೋಷದುಷ್ಟನಾಗಿರುವುದರಿಂದ ಜಗತ್‌ಕರ್ತೃವಾಗಲು ಸಾಧ್ಯವಿಲ್ಲ. ಪ್ರಮಾಣವೂ ಹೀಗೇ ಹೇಳುತ್ತವೆ. ''ಯಂ ಕಾಮಯೇ ತಂ ತಮುಗ್ರಂ ಕೃಣೋಮಿ'' (ಅಂಭ್ರಣೀ ಸೂಕ್ತ) ಇತ್ಯಾದಿ ಶ್ರುತಿಗಳೇ ಇದಕ್ಕೆ ಪ್ರಮಾಣ. ಆದಕಾರಣ ವಿಷ್ಣುವಿಗೇ ಜಗತ್‌ಕಾರಣತ್ವವು ಯುಕ್ತವು ಎಂಬುದೇ ಸಿದ್ಧಾಂತ.

## ಅಧಿಕರಣ – ೧೨

## ॥ ಉತ್ಪತ್ತ್ಯಧಿಕರಣ ॥

## ॥ ಓಂ ಉತ್ಪತ್ತ್ಯಸಂಭವಾತ್ ॥

ಈ ಅಧಿಕರಣದಲ್ಲಿ ಶಾಕ್ತ ಮತವನ್ನು ನಿರಾಕರಿಸುತ್ತಾರೆ. ಶಕ್ತಿಯು ಜಗತ್ಕಾರಣಳಲ್ಲ. ಏಕೆಂದರೆ ಕೇವಲ ಸ್ತ್ರೀಯರಿಂದ ಉತ್ಪತ್ತಿಯು ಅಸಂಭವವು.

ಶಕ್ತಿಯೇ ಸಾರ್ವಜ್ಞ್ಯಾದಿ ಗುಣಶಾಲಿನಿ, ಸಕಲ ಜಗಜ್ಜನನಿ, ಇತ್ಯಾದಿಯಾಗಿ ಸಕಲ ಶ್ರುತಿಸ್ಮೃತಿ ಇತಿಹಾಸ ಪುರಾಣಗಳಲ್ಲಿ ಪಠಿತವಾಗಿದೆ. ಆದ್ದರಿಂದ ಶಕ್ತಿಯೇ ಜಗತ್‌ಕಾರಣಳು ಎಂಬುದಾಗಿ ಶಾಕ್ತಮತವು. ಇದು ಅಯುಕ್ತವು. ಪುರುಷನ ಸಂಬಂಧವಿಲ್ಲದೇ ಕೇವಲ ಸ್ತ್ರೀಯರಿಂದ ಉತ್ಪತ್ತಿಯು ಲೋಕದಲ್ಲಿ ಕಂಡಿಲ್ಲ. ಇದಕ್ಕೇ ''ಅಜಾಮೇಕಾಮ್'' ಇತ್ಯಾದಿ ಶ್ರುತಿ ವಿರೋಧವೂ ಇಲ್ಲ. ಈಶ್ವರಾಧೀನತ್ವವೇ ಅಲ್ಲಿ ಹೇಳಲ್ಪಟ್ಟಿದೆ. ಶಾಕ್ತೇಯ ಮತವು ಸರ್ವಶ್ರುತಿ ಸ್ಮೃತಿ ವಿರುದ್ಧವೂ ಆಗಿದೆ. ಆದ್ದರಿಂದ ಶಾಕ್ತೇಯ ಮತವು ಅಸಮಂಜಸವು. ಅಂದರೆ ಸ್ವೀಕಾರಕ್ಕೆ ಅರ್ಹವಲ್ಲ. ಇದೇ ನ್ಯಾಯದಿಂದ ಸೌರ, ಸ್ಕಾಂದ, ಇತ್ಯಾದಿ ಮತಗಳು ನಿರಾಕರಿಸಲ್ಪಡುತ್ತವೆ. ಆದ್ದರಿಂದ ವಿಷ್ಣುವಿಗೆ ಜಗತ್ ಕಾರಣತ್ವ ಲಕ್ಷಣವು ಯುಕ್ತವೇ ಆಗಿದೆ ಎಂಬುದೇ ಸಿದ್ಧಾಂತವು.

### ಅಣುಭಾಷ್ಯ

ಈ ಪಾದದ ಎಲ್ಲ ಹನ್ನೆರಡು ಅಧಿಕರಣಗಳು ಸಮಾನ ನ್ಯಾಯದಿಂದ ಕೂಡಿರುವುದರಿಂದ ಇವೆಲ್ಲದರ ತಾತ್ಪರ್ಯವನ್ನು ಒಟ್ಟಿಗೇ ಹೇಳುತ್ತಾರೆ —

ಭ್ರಾಂತಿ ಮೂಲತಯಾ ಸರ್ವಸಮಯಾನಾಮಯುಕ್ತಿತಃ ।
ನ ತದ್ವಿರೋಧಾದ್ವಚನಂ ವೈದಿಕಂ ಶಂಕ್ಯತಾಂ ವ್ರಜೇತ್ ॥

ವೇದವ್ಯಾಸರ ದರ್ಶನವನ್ನು ಬಿಟ್ಟು ಇತರ ಎಲ್ಲ ದರ್ಶನಗಳೂ ಭ್ರಾಂತಿ ಮೂಲವುಳ್ಳವು. ಅಂದರೆ ಮಿಥ್ಯಾಜ್ಞಾನದಿಂದ ಹುಟ್ಟಿದವು ಎಂದರ್ಥ. ಏಕೆಂದರೆ ಆಯಾ ದರ್ಶನಗಳ ಹರಿಕಾರರು ಭ್ರಮೆ, ಪ್ರಮಾದ, ವಂಚನೆ, ಅಯಥಾರ್ಥತ್ವ ಇವೇ ಮೊದಲಾದವುಗಳಿಂದ ಕೂಡಿದವರು. ಯುಕ್ತ್ಯಾದಿ ಶೂನ್ಯತ್ವ ಮತ್ತು ವಿರುದ್ಧತ್ವವನ್ನು ಹೊಂದಿರುವುದೇ ಅವರ ಮತದ ದೋಷವು. ಅಂಥಹ

ಅಪ್ರಾಮಾಣಿಕವಾದ ಮತಗಳಿಗೆ ವಿರುದ್ಧವೆಂಬ ಕಾರಣದಿಂದ ''ಯತೋ ವಾ'' ಇತ್ಯಾದಿ ವೇದ ವಚನಗಳಲ್ಲಿ ಅಪ್ರಾಮಾಣ್ಯತಾ ಶಂಕಾವನ್ನು ಹೊಂದಬಾರದು ಎಂಬುದೇ ಎರಡನೆಯ ಅಧ್ಯಾಯದ ಎರಡನೆಯ ಪಾದದ ತಾತ್ಪರ್ಯ.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಎರಡನೆಯ ಅಧ್ಯಾಯದ ಎರಡನೆಯ ಪಾದವು ಮುಕ್ತಾಯವಾಯಿತು ॥**



## ಎರಡನೆಯ ಅಧ್ಯಾಯ ಮೂರನೆಯ ಪಾದ

ಈ ಪಾದದಲ್ಲಿ ಪರಸ್ಪರ ಶ್ರುತಿ ವಿರೋಧವನ್ನು ಪರಿಹರಿಸುತ್ತಾರೆ –

### ಅಧಿಕರಣ – ೧

### ॥ ವಿಯದಧಿಕರಣ ॥

### ॥ ಓಂ ನವಿಯದಶ್ರುತೇಃ ಓಂ ॥

ಈ ಅಧಿಕರಣದಲ್ಲಿ ಆಕಾಶಕ್ಕೆ ಉತ್ಪತ್ತಿಯುಂಟು ಎಂಬುದನ್ನು ಸಮರ್ಥಿಸುತ್ತಾರೆ.

''ಅನಾದಿರ್ವಾ ಅಯಮಾಕಾಶ'' ಎಂಬುದಾಗಿ ಆಕಾಶಕ್ಕೆ ಅನಾದಿತ್ವ ಹೇಳುವ ಶ್ರುತಿಯಿದೆ. ಆದ್ದರಿಂದ ಆಕಾಶಕ್ಕೆ ಉತ್ಪತ್ತಿಯುಂಟು ಎಂದು ಹೇಳಬಾರದು. ಆಕಾಶಕ್ಕೆ ಉತ್ಪತ್ತಿಯಿಲ್ಲ ಎಂದಮೇಲೆ ವಿಷ್ಣುವಿಗೆ ಸರ್ವಜಗತ್‌ಕಾರಣತ್ವವು ಅಯುಕ್ತವು. ಹೀಗೆ ಹೇಳುವುದು ಸರಿಯಿಲ್ಲ. ಏಕೆಂದರೆ ''ಆತ್ಮನಃ ಆಕಾಶಃ ಸಂಭೂತಃ'' ಇತ್ಯಾದಿ ಶ್ರುತಿಯು ಆಕಾಶಕ್ಕೆ ಉತ್ಪತ್ತಿಮತ್ತ್ವವನ್ನು ಸಮರ್ಥಿಸುತ್ತದೆ. (ಆಕಾಶಕ್ಕೆ ಅನಾದಿತ್ವವನ್ನು ಪ್ರತಿಪಾದಿಸುವ ಶ್ರುತಿಯು ಗೌಣವು). ಅವ್ಯಕ್ತವಾದುದ್ದು ವ್ಯಕ್ತವಾಗುವುದೇ ಉತ್ಪತ್ತಿಯು. ಆದ್ದರಿಂದ ಸ್ವರೂಪಮತ್ತ್ವದಿಂದ ಉತ್ಪತ್ತಿಯಿಲ್ಲ ಎಂದರ್ಥ. ಅನಾದಿತ್ವವನ್ನು ಹೇಳುವ ಶ್ರುತಿಗೆ ಇದು ವಿರೋಧವಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್‌ಕಾರಣತ್ವವು ಯುಕ್ತವೇ ಆಗಿದೆ ಎಂಬುದೇ ಸಿದ್ಧಾಂತವು.

### ಅಧಿಕರಣ – ೨

### ॥ ಮಾತರಿಶ್ವಾಧಿಕರಣ ॥

## ॥ ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ ॥

ಈ ಅಧಿಕರಣದಲ್ಲಿ ಮುಖ್ಯವಾಯುವಿಗೆ ಉತ್ಪತ್ತಿಮತ್ತ್ವವನ್ನು ಸಮರ್ಥಿಸುತ್ತಾರೆ. ಆಕಾಶಾದಿಗಳಿಗೆ ಉತ್ಪತ್ತಿಯಿಲ್ಲವೆಂದು ಯಾವುದೇ ಶ್ರುತಿಯಲ್ಲಿ ಉಕ್ತವಾಗಿಲ್ಲ. ಇದೇ ನ್ಯಾಯದಿಂದ ಮುಖ್ಯ ವಾಯುವಿಗೆ ಉತ್ಪತ್ತಿಯುಂಟು ಎಂಬುದು ಕೂಡ ವ್ಯಾಖ್ಯಾತವಾದಂತಾಯಿತು.

''ವಾಯುರ್ವಾವ ನಿತ್ಯಃ'' ''ಸ ವಾ ಏಷ ದೇವತಾ ಅನಾದಿರ್ಯೋಽಯಂ ಪವತೇ'' ಇತ್ಯಾದಿ ವಾಯುವಿಗೆ ಅನಾದಿತ್ವ, ನಿತ್ಯತ್ವಗಳನ್ನು ಹೇಳುವ ಶ್ರುತಿಗೂ ಹಿಂದೆ ಹೇಳಿದಂತೆಯೇ ಅರ್ಥಮಾಡಬೇಕು. ಏಕೆಂದರೆ ''ಪ್ರಾಣಾದ್ವಾಯುರಜಾಯತ'' ಇತ್ಯಾದಿ ಶ್ರುತಿಯು ಮುಖ್ಯ ವಾಯುವಿಗೆ ಉತ್ಪತ್ತಿಯನ್ನು ಹೇಳುತ್ತದೆ. ನಿತ್ಯತ್ವ ಹೇಳುವ ಶ್ರುತಿಯು ವಾಯುವಿನ ಸ್ವರೂಪ ಹಾಗೂ ಜ್ಞಾನಕ್ಕೆ ಅನುತ್ಪತ್ತಿ ಪರತ್ವವಾಗಿರುವುದರಿಂದ, ಉತ್ಪತ್ತಿ ಹೇಳುವ ಶ್ರುತಿಗೆ ವಿರೋಧವಿಲ್ಲ. ಆದ್ದರಿಂದ ವಿಷ್ಣುವಿಗೆ ಸರ್ವಜಗತ್‌ಕಾರಣತ್ವವು ಯುಕ್ತವೇ ಆಗಿದೆ.

## ಅಧಿಕರಣ – ೩

## ॥ ಅಸಂಭವಾಧಿಕರಣ ॥

## ॥ ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ ॥

ವಿಷ್ಣುವಿಗೆ ಉತ್ಪತ್ತಿಯಿಲ್ಲವೆಂದು ಈ ಅಧಿಕರಣದಲ್ಲಿ ಸಮರ್ಥಿಸುತ್ತಾರೆ.

ಸದ್ವಸ್ತುವಾದ ಬ್ರಹ್ಮನಿಗೆ ಉತ್ಪತ್ತಿಯೆಂಬುವುದು ಅಸಂಭವವು. ಆದ್ದರಿಂದ ಬ್ರಹ್ಮನಿಗೆ ಅನುತ್ಪತ್ತಿಯು ಯುಕ್ತವೇ ಆಗಿದೆ. ಹಾಗಾದರೆ ''ಅಸತಃ ಸದಜಾಯತ'' ಎಂಬ ಶ್ರುತಿಗೆ ಅರ್ಥವೇನು? ಎಂದರೆ, ''ಬ್ರಹ್ಮ ವಾ ಅಸತ್, ಸದ್ವಾವ ಪ್ರಾಣಃ'' ಎಂಬ ಶ್ರುತಿಯಿಂದ ಅಸತ್ ಶಬ್ದವಾಚ್ಯವಾದ ಬ್ರಹ್ಮನ ದೆಶೆಯಿಂದ ಸತ್ ಶಬ್ದವಾಚ್ಯನಾದ ಮುಖ್ಯ ಪ್ರಾಣನ ಉತ್ಪತ್ತಿಯು ಎಂದು ಅರ್ಥವಾಗುತ್ತದೆ. ಆದ್ದರಿಂದ ಸತ್ ಎಂದು ಹೇಳಲ್ಪಡುವ ವಿಷ್ಣುವಿಗೆ ಉತ್ಪತ್ತಿಯಿಲ್ಲ ಎಂಬುದೇ ಸಿದ್ಧಾಂತವು.

## ಅಧಿಕರಣ – ೪

## ॥ ತೇಜೋಽಧಿಕರಣ ॥

## ॥ ಓಂ ತೇಜೋಽತಸ್ತಥಾ ಹ್ಯಾಹ ಓಂ ॥

ಈ ಅಧಿಕರಣದಲ್ಲಿ ತೇಜಸ್ಸಿಗೆ ಉತ್ಪತ್ತಿಮತ್ತ್ವ ಸಮರ್ಥನೆ ಮಾಡಲಾಗಿದೆ. ವಿಷ್ಣುವಿನಿಂದಲೇ ವಾಯುವಿನ ಮೂಲಕ ತೇಜಸ್ಸು ಹುಟ್ಟುತ್ತದೆ. ಏಕೆಂದರೆ 'ವಾಯೋರಗ್ನಿಃ' ಎಂಬುದಾಗಿ ಶ್ರುತಿಯಿದೆ. "ತತ್ತೇಜೋಽಸೃಜತ" ವಿಷ್ಣುವಿನಿಂದ ಅಗ್ನಿಯು ಹುಟ್ಟಿತು ಎಂಬುದಾಗಿ ಮತ್ತೊಂದು ಶ್ರುತಿಯು ಹೇಳುತ್ತದೆ. ವಿಷ್ಣುವು ವಾಯುದ್ವಾರಾ ಅಗ್ನಿಯನ್ನು ಸೃಷ್ಟಿಮಾಡುತ್ತಾನೆ ಎಂದು ಅರ್ಥ ಮಾಡುವುದರಿಂದ ಪರಸ್ಪರ ಶ್ರುತಿ ವಿರೋಧ ಬರುವುದಿಲ್ಲ.

## ಅಧಿಕರಣ – ೫

## ॥ ಅಬಧಿಕರಣ ॥

## ॥ ಓಂ ಆಪಃ ಓಂ ॥

ಈ ಅಧಿಕರಣದಲ್ಲಿ ವಿಷ್ಣುವಿನಿಂದ ನೀರಿನ ಉತ್ಪತ್ತಿಮತ್ತ್ವವನ್ನು ಸಮರ್ಥನೆ ಮಾಡಲಾಗಿದೆ.

'ಅಗ್ನೇರಾಪಃ' ಎಂಬ ಶ್ರುತಿಯಿರುವುದರಿಂದ "ನೀರಿನ ಉತ್ಪತ್ತಿಗೆ ಅಗ್ನಿಯೇ ಕಾರಣ, ವಿಷ್ಣುವಲ್ಲ" ಎಂದು ಹೇಳುವುದು ಆಯುಕ್ತವು. "ತದಪೋಽಸೃಜತ" ಇತ್ಯಾದಿ ಶ್ರುತಿಯು ವಿಷ್ಣುವಿನ ಸಕಾಶದಿಂದ ನೀರಿನ ಉತ್ಪತ್ತಿಯನ್ನು ಸಮರ್ಥಿಸುತ್ತದೆ. ಹಿಂದಿನ ಅಧಿಕರಣಗಳಲ್ಲಿ ವ್ಯಾಖ್ಯಾನ ಮಾಡಿದ ರೀತಿಯಲ್ಲೇ ಇಲ್ಲಿಯೂ ತಿಳಿಯತಕ್ಕದ್ದು. "ಕರ್ತಾ ಸರ್ವಸ್ಯ ವೈ ವಿಷ್ಣುಃ ಏಕ ಏವ ನ ಸಂಶಯಃ। ಇತರೇಷಾಂತು ಸತ್ತಾದ್ಯಾಃ ಯತ ಏವ ತದಾಜ್ಞಯಾ ॥

ಎಂಬ ಶ್ರುತಿಯು ವಿಷ್ಣುವಿನಿಂದಲೇ ಸರ್ವಜಗದುತ್ಪತ್ತಿಯು ಎಂಬುದಕ್ಕೆ ಪ್ರಮಾಣವಾಗಿದೆ. ಆದ್ದರಿಂದ ವಿಷ್ಣುವಿಗೇ ಸಕಲ ಜಗತ್ ಕಾರಣತ್ವವನ್ನು ಹೇಳುವುದು ಯುಕ್ತವೇ ಆಗಿದೆ.

## ಅಧಿಕರಣ – ೬

## ॥ ಪೃಥಿವ್ಯಧಿಕರಣ ॥

### ॥ ಓಂ ಪೃಥಿವ್ಯಧಿಕಾರರೂಪ ಶಬ್ದಾಂತರಾದಿಭ್ಯಃ ಓಂ ॥

ಈ ಅಧಿಕರಣದಲ್ಲಿ ಶ್ರುತ್ಯುಕ್ತ ಅನ್ನ ಶಬ್ದಕ್ಕೆ ಪೃಥಿವೀತ್ವವನ್ನು ನಿರೂಪಿಸಲಾಗಿದೆ. ಶ್ರುತ್ಯುಕ್ತ ಅನ್ನವು ಪೃಥಿವಿಯನ್ನು ಹೇಳುತ್ತದೆ. ಏಕೆಂದರೆ ಅದು ಭೂತ ಪ್ರಕರಣದಲ್ಲಿ ಉಕ್ತವಾಗಿದೆ. ಜೊತೆಗೆ ''ಯತ್ ಕೃಷ್ಣಂ'' ಎಂಬುದಾಗಿ ಪೃಥಿವಿಯ ಲಿಂಗವಾದ ಕಾರ್ಷ್ಣ್ಯರೂಪವನ್ನು ಹೇಳಲಾಗಿದೆ. ''ಪೃಥಿವೀ ವಾ ಅನ್ನಂ'' ಇತ್ಯಾದಿ ಶ್ರುತಿಯು ಇದನ್ನು ಸಮರ್ಥಿಸುತ್ತದೆ. ಶ್ರುತಿಯು ಅಪ್ರಮಾಣವಾದುದನ್ನು ಎಲ್ಲಿಯೂ ಹೇಳುವುದಿಲ್ಲ. ಆದ್ದರಿಂದ ''ತಾ ಅನ್ನಮಸೃಜಂತ'' ಎಂಬ ಶ್ರುತಿಯಲ್ಲಿ ಅನ್ನ ಶಬ್ದದಿಂದ ಪೃಥಿವಿಯೇ ವಿವಕ್ಷಿತವು.

## ಅಧಿಕರಣ – ೭

## ॥ ತದಭಿಧ್ಯಾನಾಧಿಕರಣ ॥

### ॥ ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ ಓಂ ॥

ಈ ಅಧಿಕರಣದಲ್ಲಿ ವಿಷ್ಣುವಿಗೆ ಅಧಿಭೂತಾದಿ ಸಂಹಾರ ಕರ್ತೃತ್ವವನ್ನು ನಿರೂಪಿಸಲಾಗಿದೆ.

ವಿಷ್ಣುವೇ ಸರ್ವಸಂಹರ್ತನು. ಏಕೆಂದರೆ ''ತಸ್ಯಾಭಿಧ್ಯಾನಾತ್'' ಎಂಬ ಶ್ರುತಿಯು ವಿಷ್ಣುವೇ ಸರ್ವಸಂಹರ್ತನು. ಏಕೆಂದರೆ ವಿಷ್ಣುವಿನ ಇಚ್ಛೆಯಿಂದ ಅನಾದಿಬಂಧನಿವೃತ್ತಿರೂಪವಾದ ಮೋಕ್ಷವು ಶ್ರುತವಾಗಿದೆ. ಮೋಕ್ಷವು ಭಗವದಿಚ್ಛಾಧೀನವೆಂದು ಹೇಳಿರುವುದರಿಂದ, ಅದೇ ಯುಕ್ತಿಯಿಂದ ಭಗವಂತನ ಸರ್ವಕರ್ತೃತ್ವವು ಅನುಮೇಯಿಸಲ್ಪಡುತ್ತದೆ.

ಅನಾದಿಯಾದ ಬಂಧವನ್ನೇ ಲಯಮಾಡುವ ಶ್ರೀಹರಿಯೇ ಸಾದಿಯಾದ ಅಧಿಭೂತಾದಿ ಜಗತ್ತನ್ನು ಸಂಹಾರ ಮಾಡುವವನೂ ಆಗಿರುವನು ಎಂಬುದೇ ಈ ಅಧಿಕರಣದ ತಾತ್ಪರ್ಯ.

''ಸ ಇದಂ ಸರ್ವಂ ವಿಲಾಪಯತಿ'' ಇತ್ಯಾದಿ ಶ್ರುತಿಯೂ ಇದೆ. ಕೆಲವು ಶ್ರುತಿಗಳಲ್ಲಿ ರುದ್ರದೇವರಿಗೆ ಸಂಹಾರಕತ್ವವನ್ನು ಹೇಳಿದೆಯಲ್ಲ ಎಂದರೆ, ಅದು ಕೇವಲ ದ್ವಾರಕಾರಣತ್ವ ರೂಪದಿಂದಷ್ಟೆ ಶ್ರೀಹರಿಯೇ ರುದ್ರದೇವರಲ್ಲಿದ್ದು ಅವರ ಮೂಲಕ ಸಂಹಾರ ಮಾಡಿಸುವನು ಎಂದು ತಿಳಿಯಬೇಕು. ''ನಿಮಿತ್ತ ಮಾತ್ರ ಮೀಶಸ್ಯ ವಿಶ್ವಸರ್ಗ ನಿರೋಧಯೋಃ । ಹಿರಣ್ಯಗರ್ಭಃ ಶರ್ವಶ್ಚ ಕಾಲಾಖ್ಯಾ ರೂಪಿಣಸ್ತವ ॥'' ಎಂಬುದಾಗಿ ಭಗವಂತನ ವಚನವಿದೆ.

### ಅಧಿಕರಣ – ೮

### ॥ ವಿಪರ್ಯಯಾಧಿಕರಣ ॥

### ॥ ಓಂ ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ಓಂ ॥

ಈ ಅಧಿಕರಣದಲ್ಲಿ ಲಯವು ಸೃಷ್ಟಿಗೆ ವಿರುದ್ಧ ಕ್ರಮದಲ್ಲಿಯೇ ಆಗುವುದು ಎಂಬುದನ್ನು ನಿರೂಪಿಸಲಾಗಿದೆ.

ಲಯದ ವಿಷಯದಲ್ಲಿ ಶ್ರುತ್ಯುಕ್ತ ಕ್ರಮವಾದರೂ ಉತ್ಪತ್ತಿ ವಿರುದ್ಧ ಕ್ರಮಾಪೇಕ್ಷೆಯಿಂದಲೇ ತಿಳಿಯತಕ್ಕದ್ದು. ಏಕೆಂದರೆ ವ್ಯುತ್ಕ್ರಮದಿಂದಲೇ ಲಯವು ಎಂಬುದಾಗಿ ಶ್ರುತಿಯಲ್ಲಿಯೇ ಹೇಳಲಾಗಿದೆ. ಇದು ಲೋಕದಲ್ಲಿ ವಿರುದ್ಧವಾಗಿ ಕಂಡರೂ ಪರಮಾತ್ಮನ ಇಚ್ಛೆಯಿಂದ ನಡೆಯುವ ಲಯದಲ್ಲಿ ವ್ಯುತ್ಕ್ರಮವು ಕೂಡುತ್ತದೆ. ಲಯಕ್ರಮವನ್ನು ಹೇಳುವ ಶ್ರುತಿಯಲ್ಲಿಯೂ ಒಂದು ಕ್ರಮವೇ ಇದೆ. ಅದೇ ಉತ್ಪತ್ತಿಕ್ರಮಕ್ಕೆ ವಿರುದ್ಧವಾದ ಕ್ರಮವು. ಈ ವಿಷಯದಲ್ಲಿ ಪ್ರಮಾಣವಾಗಿ ''ಕರ್ತಾ ಪ್ರಾಣಾದಿಕಸ್ಯಾಪಿ ಹಂತಾ ಭೂಮ್ಯಾದಿಕಸ್ಯ ಚ । ಯಃ ಕ್ರಮಾತ್ ವ್ಯುತ್ಕ್ರಮಾಚ್ಚೈವ ಸ ಹರಿಃ ಪರ ಉಚ್ಯತೇ ॥'' ಎಂಬುದಾಗಿ ನಿರವಕಾಶ ಶ್ರುತಿಯೂ ಇದೆ. ಆದ್ದರಿಂದ ''ವ್ಯುತ್ಕ್ರಮದಿಂದಲೇ ಲಯ'' ಎಂಬುದೇ ಸಿದ್ಧಾಂತ.

### ಅಧಿಕರಣ – ೯

### ॥ ಅಂತರಾಧಿಕರಣ ॥

### ॥ ಓಂ ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನ ಅವಿಶೇಷಾತ್ ಓಂ ॥

ಈ ಅಧಿಕರಣದಲ್ಲಿ ಮನಸ್ತತ್ತ್ವಾದಿಗಳಿಗೆ ವ್ಯುತ್ಕ್ರಮದಿಂದಲೇ ಲಯವು ಎಂಬುದನ್ನು ಸಮರ್ಥನೆ ಮಾಡುತ್ತಾರೆ.

ವಿಜ್ಞಾನವು ಮನಸ್ತತ್ತ್ವದಲ್ಲಿ ಲಯವಾಗುವುದು ಅಂದರೆ ವ್ಯುತ್ಕ್ರಮವನ್ನು ಬಿಟ್ಟು ಉತ್ಪತ್ತಿ ಕ್ರಮದಿಂದಲೇ ಲಯವು. ಏಕೆಂದರೆ ಲೋಕದಲ್ಲಿ ಯಾವಕ್ರಮದಲ್ಲಿ ಉತ್ಪತ್ತಿಯೋ ಅದೇ ಕ್ರಮದಿಂದಲೇ ಲಯವು ಎಂಬುದು ಯುಕ್ತವಾಗಿಯೇ ಕಂಡಿದೆ. ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ ಅದಕ್ಕೆ ವಿಶೇಷವಾದ ಪ್ರಮಾಣವಿಲ್ಲ. ಆದ್ದರಿಂದ ವ್ಯುತ್ಕ್ರಮದಿಂದಲೇ ವಿಜ್ಞಾನ ಮನಸ್ತತ್ತ್ವಗಳ ಲಯ ಪ್ರಕಾರವು ಎಂದು ತಾತ್ಪರ್ಯ.

''ಪರಾದವ್ಯಕ್ತಮುತ್ಪನ್ನಂ ಅವ್ಯಕ್ತಾತ್ತು ಮಹಾನ್ ತಥಾ ।
ವಿಜ್ಞಾನತತ್ತ್ವಂ ಮಹತಃ ಸಮುತ್ಪನ್ನಂ ಚತುರ್ಮುಖಾತ್ ॥
ವಿಜ್ಞಾನತತ್ತ್ವಾತ್ತು ಮನೋ ಮನಸ್ತತ್ತ್ವಾಚ್ಚ ಖಾದಿಕಮ್ ॥''

ಹೀಗೆ ಶ್ರುತಿಯಿದೆ. ಆದ್ದರಿಂದ ವಿಜ್ಞಾನತತ್ತ್ವದಿಂದ ಮನಸ್ತತ್ತ್ವದ ಉತ್ಪನ್ನವು. 'ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಯು ಮನೋರೂಪ ಇಂದ್ರಿಯದಿಂದ ಜ್ಞಾನದ ಉತ್ಪತ್ತಿಯನ್ನು ಹೇಳುತ್ತದೆಯೇ ಹೊರತು ಮನಸ್ತತ್ತ್ವದಿಂದ ವಿಜ್ಞಾನತತ್ತ್ವದ ಉತ್ಪತ್ತಿಯನ್ನಲ್ಲ ಎಂದು ತಿಳಿಯತಕ್ಕದ್ದು.

## ಅಧಿಕರಣ – ೧೦

## ॥ ಆತ್ಮಾಧಿಕರಣ ॥

## ॥ ಓಂ ನಾತ್ಮಾಽಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ ಓಂ ॥

ಈ ಅಧಿಕರಣದಲ್ಲಿ ಭಗವಂತನಿಗೆ ಲಯವಿಲ್ಲ ಎಂಬುದನ್ನು ನಿರೂಪಿಸಲಾಗಿದೆ. ಪರಮಾತ್ಮನು ಲಯ ಹೊಂದುವುದಿಲ್ಲ. ಏಕೆಂದರೆ ಪರಮಾತ್ಮನ ಲಯವು ಎಲ್ಲಿಯೂ ಹೇಳಲ್ಪಟ್ಟಿಲ್ಲ. ಪರಮಾತ್ಮನು ನಿತ್ಯನು, ಅವನ ದೇಹವೂ ನಿತ್ಯವು ಎಂಬುದಾಗಿ ''ನಿತ್ಯೋಽನಿತ್ಯಾನಾಂ'' ಇತ್ಯಾದಿ ಅನೇಕ ಶ್ರುತಿಗಳು ಪರಮಾತ್ಮನ ನಿತ್ಯತ್ವವನ್ನು ಪ್ರತಿಪಾದಿಸುತ್ತವೆ. ಚತುರ್ವಿಧನಾಶರಹಿತನಾದ ಪರಮಾತ್ಮನಿಗೆ ಲಯವಿಲ್ಲವೆಂಬುದೇ ಸಿದ್ಧಾಂತವು.

## ಅಧಿಕರಣ – ೧೧

## ॥ ಜ್ಞಾಧಿಕರಣ ॥

## ॥ ಓಂ ಜ್ಞೋऽತ ಏವ ಓಂ ॥

ಜೀವನಿಗೆ ಸ್ಥೂಲ ಶರೀರದ ಸಂಬಂಧವೇ ಜನನವೆಂದು ಈ ಅಧಿಕರಣದಲ್ಲಿ ನಿರೂಪಣೆ ಮಾಡಲಾಗಿದೆ.

ಜೀವನು ಪರಮಾತ್ಮನಿಂದಲೇ ಹುಟ್ಟುತ್ತಾನೆ. ಹಾಗೆಂದು ಶ್ರುತಿಯು ಪ್ರತಿಪಾದಿಸುತ್ತದೆ. ''ತೇ ವಾ ಏತೇ ಚಿದಾತ್ಮನೋऽವಿನಷ್ಟಾಃ ಪರಂ ಜ್ಯೋತಿಃ ನಿವಿಶಂತಿ । ಅವಿನಷ್ಟಾ ಏವ ಉತ್ಪದ್ಯಂತೇ ॥'' ಎಂಬುದಾಗಿ ಶ್ರುತಿಯಿದೆ. ಇದರಿಂದ ಜೀವರಿಗೆ ಅನಾದಿನಿತ್ಯತ್ವವನ್ನು ಹೇಳುವ ಶ್ರುತಿಗೆ ವಿರೋಧವಿಲ್ಲ. ಜೀವನು ಅನಾದಿನಿತ್ಯನಾದರೂ ಶರೀರಾದಿ ಉಪಾಧಿಯ ಅಪೇಕ್ಷೆಯಿಂದ ಉತ್ಪತ್ತಿಯು ಕೂಡುತ್ತದೆ.

''ಉತ್ಪದ್ಯಂತೇ ಚಿದಾತ್ಮನಾಃ ನಿತ್ಯಾಃ ನಿತ್ಯಾತ್ ಪರಾತ್ಮನಃ ।
ಉಪಾಧ್ಯಪೇಕ್ಷಯಾ ತೇಷಾಂ ಉತ್ಪತ್ತಿರಿತಿ ಗೀಯತೇ ॥''

ಎಂಬುದಾಗಿ ವ್ಯೋಮ ಸಂಹಿತೆಯಲ್ಲಿ ಹೇಳಿದೆ.

''ನ ವಿಯದಶ್ರುತೇಃ'' ಎಂಬ ಅಧಿಕರಣದಿಂದ ಆರಂಭಿಸಿ ''ಜ್ಞೋऽತ ಏವ'' ಪರ್ಯಂತವಾಗಿ ಹನ್ನೊಂದು ಅಧಿಕರಣಗಳ ತಾತ್ಪರ್ಯವನ್ನು ಅಣುಭಾಷ್ಯದಲ್ಲಿ ಸಂಕ್ಷಿಪ್ತವಾಗಿ ಕೆಳಕಂಡಂತೆ ಸಂಗ್ರಹಿಸಲಾಗಿದೆ.

**ಅಣುಭಾಷ್ಯ** : ''ಆಕಾಶಾದಿ ಸಮಸ್ತಂ ಚ ತಜ್ಜಂ ತೇನೈವ ಲೀಯತೇ । ಸೋऽನುತ್ಪತ್ತಿಲ್ಲಯಃ ಕರ್ತಾ''

ಇಲ್ಲಿ ಆಕಾಶಪದದಿಂದ ಅವ್ಯಾಕೃತಾಕಾಶ, ಭೂತಾಕಾಶ, ತದಭಿಮಾನಿ ದೇವತೆಗಳನ್ನು ಹೇಳಲಾಗಿದೆ. ಆದಿ ಪದದಿಂದ ವಾಯುವೇ ಮೊದಲಾದ ಭೂತಗಳನ್ನು ತದಭಿಮಾನಿ ದೇವತೆಗಳನ್ನು ಗ್ರಹಿಸಬೇಕು. ಸೂತ್ರೋಕ್ತವಾದ 'ವಿಯತ್'

ಪದದಿಂದ ಪ್ರಕೃತಿ, ಜೀವ, ಕಾಲ, ವೇದ, ಮಹತ್‌ತತ್ವ, ಅಹಂಕಾರ ತತ್ವ, ಮನಸ್ತತ್ವ, ಬುದ್ಧಿ ಮೊದಲಾದವುಗಳೂ ತದಭಿಮಾನಿ ದೇವತೆಗಳೂ ಹೇಳಲ್ಪಟ್ಟಿವೆ.

ಒಟ್ಟಿನಲ್ಲಿ ಆಕಾಶಾದಿ ಸಮಸ್ತವೂ, 'ಚ' ತದಭಿಮಾನಿ ದೇವತೆಗಳೂ 'ತಸ್ಮಾತ್' ಶ್ರೀಹರಿಯಿಂದ 'ಜಂ' ಉತ್ಪನ್ನವಾದವು ಎಂದು ತಾತ್ಪರ್ಯ.

ಇಲ್ಲಿ 'ತಜ್ಜಂ' ಎಂಬುದರಿಂದ ವಿಯದಧಿಕರಣ, ಮಾತರಿಶ್ವಾಧಿಕರಣ, ತೇಜೋಽಧಿಕರಣ, ಅಬಧಿಕರಣ, ಪೃಥಿವ್ಯಧಿಕರಣ, ಜ್ಞಾಧಿಕರಣ – ಹೀಗೆ ಆರು ಅಧಿಕರಣಗಳ ತಾತ್ಪರ್ಯವನ್ನು ಸಂಗ್ರಹಿಸಲಾಗಿದೆ.

''ತೇನೈವ ಲೀಯತೇ'' ಎಂಬುದರಿಂದ ತದಭಿಧ್ಯಾನಾಧಿಕರಣ, ವಿಪರ್ಯಯಾಧಿಕರಣ, ಅಂತರಾಧಿಕರಣ – ಹೀಗೆ ಮೂರು ಅಧಿಕರಣಗಳ ತಾತ್ಪರ್ಯವನ್ನು ಹೇಳಿದ್ದಾರೆ.

''ಸೋಽನುತ್ಪತ್ತಿಲಯಃ ಕರ್ತಾ'' ಎನ್ನುವುದರಿಂದ ಅಸಂಭವಾಧಿಕರಣ, ಆತ್ಮಾಧಿಕರಣ – ಹೀಗೆ ಎರಡು ಅಧಿಕರಣಗಳ ತಾತ್ಪರ್ಯವನ್ನು ಸಂಗ್ರಹಿಸಿದ್ದಾರೆ. ''ನ ವಿದ್ಯೇತೇ ಉತ್ಪತ್ತಿ ಲಯೌ ಯಸ್ಯ ಸೋ ಅನುತ್ಪತ್ತಿ ಲಯಃ'' ಯಾರಿಗೆ ಉತ್ಪತ್ತಿಲಯಗಳಿಲ್ಲವೋ ಅವನೇ ಅನುತ್ಪತ್ತಿಲಯನಾದ ಶ್ರೀಹರಿ ಎಂದರ್ಥ. ಏಕೆಂದರೆ ಅವನು ಸ್ವತಂತ್ರ ಕರ್ತೃವು. ಈ ಪ್ರಕಾರವಾಗಿ ಹನ್ನೊಂದು ಅಧಿಕರಣಗಳ ತಾತ್ಪರ್ಯವನ್ನು ಅಣುಭಾಷ್ಯದ ಈ ಮೇಲಿನ ವಾಕ್ಯದಿಂದ ತಿಳಿಯತಕ್ಕದ್ದು.

## ಅಧಿಕರಣ – ೧೨

## ।। ಉತ್ಕ್ರಾಂತ್ಯಧಿಕರಣ ।।

## ।। ಓಂ ಉತ್ಕ್ರಾಂತಿಗತ್ಯಾಗತೀನಾಮ್ ಓಂ ।।

ಈ ಅಧಿಕರಣದಲ್ಲಿ ಜೀವನಿಗೆ ಅಣುತ್ವವನ್ನು ಸಮರ್ಥಿಸುತ್ತಾರೆ. ಜೀವನು ಅಣುವೇ ಆಗಿರುವನು. ಏಕೆಂದರೆ ಅವನು ಶ್ರುತಿಗಳಲ್ಲಿ ಹೇಳಿರುವ ಪ್ರಕಾರ ಉತ್ಕ್ರಾಂತಿ, ಗತಿ, ಆಗತಿಗಳನ್ನು ಹೊಂದಿರುವನು.

ಜೀವನು ಅಣುವಲ್ಲ ವ್ಯಾಪ್ತನೇ. ಏಕೆಂದರೆ ''ವ್ಯಾಪ್ತಾ ಹ್ಯಾತ್ಮಾನಶ್ಚೇತನಾ ನಿರ್ಗುಣಾಶ್ಚ'' ಎಂಬುದಾಗಿ ಶ್ರುತಿಯು ಜೀವನಿಗೆ ವ್ಯಾಪ್ತತ್ವವನ್ನು ಸಮರ್ಥಿಸುತ್ತದೆ ಎಂದು ಪೂರ್ವಪಕ್ಷ. ಇದನ್ನು ನಿರಾಕರಿಸುತ್ತಾರೆ. ಜೀವನು ವ್ಯಾಪ್ತನಲ್ಲ. ಏಕೆಂದರೆ ವ್ಯಾಪ್ತವಾದ ಆಕಾಶಾದಿ ದ್ರವ್ಯಗಳಿಗೆ ಉತ್ಕ್ರಾಂತ್ಯಾದಿಗಳು ಇರುವುದಿಲ್ಲ. ಆದರೆ ಜೀವನಿಗೆ ಉತ್ಕ್ರಾಂತ್ಯಾದಿಗಳನ್ನು ಶ್ರುತಿಯು ಹೇಳುತ್ತದೆ — ''ಸೋಽಸ್ಮಾತ್ ಶರೀರಾತ್ ಉತ್ಕ್ರಮ್ಯ ಅಮುಂ ಲೋಕಂ ಅಧಿಗಚ್ಛತಿ ಅಮುಷ್ಮಾದಿಮಂ ಲೋಕಂ ಆಗಚ್ಛತಿ'' ಎಂದು ವ್ಯಾಪ್ತತ್ವವನ್ನು ಹೇಳುವ ಶ್ರುತಿಯಲ್ಲಿ ''ಆತ್ಮಾನಃ'' ಎಂಬುದಕ್ಕೆ ವಿಷ್ಣುವೆಂದೇ ಅರ್ಥ ಮಾಡತಕ್ಕದ್ದು. ಇದೇ ಸಿದ್ಧಾಂತವು.

**ಅಣುಭಾಷ್ಯ :** ''ಜೀವಃ ತದ್ವಶಗಃ ಸದಾ''

ಜೀವನು ಸದಾಕಾಲದಲ್ಲಿಯೂ ಅಂದರೆ ಉತ್ಕ್ರಮಣಕಾಲದಲ್ಲಿಯೂ, ಪರಲೋಕಗಮನಾಗಮನ ಕಾಲದಲ್ಲಿಯೂ ಶ್ರೀಹರಿಯ ಅಧೀನನಾಗಿಯೇ ಗಮನಾದಿಗಳನ್ನು ಹೊಂದಿರುವನು. ''ವಶಗಃ'' ಎಂಬಲ್ಲಿನ 'ಗಃ' ಪ್ರತ್ಯಯವು ''ಗಚ್ಛತೀತಿ ಗಃ'' ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ ಎಂದು ತಿಳಿಯತಕ್ಕದ್ದು.

## ಅಧಿಕರಣ – ೧೩
## ॥ ವ್ಯತಿರೇಕಾಧಿಕರಣ ॥
## ॥ ಓಂ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ ॥

ಜೀವನಿಗೆ ಅಣುತ್ವವಿದ್ದರೂ ಕೂಡ ಅಂಶತಃ ಬಹುತ್ವವಿದೆ ಎಂಬುದನ್ನು ಈ ಅಧಿಕರಣದಲ್ಲಿ ಪ್ರತಿಪಾದಿಸಲಾಗಿದೆ.

ಜೀವನು ಅಣುವೇ ಆಗಿದ್ದರೂ ಕೂಡ, ಗಂಧವು ಒಂದೇ ಕಡೆ ಇದ್ದರೂ ಅದರ ಪರಿಮಳವು ಅಣುಗಳ ರೂಪದಲ್ಲಿ ಸುತ್ತಲೂ ವ್ಯಾಪಿಸುವ ರೀತಿಯಲ್ಲಿ ಜೀವನಿಗೂ ಅಂಶತ್ವ ರೂಪದಲ್ಲಿ ವ್ಯಾಪ್ತಿಯನ್ನು ಒಪ್ಪಲು ಅಡ್ಡಿಯಿಲ್ಲ ಎಂದರ್ಥ.

ಏಕೆಂದರೆ ಶ್ರುತಿಯೂ ಹಾಗೆಯೇ ಪ್ರತಿಪಾದಿಸುತ್ತದೆ. 'ಚ' ಶಬ್ದದಿಂದ

ಈ ವಿಷಯದಲ್ಲಿ ಸ್ಮೃತಿಯೂ ಇದೆ ಎಂದು ಅರ್ಥ. ಇದರಿಂದ 'ಸ ಏಕಧಾ ನ ಸಪ್ತಧಾ ನ ದಶಧಾ' ಎಂಬ ಶ್ರುತಿಗೆ ವಿರೋಧ ಬರುವುದಿಲ್ಲ. ಜೀವನು ಏಕರೂಪತ್ವವುಳ್ಳವನೇ ಆಗಿರಬೇಕೆಂಬ ನಿಯಮವಿಲ್ಲ. ಈಶ್ವರನ ಅನುಗ್ರಹದಿಂದ ಜೀವನು ಸ್ವರೂಪತಃ ಒಬ್ಬನೇ ಆಗಿದ್ದರೂ ಏಕಕಾಲದಲ್ಲಿ ಬಹುರೂಪತ್ವವನ್ನೂ ಹೊಂದಬಲ್ಲ. ಆದ್ದರಿಂದ ಅಂಶಿಯನ್ನು ಬಿಟ್ಟು ಅಂಶಕ್ಕೆ ಗಮನಾಗಮನವು ಕೂಡುವುದಿಲ್ಲ ಎನ್ನುವ ಹಾಗಿಲ್ಲ. 'ಸ ಏಕಧಾ' ಎಂಬ ಶ್ರುತಿಯು ಜೀವನಿಗೆ ಏಕಸ್ವರೂಪತ್ವವನ್ನು ಹೇಳಿದೆಯೇ ಹೊರತು ಬಹುರೂಪತ್ವವನ್ನು ವಿರೋಧಿಸುವುದಿಲ್ಲ. ಇದಕ್ಕೆ ಶ್ರುತಿ, ಸ್ಮೃತಿಗಳು ಪ್ರಮಾಣವಾಗಿವೆ. ''ಅಥೈಕ ಏವ ಸನ್ ಗಂಧವತ್ ವ್ಯತಿರಿಚ್ಯತೇ। ಅಥ ಏಕೀಭವತಿ'' ಹೀಗೆ ಶ್ರುತಿಯಿದೆ.

''ಅಚಿಂತ್ಯಯ್ಯೈಶಶಕ್ತ್ಯೈವ ಹ್ಯೇಕೋಽವಯವವರ್ಜಿತಃ।
ಆತ್ಮಾನಂ ಬಹುಧಾ ಕೃತ್ವಾ ಕ್ರೀಡತೇ ಯೋಗ ಸಂಪದಾ ॥''

ಎಂಬುದಾಗಿ ಪದ್ಮ ಪುರಾಣದಲ್ಲಿ ಹೇಳಿದೆ. (ಇದಕ್ಕೆ ಕರ್ದಮ ಋಷಿಯ ಕಥೆಯು ಭಾಗವತದಲ್ಲಿ ಪ್ರಸಿದ್ಧ).

**ಅಣುಭಾಷ್ಯ** : 'ಜೀವಃ ತದ್ವಶಗಃ ಸದಾ'

ಯೋಗಿಭೂತನಾದ ಅಂಶಿಯಾದ ಜೀವನು ಭಗವಂತನ ಅಧೀನನಾಗಿಯೇ ಗಂಧದಂತೆ ಅಂಶಗಳಿಂದ ಬೇರೆಕಡೆಗಳಲ್ಲಿ ಗತಿಯನ್ನು ಹೊಂದಿರುವನು ಎಂದರ್ಥ. ಆದಕಾರಣ ಕೆಲವಾರು ಜೀವರುಗಳಿಗೆ ಒಂದೇ ಕಾಲದಲ್ಲಿ ಅನೇಕ ರೂಪತ್ವವೂ ಕೂಡ ಸಂಭವಿಸುತ್ತದೆ ಎಂದು ತಾತ್ಪರ್ಯ.

## ಅಧಿಕರಣ – ೧೪

## ॥ ಪೃಥಗಧಿಕರಣ ॥

## ॥ ಓಂ ಪೃಥಗುಪದೇಶಾತ್ ಓಂ ॥

ಜೀವನಿಗೆ ಭಗವಂತನಿಂದ ಭಿನ್ನತ್ವವನ್ನು ಈ ಅಧಿಕರಣದಲ್ಲಿ ಸಮರ್ಥಿಸುತ್ತಾರೆ.

ಜೀವನು ಈಶ್ವರನಿಂದ ಭಿನ್ನವೇ ಆಗಿರುವನು. ಏಕೆಂದರೆ "ಭಿನ್ನೋಽಚಿಂತ್ಯಃ ಪರಮೋ ಜೀವ ಸಂಘಾತ್ ಪೂರ್ಣಃ ಪರೋ ಜೀವಸಂಘೋ ಹ್ಯಪೂರ್ಣಃ" ಎಂಬುದಾಗಿ ಶ್ರುತಿಯು ಉಪದೇಶಿಸುತ್ತದೆ.

ಅಭೇದದ ವಿಷಯದಲ್ಲಿಯೂ ಶ್ರುತಿಯಿದೆ ಎಂದು ಹೇಳುವುದು ಸರಿಯಲ್ಲ. ವಿರುದ್ಧ ಧರ್ಮ, ಅಧಿಕರಣ ರೂಪವಾದ ಯುಕ್ತಿಯುಕ್ತತ್ವದಿಂದ ಭೇದ ಶ್ರುತಿಗೇ ಪ್ರಾಬಲ್ಯವು. ಈಶ – ಜೀವರು ಭಿನ್ನರೇ ಎಂದು ಸಿದ್ಧಾಂತ.

**ಅಣುಭಾಷ್ಯ** : 'ಜೀವಃ ತದ್ವಶಗಸ್ಸದಾ"

ಎಲ್ಲ ಜೀವರೂ ಯಾವಾಗಲೂ ಶ್ರೀಹರಿಯ ಅಧೀನರಾಗಿಯೇ ಇರುವರು ಎಂದು ಸ್ವಾಮಿ – ಭೃತ್ಯಭಾವ ಹೇಳಿರುವುದರಿಂದ ಯಾವ ಕಾಲಕ್ಕೂ ಜೀವನು ಈಶನೊಂದಿಗೆ ಐಕ್ಯವನ್ನು ಹೊಂದುವುದಿಲ್ಲ ಎಂದರ್ಥ.

## ಅಧಿಕರಣ – ೧೫

## ॥ ಯಾವದಧಿಕರಣ ॥

### ॥ ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಃ ತದ್ದರ್ಶನಾತ್ ಓಂ ॥

ಈ ಅಧಿಕರಣದಲ್ಲಿ ಜೀವನ ಸ್ವರೂಪತಃ ನಿತ್ಯತ್ವವನ್ನು ಸಮರ್ಥಿಸುತ್ತಾರೆ.

ಯಾವ ಕಾಲದವರೆಗೆ ಪರಮಾತ್ಮನು ಇರುತ್ತಾನೋ ಅಲ್ಲಿಯವರೆಗೂ ಜೀವನು ಇರುತ್ತಾನೆ. ಆದ್ದರಿಂದ ಜೀವನೂ ನಿತ್ಯನೇ ಆಗಿರುವನು. ಪ್ರಯುಕ್ತ ಜೀವನಿಗೆ ಅನಾದಿ ಕರ್ಮದ ಸಂಬಂಧವನ್ನು ಹೇಳುವ "ಸೋಽನಾದಿನಾ ಪುಣ್ಯೇನ ಪಾಪೇನ ಚಾನುವಿದ್ಧಃ" ಎಂಬ ಶ್ರುತಿಗೆ ಅಪ್ರಾಮಾಣ್ಯತಾ ದೋಷ ಬರುವುದಿಲ್ಲ. ಜೀವನಿಗೆ ಉತ್ಪತ್ತಿಯುಂಟು ಎಂದು ಹೇಳುವ ಶ್ರುತಿಯು ಜೀವನ

ಅನಿತ್ಯತ್ವಕ್ಕೆ ಪ್ರಮಾಣವಾಗಿದೆ ಹಾಗೂ ಅದು ಯುಕ್ತಿಯುತವೂ ಆಗಿದೆ. ಆದ್ದರಿಂದ "ಅನಿತ್ಯ ಏವ ಜೀವಃ" ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಜೀವನಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗಳು ನಿರವಕಾಶವಾಗಿದ್ದು ಪ್ರಾಬಲ್ಯ ಪಡೆದಿವೆ. ಜೀವನು ಸ್ವರೂಪತಃ ನಿತ್ಯನು. ಆದರೆ ಅವನ ಧಾತುಗಳು (ಶರೀರಾದಿಗಳು) ಹುಟ್ಟುವುದು, ಸಾಯುವುದು ಇವೇ ಮೊದಲಾದವುಗಳನ್ನು ಹೊಂದಿರುವುದರಿಂದ ಶ್ರುತಿಗಳು ಈ ದೃಷ್ಟಿಯಿಂದ ಅನಿತ್ಯತ್ವವನ್ನು ಹೇಳುತ್ತವೆ ಎಂದು ತಿಳಿಯತಕ್ಕದ್ದು. "ನಿತ್ಯಃ ಪರೋ ನಿತ್ಯೋ ಜೀವೋ ಅನಿತ್ಯಾಸ್ತಸ್ಯ ಧಾತವಃ। ಅತ ಉತ್ಪದ್ಯತೇ ಚ ಮ್ರಿಯತೇ ಚ, ವಿಮುಚ್ಯತೇ" ಇತ್ಯಾದಿ ಶ್ರುತಿಯೂ, "ಆತ್ಮಾ ನಿತ್ಯಃ ಸುಖದುಃಖೇ ತು ಅನಿತ್ಯೇ ಜೀವೋ ನಿತ್ಯೋ ಧಾತುರಸ್ಯ ತ್ವನಿತ್ಯಃ ॥" ಇತ್ಯಾದಿ ಸ್ಮೃತಿಗಳೂ ಜೀವನ ನಿತ್ಯತ್ವಕ್ಕೆ ಸಮರ್ಥನೀಯವಾಗಿವೆ.

**ಅಣುಭಾಷ್ಯ :** "ಜೀವಃ ತದ್ವಶಗಃ ಸದಾ"

ಸದಾ ಪರಮಾತ್ಮನ ಅಧೀನನಾಗಿಯೇ ಇರುವ ಪ್ರಯುಕ್ತ ಜೀವನು ಎಂದಿಗೂ ಉಪಾಧಿ ಇತ್ಯಾದಿಗಳ ನಾಶಾದಿಗಳಿಂದ ನಾಶವಾಗುವುದಿಲ್ಲ. ಅಂದರೆ ಸದಾ ವಿದ್ಯಮಾನನಾದುದರಿಂದ ಜೀವನು ನಿತ್ಯನೇ ಆಗಿರುವನು ಎಂದು ತಾತ್ಪರ್ಯ.

## ಅಧಿಕರಣ – ೧೬

## ॥ ಪುಂಸ್ತ್ವಾಧಿಕರಣ ॥

### ॥ ಓಂ ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ ॥

ಈ ಅಧಿಕರಣದಲ್ಲಿ ಜೀವನಿಗೆ ಜ್ಞಾನಾನಂದಾತ್ಮಕತ್ವರೂಪವಾದ ಸ್ವರೂಪ ವನ್ನು ಸಮರ್ಥಿಸುತ್ತಾರೆ.

ಹೇಗೆ ಪುರುಷತ್ವ ಎಂಬ ಧರ್ಮವು ಮಗುವಾಗಿದ್ದಾಗಲೇ ವಿದ್ಯಮಾನ ವಾಗಿದ್ದರೂ ಯೌವನ ಬಂದಾಗ ಅಭಿವ್ಯಕ್ತವಾಗುವುದೋ, ಅದೇ ಪ್ರಕಾರವಾಗಿ

ಜೀವನ ಸ್ವರೂಪದಲ್ಲಿಯೇ ಜ್ಞಾನಾನಂದಾದಿಗಳು ಅನಾದಿಕಾಲದಿಂದಲೂ ಇದ್ದರೂ ಈಶ್ವರನ ಅನುಗ್ರಹದಿಂದ ಮುಕ್ತಿಯಲ್ಲಿ ಸ್ವರೂಪಾನಂದಾದಿಗಳು ಅಭಿವ್ಯಕ್ತವಾಗುತ್ತವೆ.''ಸ ಆನಂದಃ ಆನಂದೀ ಭವತಿ'' ಇತ್ಯಾದಿ ವ್ಯಪದೇಶವು ಇದನ್ನು ಸಮರ್ಥಿಸುತ್ತದೆ. ''ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಮ್ । ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ ॥ ಹೀಗೆ ಗೌಪವನ ಶ್ರುತಿಯಲ್ಲಿ ಹೇಳಿದೆ. ಇದರಿಂದ ''ಸ ದುಃಖಾದ್ವಿಮುಕ್ತಃ ಆನಂದೀ ಭವತಿ'' ಇತ್ಯಾದಿ ಶ್ರುತಿ ವಿರೋಧ ಬರುವುದಿಲ್ಲ ಎಂದು ತಾತ್ಪರ್ಯ.

**ಅಣುಭಾಷ್ಯ :** ''ಜೀವಃ ತದ್ವಶಗಃ ಸದಾ''

ಜೀವನ ಸ್ವರೂಪದಲ್ಲಿರುವ ಜ್ಞಾನಾನಂದಿಗಳೂ ಸದಾ ಪರಮಾತ್ಮನ ಅಧೀನವಾಗಿಯೇ ಇರುವ ಪ್ರಯುಕ್ತ ಪರಮಾತ್ಮನ ಅನುಗ್ರಹದಿಂದ ಮುಕ್ತಿಯಲ್ಲಿ ಅಭಿವ್ಯಕ್ತಿಗೊಳ್ಳುತ್ತವೆ. ಪೂರ್ವದಲ್ಲಿ ಇಲ್ಲದಿದ್ದ ಜ್ಞಾನಾನಂದಾದಿಗಳು ಜೀವನಿಗೆ ಹೊಸದಾಗಿ ಉಂಟಾಗುತ್ತವೆ ಎಂದು ತಿಳಿಯತಕ್ಕದ್ದಲ್ಲ. ಇಲ್ಲಿ 'ವಶಗಃ' ಎಂಬಲ್ಲಿರುವ 'ಗ' ಶಬ್ದವು 'ಗತಿ' ಎಂದರೆ ಜ್ಞಾನವನ್ನು ಉಪಲಕ್ಷಣಯಾ ಆನಂದಾದಿಗಳನ್ನೂ ಸೂಚಿಸುತ್ತದೆ.

## ಅಧಿಕರಣ – ೧೭

## ॥ ಕರ್ತೃತ್ವಾಧಿಕರಣ ॥

## ॥ ಓಂ ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ ॥

ಈ ಅಧಿಕರಣದಲ್ಲಿ ಜೀವನಿಗೆ ಅಸ್ವತಂತ್ರ ಕರ್ತೃತ್ವವನ್ನು ನಿರೂಪಿಸುತ್ತಾರೆ.

ಜೀವನೂ ಕೂಡ ಕರ್ತೃವೇ. ಏಕೆಂದರೆ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸುವುದರಿಂದ ವಿಧಿ ನಿಷೇಧ ರೂಪಾತ್ಮಕವಾದ ಶಾಸ್ತ್ರಗಳಿಗೆ ಪ್ರಯೋಜನತ್ವ ಸಿದ್ಧಿಸುತ್ತದೆ.

''ನಾನ್ಯಃ ಕರ್ತಾ'' ಎಂಬುದಾಗಿ ಶ್ರುತಿಯಿರುವುದರಿಂದ ಜೀವನು ಕರ್ತೃವಲ್ಲ

ಎಂದು ಹೇಳುವುದು ಸರಿಯಲ್ಲ. ಈ ಶ್ರುತಿಯು ಜೀವನಿಗೆ ಸ್ವತಂತ್ರವಾದ ಕರ್ತೃತ್ವವನ್ನು ನಿಷೇಧಿಸುತ್ತದೆಯೇ ಹೊರತು ಕರ್ತೃತ್ವವನ್ನೇ ಅಲ್ಲ. ಪರಮಾತ್ಮನನ್ನು ಬಿಟ್ಟು ಬೇರೆ ಯಾರೂ ಸ್ವತಂತ್ರ ಕರ್ತೃವಲ್ಲ. ಎಲ್ಲರೂ ಅಸ್ವತಂತ್ರ ಅಂದರೆ ಈಶಾಧೀನ ಕರ್ತೃತ್ವವುಳ್ಳವರೇ ಆಗಿರುವರು ಎಂದು ತಾತ್ಪರ್ಯ.

**ಅಣುಭಾಷ್ಯ :** ''ಜೀವಃ ತದ್ವಶಗಃ ಸದಾ''

ಇಲ್ಲಿ 'ಗ' ಶಬ್ದವು ಗತಿ ಸೂಚಕ. ಅಂದರೆ ಗಮನಾದಿ ಕರ್ತೃತ್ವ ಸೂಚಕ. ಅಂದರೆ ಜೀವನು ಸದಾ ಪರಮಾತ್ಮನ ಅಧೀನನಾಗಿಯೇ ಕರ್ತೃತ್ವವುಳ್ಳವನು ಎಂದರ್ಥ. 'ಸದಾ' ಎಂಬುದಕ್ಕೆ ಸಂಸಾರದಲ್ಲಿಯೂ ಹಾಗೂ ಮುಕ್ತಿಯಲ್ಲಿಯೂ ಎಂದರ್ಥ.

## ಅಧಿಕರಣ – ೧೮

## ॥ ಅಂಶಾಧಿಕರಣ ॥

**॥ ಓಂ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ ಓಂ ॥**

ಈ ಅಧಿಕರಣದಲ್ಲಿ ಜೀವನಿಗೆ ಭಗವದಂಶತ್ವವನ್ನು ಸಮರ್ಥಿಸುತ್ತಾರೆ.

ಜೀವನು ಪರಮಾತ್ಮನ ಅಂಶನೇ ಆಗಿರುವನು. ಏಕೆಂದರೆ ''ನಾನಾ ಹ್ಯೇನಂ ವ್ಯಪದಿಶಂತಿ'' ಇತ್ಯಾದಿ ಶ್ರುತಿಯಲ್ಲಿ ಪಿತೃತ್ವಾದಿ ನಾನಾ ಪ್ರಕಾರದಿಂದ ಜೀವನ ಪರಮಾತ್ಮನ ಸಂಬಂಧಿತ್ವವು ಹೇಳಲ್ಪಟ್ಟಿದೆ. ''ಬ್ರಹ್ಮದಾಶಾಃ, ಬ್ರಹ್ಮಕಿತವಾಃ, ಬ್ರಹ್ಮೈವೇತೇ ದಾಶಾಃ'' ಎಂಬುದಾಗಿ 'ದಾಶಕಿತವಾದಿತ್ವ' ಅಂದರೆ ಜೀವನಿಗೆ ಬ್ರಹ್ಮಾಭಿನ್ನತ್ವವನ್ನು ಕೆಲವು ಶಾಖಿಗಳು ಹೇಳುವರು. ಈಶ – ಜೀವರಲ್ಲಿ ಬಿಂಬ – ಪ್ರತಿಬಿಂಬತ್ವ ಭಾವವನ್ನು ಒಪ್ಪದಿದ್ದರೆ ಭೇದ ಹಾಗೂ ಅಭೇದವನ್ನು ಹೇಳುವ ಶ್ರುತಿಗಳ ಸಮನ್ವಯ ಸಾಧ್ಯವಿಲ್ಲ. ಈಶ – ಜೀವರಿಗೆ ಭೇದವನ್ನು ಅಂಗೀಕರಿಸಿ, ಅಭೇದ ಸ್ಥಾನದಲ್ಲಿ ಪ್ರತಿಬಿಂಬಾಂಶತ್ವವನ್ನು ಹೊಂದಿಸುವುದರಿಂದ ಅಭೇದ

ಹೇಳುವ ಶ್ರುತಿಗೂ ವಿರೋಧ ಬರುವುದಿಲ್ಲ. "ಅಭೇದ ಶ್ರುತಯೋರಂ ಶತ್ವಾತ್" ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಪರಮಶ್ರುತಿಯ ವಾಕ್ಯವನ್ನು ಈ ಅಧಿಕರಣದ ವಿವರಣೆಯಲ್ಲಿ ಉಲ್ಲೇಖಿಸಿದ್ದಾರೆ. ಜೀವನಿಗೆ ಪರಮಾತ್ಮನೊಂದಿಗೆ ಅನಂಶತ್ವ ವನ್ನೂ ಹಾಗೆಯೇ ಅಂಶತ್ವವನ್ನೂ ಹೇಳುವ ಶ್ರುತಿ ಸ್ಮೃತಿಗಳಿದ್ದರೂ ಅವುಗಳಿಗೆ ಪರಸ್ಪರ ವಿರೋಧವಿಲ್ಲ. ಅಂಶದಲ್ಲಿ ಎರಡು ವಿಧ. ಸ್ವರೂಪಾಂಶ ಮತ್ತು ಭಿನ್ನಾಂಶ. ಅನಂಶತ್ವವನ್ನು ಹೇಳುವ ವಾಕ್ಯಗಳು ಜೀವನಿಗೆ ಪರಮಾತ್ಮನೊಂದಿಗೆ ಸ್ವರೂಪಾಂಶತ್ವವನ್ನು ನಿರಾಕರಿಸುತ್ತವೆ ಎಂದರ್ಥ. ಮತ್ಸ್ಯಾದಿ ಅವತಾರ ರೂಪಗಳು ಪರಮಾತ್ಮನ ಸ್ವರೂಪಾಂಶಗಳು. ಜೀವಾದಿಗಳು ಪರಮಾತ್ಮನ ಭಿನ್ನಾಂಶರು ಅಂದರೆ ಪ್ರತಿಬಿಂಬಸ್ವರೂಪರು ಎಂದರ್ಥ.

**ಅಣುಭಾಷ್ಯ** : "ಜೀವಃ ತದ್ವಶಗಃ ಸದಾ ತದಾಭಾಸಃ"

ಇಲ್ಲಿ ಪ್ರವೃತ್ಯರ್ಥದಲ್ಲಿ ಗತಿ ಶಬ್ದವನ್ನು ಉಪಯೋಗಿಸಿದ್ದಾರೆ. ಅಂದರೆ ಸದಾ ಶ್ರೀಹರಿಯ ಅಧೀನವಾದ ಪ್ರವೃತ್ತಿಯುಳ್ಳ ಜೀವನು ಪರಮಾತ್ಮನ ಪ್ರತಿಬಿಂಬಾಂಶನು ಎಂದು ತಾತ್ಪರ್ಯ.

## ಅಧಿಕರಣ – ೧೯

## ॥ ಅದೃಷ್ಟಾಧಿಕರಣ ॥

## ॥ ಓಂ ಅದೃಷ್ಟಾನಿಯಮಾತ್ ಓಂ ॥

ಈ ಅಧಿಕರಣದಲ್ಲಿ ಜೀವನಿಗೆ ಭಗವಂತನ ಪ್ರತಿಬಿಂಬತ್ವವನ್ನು ಪ್ರಾರ್ಥಿಸುತ್ತಾರೆ. ಎಲ್ಲ ಜೀವರೂ ಒಬ್ಬನೇ ಪರಮಾತ್ಮನ ಪ್ರತಿಬಿಂಬರಾದರೂ ಪರಸ್ಪರ ವಿಲಕ್ಷಣರಾಗಿರುವರು. ಏಕೆಂದರೆ ಜೀವರು ಅದೃಷ್ಟದಲ್ಲಿ ಎಂದರೆ ವಿದ್ಯಾದಿಗಳಲ್ಲಿ ಏಕರೂಪದಿಂದಿರುವುದಿಲ್ಲ.

ಬಿಂಬವು ಒಂದೇ ಆಗಿದ್ದರೂ ಅದರ ಪ್ರತಿಬಿಂಬಗಳು ಒಂದೇ ರೀತಿಯೇ ಇರಬೇಕು ಎಂಬ ನಿಯಮವಿಲ್ಲ. ಜೀವರು ಪರಮಾತ್ಮನ ಪ್ರತಿಬಿಂಬರು ಎಂಬುದಕ್ಕೆ

"ರೂಪಂ ರೂಪಂ ಪ್ರತಿರೂಪೋ ಬಭೂವ" (ಋಗ್‌ಸಂಹಿತಾ) ಎಂಬ ಶ್ರುತಿಯು ಪ್ರಮಾಣ. "ದ್ವಿರೂಪಾವಂಶಕೌ ತಸ್ಯ ಪರಸ್ಯ ಹರೇರ್ವಿಭೋಃ । ಪ್ರತಿಬಿಂಬಾಂಶಕಶ್ಚಾಥ ಸ್ವರೂಪಾಂಶಕ ಏವ ಚ ॥ ಪ್ರತಿ ಬಿಂಬೇಷು ಅಲ್ಪಸಾಮ್ಯಂ ಸ್ವರೂಪಾಣೀತರಾಣಿ ತು ॥" ಎಂಬುದಾಗಿ ವರಾಹಪುರಾಣದ ವಾಕ್ಯವು ಎರಡು ರೀತಿಯ ಅಂಶಗಳನ್ನು ಪುರಸ್ಕರಿಸುತ್ತದೆ. ಜೀವರು ಪರಮಾತ್ಮನೊಂದಿಗೆ ಅಲ್ಪ ಸಾದೃಶ್ಯವನ್ನು ಹೊಂದಿರುವ ಪ್ರಯುಕ್ತ ಪ್ರತಿಬಿಂಬರು ಎನಿಸಿಕೊಳ್ಳುತ್ತಾರೆ. ಆದ್ದರಿಂದ ಜೀವರು ಭಿನ್ನಾಂಶರು. ಜೀವರ ಸ್ವರೂಪ ವೈಚಿತ್ರ್ಯದಿಂದಾಗಿ ಪ್ರತಿಬಿಂಬ ವೈಚಿತ್ರ್ಯವು ಕೂಡುತ್ತದೆ.

**ಅಣುಭಾಷ್ಯ :** "ತದಾಭಾಸೋ"

'ಜೀವಃ ತದ್ವಶಗಃ ಸದಾ ತದಾಭಾಸೋ" ಎಂದು ಓದಿಕೊಳ್ಳಬೇಕು. ಇದರ ಅರ್ಥವನ್ನು ಹಿಂದಿನ ಅಧಿಕರಣದಲ್ಲಿಯೇ ಹೇಳಲಾಗಿದೆ.

ಹಿಂದಿನ ಅಧಿಕರಣದ "ಪ್ರಕಾಶಾದಿವನ್ನೈವಂ ಪರಃ" ಇತ್ಯಾದಿ ಸೂತ್ರಗಳ ತಾತ್ಪರ್ಯವನ್ನು ಹೇಳುತ್ತಾರೆ –

"ಹರಿಃ ಸರ್ವರೂಪೇಷ್ವಪಿ ಸಮಸ್ಸದಾ"

ಶ್ರೀಹರಿಯ ಸ್ವರೂಪಾಂಶಗಳಾದ ಮತ್ಸ್ಯಾದಿ ರೂಪಗಳು ಸೂರ್ಯನ ಪ್ರತಿಬಿಂಬಗಳು ಸ್ಥಾನಾದಿ ಭೇದದಿಂದ ವೈಚಿತ್ರ್ಯವನ್ನು ಹೊಂದಿರುವಂತೆ ವೈಲಕ್ಷಣ್ಯದಿಂದ ಕೂಡಿದ ಪ್ರತಿಬಿಂಬಾಶಗಳಲ್ಲ, ಶ್ರೀಹರಿಯೂ ಯಾವಾಗಲೂ ಎಲ್ಲ ರೂಪಗಳಲ್ಲಿಯೂ ಏಕ ಪ್ರಕಾರನಾಗಿ ಅಂದರೆ ವಿಕಾರವಿಲ್ಲದವನಾಗಿ ಇರುವನು. 'ಅಪಿ' ಶಬ್ದದಿಂದ ಜ್ಞಾನಾನಂದಾದಿ ಗುಣಗಳನ್ನು ಗ್ರಹಿಸಬೇಕು.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಎರಡನೆಯ ಅಧ್ಯಾಯದ ಮೂರನೆಯ ಪಾದವು ಮುಕ್ತಾಯವಾಯಿತು ॥**

# ಎರಡನೆಯ ಅಧ್ಯಾಯದ ನಾಲ್ಕನೆಯ ಪಾದ

ಈ ಪಾದದಲ್ಲಿ ಶ್ರುತಿಗಳಿಗೆ ಯುಕ್ತಸಹಿತ ಶ್ರುತಿವಿರೋಧವನ್ನು ಪರಿಹರಿಸುತ್ತಾರೆ.

## ಅಧಿಕರಣ – ೧

## ॥ ಪ್ರಾಣೋತ್ಪತ್ತಿ ಅಧಿಕರಣ ॥

## ॥ ಓಂ ತಥಾ ಪ್ರಾಣಾಃ ಓಂ ॥

ಈ ಅಧಿಕರಣದಲ್ಲಿ ಇಂದ್ರಿಯಗಳಿಗೆ ಪರಮಾತ್ಮನ ದೆಶೆಯಿಂದ ಸ್ಥೂಲರೂಪದಿಂದ ಉತ್ಪತ್ತಿಮತ್ತ್ವವನ್ನು ನಿರೂಪಿಸುತ್ತಾರೆ.

''ಪ್ರಾಣಾ ಏವಾನಾದಯಃ ಪ್ರಾಣಾ ಏವ ನಿತ್ಯಾಃ'' ಇತಿ ಕಾಷಾಯಣಶ್ರುತಿಃ ॥ ನೋಪಾದಾನಂ ಹೀಂದ್ರಿಯಾಣಾಂ ಅತೋಽನುತ್ಪತ್ತಿ ರಿಷ್ಯತೇ । ಉಪಾದಾನಕೃತಾ ಸೃಷ್ಟಿಃ ಸರ್ವಲೋಕೇಷು ದೃಶ್ಯತೇ ॥ ಇತಿ ಸ್ಮೃತಿಃ ॥ (ಭವಿಷ್ಯತ್‌ಪರ್ವ)

''ಇಂದ್ರಿಯಗಳು ಅನಾದಿ ನಿತ್ಯವೇ ಆಗಿವೆ'' ಎಂದು ಕಾಷಾಯಣ ಶ್ರುತಿ ಹೇಳುತ್ತದೆ. ''ಇಂದ್ರಿಯಗಳಿಗೆ ಉಪಾದಾನ ಕಾರಣತ್ವವಿಲ್ಲ. ಲೋಕದಲ್ಲಿ ಉಪಾದಾನದಿಂದಲೇ ಎಲ್ಲ ಸೃಷ್ಟಿಯು. ಆದ್ದರಿಂದ ಇಂದ್ರಿಯಗಳಿಗೆ ಸೃಷ್ಟಿಯಿಲ್ಲ'' ಎಂದು ಭವಿಷ್ಯತ್ ಪರ್ವ ವಚನವಿದೆ. ಹೀಗೆ ಶ್ರುತಿ ಸ್ಮೃತಿಗಳಿರುವುದರಿಂದ ಇಂದ್ರಿಯಗಳಿಗೆ ಉತ್ಪತ್ತಿಮತ್ತ್ವವಿಲ್ಲ ಎಂದು ಹೇಳುವುದು ಸರಿಯಲ್ಲ. ಮೇಲೆ ಉಲ್ಲೇಖಿಸಿರುವ ಶ್ರುತಿ, ಸ್ಮೃತಿಗಳು ಇಂದ್ರಿಯಗಳಿಗೆ ಪ್ರತಿಪಾದಿಸುವ ನಿತ್ಯತ್ವವು ಅನಾದಿ ಸೂಕ್ಷ್ಮೇಂದ್ರಿಯ ಪರತ್ವವಾಗಿರುವುದರಿಂದ ಗೌಣಾರ್ಥವುಳ್ಳದ್ದಾಗಿವೆ. ಇದಕ್ಕೆ ಪ್ರಮಾಣವಿಲ್ಲದಿಲ್ಲ.

''ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ ಹೀಂದ್ರಿಯಾಣಿ ತು ಸರ್ವಶಃ ।''
ತೇಷಾಂ ಭೂತೈರುಪಚಯಃ ಸೃಷ್ಟಿ ಕಾಲೇ ವಿಧೀಯತೇ ॥''

ಸೂಕ್ಷ್ಮರೂಪದಿಂದ ನಿತ್ಯವೇ ಆದ ಇಂದ್ರಿಯಗಳು ಸೃಷ್ಟಿ ಕಾಲದಲ್ಲಿ ಭೂತ

ಗಳೊಂದಿಗೆ ಉಪಚಯ ಹೊಂದುವ ಮೂಲಕ ಸ್ಥೂಲರೂಪದಿಂದ ಉತ್ಪತ್ತಿಯಾಗುತ್ತವೆ'' ಎಂದು ಭವಿಷ್ಯತ್ ಪರ್ವದಲ್ಲಿಯೇ ಉತ್ಪತ್ತಿ ಮತ್ತ್ವವನ್ನು ಸಮರ್ಥಿಸುವ ವಾಕ್ಯವಿದೆ.

ಇಂದ್ರಿಯಗಳಿಗೆ ಉತ್ಪತ್ತಿಮತ್ತ್ವವಿದೆ ಎಂಬುದನ್ನು ''ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ'' ಎಂಬ ಶ್ರುತಿಯೂ (ಮಾಂಡೂಕೋಪನಿಷತ್) ಇದನ್ನು ಸಮರ್ಥಿಸುತ್ತದೆ. ಗೌಣರೂಪದಿಂದ ಉತ್ಪತ್ತಿಯನ್ನು ಒಪ್ಪದಿದ್ದರೆ ಪರಮಮುಖ್ಯವೃತ್ತಿಯಿಂದ ನಿತ್ಯತ್ವವುಳ್ಳ ಪರಮಾತ್ಮನೊಂದಿಗೆ ಸಾಮ್ಯವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಇಂದ್ರಿಯಗಳಿಗೆ ಉತ್ಪತ್ತಿಯುಂಟು ಎಂಬುದೇ ಸಿದ್ಧಾಂತವು.

## ಅಧಿಕರಣ – ೨

## ॥ ತತ್ ಪ್ರಾಗಧಿಕರಣ ॥

## ॥ ಓಂ ತತ್ಪ್ರಾಕ್ ಶ್ರುತೇಶ್ಚ ಓಂ ॥

ಈ ಅಧಿಕರಣದಲ್ಲಿ ಮನಸ್ಸಿಗೆ ಸ್ಥೂಲ ರೂಪದಿಂದ ಉತ್ಪತ್ತಿಮತ್ತ್ವವನ್ನು ನಿರೂಪಿಸುತ್ತಾರೆ.

ಮನಸ್ಸೂ ಉತ್ಪತ್ತಿಯುಳ್ಳದ್ದೇ ಆಗಿದೆ. ''ಮನಸ್ಸರ್ವೇಂದ್ರಿಯಾಣಿ ಚ'' ಎಂದು ಹಿಂದೆ ಉಲ್ಲೇಖಿಸಿದ ಶ್ರುತಿಯಿಂದಲೇ ಇದು ಸಮರ್ಥಿತವಾಗುತ್ತದೆ. 'ಚ' ಶಬ್ದದಿಂದ ಸ್ಮೃತಿಯನ್ನೂ ಗ್ರಹಿಸಬೇಕು. ಹಾಗಾದರೆ ''ದ್ವಿಧಾಹ್ಯೇವ ಇಂದ್ರಿಯಾಣಿ ನಿತ್ಯಾನಿ ಅನಿತ್ಯಾನಿ ಚ । ತತ್ರ ನಿತ್ಯಂ ಮನೋಽನಾದಿತ್ವಾತ್ ॥'' ಎಂಬ ಶ್ರುತಿಯ ವಿರೋಧ ಬರುತ್ತದೆ ಎಂದು ಹೇಳುವುದು ಸರಿಯಲ್ಲ. ಈ ಶ್ರುತಿಯು ಮನಸ್ಸಿಗೆ ವಿಶಿಷ್ಟತ್ವವನ್ನು ಹೇಳುತ್ತದೆ. ಬೇರೆ ಇಂದ್ರಿಯಗಳಿಗೆ ಹೋಲಿಸಿದರೆ ಮನಸ್ಸು ಅಲ್ಪ ಉಪಚಯವನ್ನು ಹೊಂದುವುದು. ಈ ಅರ್ಥದಲ್ಲಿ ಮನಸ್ಸು ಅನಾದಿ, ನಿತ್ಯ ಎಂದು ಹೇಳಿದೆ. ಸ್ಥೂಲರೂಪದಿಂದ ಮನಸ್ಸಿಗೂ ಉತ್ಪತ್ತಿವುಂಟು ಎಂದೇ ತಾತ್ಪರ್ಯ. ಇದಕ್ಕೂ ''ಮನಸ್ಸರ್ವೇಂದ್ರಿಯಾಣಿ ಚ'' ಎಂಬ ಶ್ರುತಿಯೇ ಪ್ರಮಾಣ.

## ಅಧಿಕರಣ – ೩

## ॥ ತತ್ಪೂರ್ವಕತ್ವಾಧಿಕರಣ ॥

## ॥ ಓಂ ತತ್ಪೂರ್ವಕತ್ವಾತ್ ವಾಚಃ ಓಂ ॥

ಈ ಅಧಿಕರಣದಲ್ಲಿ ವಾಗಿಂದ್ರಿಯಕ್ಕೆ ಸ್ಥೂಲ ರೂಪದಿಂದ ಉತ್ಪತ್ತಿಮತ್ತ್ವವನ್ನು ನಿರೂಪಿಸುತ್ತಾರೆ.

ವಾಗಿಂದ್ರಿಯಕ್ಕೂ ಉತ್ಪತ್ತಿವುಂಟು. ಹಿಂದಿನ ಅಧಿಕರಣದಲ್ಲಿ ಮನಸ್ಸಿಗೆ ಉತ್ಪತ್ತಿಯನ್ನು ಸಮರ್ಥಿಸಲಾಗಿದೆ. ''ತಸ್ಮಾತ್ ಮನ ಏವ ಪೂರ್ವ ರೂಪಂ ವಾಗುತ್ತರ ರೂಪಮ್'' ಎಂಬ ಶೃತಿಯು ಮನಸ್ಸಿನಿಂದ ವಾಕ್ ಉತ್ಪತ್ತಿಯು ಎಂಬುದನ್ನು ಸಮರ್ಥಿಸುತ್ತದೆ. ''ವಾಗ್ವಾ ವ ನಿತ್ಯಾ, ನ ಹ್ಯೇಷೋತ್ಪದ್ಯತೇ'' ಎಂಬ ಶ್ರುತಿಯು ವೇದ ನಿತ್ಯತ್ವಕ್ಕೆ ಸಂಬಂಧಿಸಿದ್ದು. ಆದ್ದರಿಂದ ವಾಗಿಂದ್ರಿಯಕ್ಕೆ ಇತರ ಇಂದ್ರಿಯಗಳಂತೆಯೇ ಸ್ಥೂಲ ರೂಪದಿಂದ ಉತ್ಪತ್ತಿಯನ್ನು ತಿಳಿಯತಕ್ಕದ್ದು.

**ಅಣುಭಾಷ್ಯ**

ಮೇಲಿನ ಮೂರು ಅಧಿಕರಣಗಳಿಗೂ ಸಮಾನ ನ್ಯಾಯವಿರುವುದರಿಂದ ಅವುಗಳ ತಾತ್ಪರ್ಯವನ್ನು ಒಟ್ಟಿಗೇ ಹೇಳುತ್ತಾರೆ –

''ಮುಖ್ಯಪ್ರಾಣಶ್ಚೇಂದ್ರಿಯಾಣಿ ದೇಹಶ್ಚೈವ ತದುದ್ಭವಃ''

ಎಲ್ಲ ಇಂದ್ರಿಯಗಳಿಗೆ ಪ್ರೇರಕತ್ವರೂಪದಿಂದ ಮುಖ್ಯ ಪ್ರಾಣನಿಗೆ ಪ್ರಾಧಾನ್ಯತೆ ಇರುವ ಪ್ರಯುಕ್ತ ಮೊದಲಿಗೆ ಮುಖ್ಯಪ್ರಾಣನನ್ನು ಹೇಳಿದ್ದಾರೆ. ಮುಖ್ಯಪ್ರಾಣನೇ ಆದಿಯಾಗಿ ಎಲ್ಲ ಇಂದ್ರಿಯಗಳಿಗೆ ಪರಮಾತ್ಮನಿಂದಲೇ ಸ್ಥೂಲರೂಪ ದೇಹಪ್ರಾಪ್ತಿಯು ಎಂದರ್ಥ.

## ಅಧಿಕರಣ – ೪

## ॥ ಸಪ್ತಗತ್ಯಧಿಕರಣ ॥

## ॥ ಓಂ ಸಪ್ತಗತೇರ್ವಿಶೇಷಿತತ್ವಾಚ್ಚ ಓಂ ॥

ಜ್ಞಾನಕ್ಕೆ ಸಾಧನವಾದ ಇಂದ್ರಿಯಗಳು ಏಳು ಸಂಖ್ಯಾಕವು ಎಂಬುದಾಗಿ ವಿಶೇಷಿತ್ವ ವಚನವನ್ನು ಆಧರಿಸಿ ಹೇಳಲಾಗಿದೆ. ಆದರೆ ವಾಸ್ತವವಾಗಿರುವ ಇಂದ್ರಿಯಗಳು ದ್ವಾದಶ ಸಂಖ್ಯಾಕವೇ ಆಗಿವೆ.

''ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್'' ಎಂಬುದಾಗಿ ಒಂದು ಶ್ರುತಿಯಲ್ಲಿ ಹೇಳಿದರೆ,''ದ್ವಾದಶ ವಾ ಏತೇ ಪ್ರಾಣಾಃ'' ಎಂಬುದಾಗಿ ಇನ್ನೊಂದು ಶ್ರುತಿಯು ಪ್ರಖ್ಯಾತವಾಗಿದೆ. ಆದರೆ ಇಂದ್ರಿಯಾಭಿಮಾನಿಗಳು ಏಳು ಸಂಖ್ಯೆಯಲ್ಲಿರುವುದರಿಂದ ಸಪ್ತ ಇಂದ್ರಿಯಗಳು ಎಂದು ಹೇಳುವ ಶ್ರುತಿಗೆ ಬಾಧಕವಿಲ್ಲ, ಆದ್ದರಿಂದ ದ್ವಾದಶ ಇಂದ್ರಿಯಗಳು ಎಂಬುದು ಸರಿಯಲ್ಲ. ಹೀಗೆ ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಸಪ್ತ ಸಂಖ್ಯಾಕತ್ವ ಶ್ರುತಿಗೂ ದ್ವಾದಶ ಸಂಖ್ಯಾಕತ್ವ ಶ್ರುತಿಗೂ ವಿರೋಧವಿಲ್ಲ. ಇಂದ್ರಿಯಗಳು ಹನ್ನೆರಡು ಎಂಬುದೇ ಸರಿಯಾದದ್ದು. ಈ ಹನ್ನೆರಡರಲ್ಲಿ ಏಳು ಇಂದ್ರಿಯಗಳೂ ಸೇರಿಕೊಳ್ಳುತ್ತವೆ. ಸಪ್ತತ್ವವನ್ನು ಹೇಳುವ ಶ್ರುತಿಯು ವ್ಯರ್ಥವಲ್ಲ. ಶ್ರೋತ್ರ, ಚಕ್ಷು, ಸ್ಪರ್ಶ, ರಸನಾ, ಘ್ರಾಣ, ಮನಸ್ಸು ಬುದ್ಧಿಗಳು ಜ್ಞಾನಸಾಧನ ಇಂದ್ರಿಯಗಳು. ಈ ವಿವಕ್ಷೆಯಿಂದ ಸಪ್ತತ್ವವನ್ನು ಹೇಳುವ ಶ್ರುತಿಯೂ ಪ್ರಮಾಣವೇ.

ಸಪ್ತ ಪ್ರಾಣಾಸ್ತ್ವವಗತೇಃ ಪಂಚ ಪ್ರಾಣಾಶ್ಚ ಕರ್ಮಣಃ ।
ಏವಂ ಪ್ರಾಣದ್ವಾದಶಕಂ ಶರೀರೇ ನಿತ್ಯಸಂಸ್ಥಿತಮ್ ॥

ಹೀಗೆ ಭವಿಷ್ಯತ್ ಪರ್ವ ವಚನವಿರುವುದರಿಂದ ಇಂದ್ರಿಯಗಳು ಹನ್ನೆರಡು ಎಂಬುದೇ ಯುಕ್ತವು. ಮನಸ್ಸು ಬುದ್ಧಿ ಸೇರಿ ಏಳು ಜ್ಞಾನೇಂದ್ರಿಯಗಳು ಹಾಗೂ ಐದು ಕರ್ಮೇಂದ್ರಿಯಗಳು ಎಂಬ ಅರ್ಥದಲ್ಲಿ ಒಟ್ಟು 12 ಇಂದ್ರಿಯಗಳು ಎಂಬುದೇ ಸಿದ್ಧಾಂತ.

**ಅಣುಭಾಷ್ಯ** : 'ಇಂದ್ರಿಯಾಣಿ'

ಹನ್ನೆರಡೇ ಇಂದ್ರಿಯಗಳು ಎಂಬುದಾಗಿ ತಾತ್ಪರ್ಯ.

## ಅಧಿಕರಣ – ೫

## ॥ ಅಣ್ವಧಿಕರಣ ॥

## ॥ ಓಂ ಅಣವಶ್ಚ ಓಂ ॥

ಇಂದ್ರಿಯಗಳು ಅಣುಗಳೇ ಆಗಿವೆ. ಶ್ರುತಿಗಳು ಹಾಗೆಯೇ ಹೇಳುತ್ತವೆ ಎಂದು 'ಚ' ಶಬ್ದದಿಂದ ಸೂಚಿಸಲಾಗಿದೆ. ''ಅಣುಭಿಃ ಪಶ್ಯತಿ ಅಣುಭಿಃ ಶೃಣೋತಿ ಪ್ರಾಣಾ ವಾಽಣವಃ'' ಹೀಗೆ ಕೌಂಡಿನ್ಯ ಶ್ರುತಿಯು ಹೇಳುತ್ತದೆ. ವ್ಯಾಪ್ತತ್ವ ಹೇಳುವ ಶ್ರುತಿಯಿಂದ ಇದಕ್ಕೆ ವಿರೋಧವಿಲ್ಲ. 'ತದ್ಯಥಾ ಹಿ ಅಣುನಶ್ಚಕ್ಷುಸ ಪ್ರಕಾಶೋ ವ್ಯಾತತ' ಎಂಬುದಾಗಿ ಶಾಂಡಿಲ್ಯ ಶ್ರುತಿಯು ಚಕ್ಷು ಇಂದ್ರಿಯವು ಅಣುವಾದರೂ ಅದು ಪ್ರಕಾಶರೂಪದಿಂದ ವ್ಯಾಪ್ತವು ಎಂದು ನಿರೂಪಿಸುತ್ತದೆ. ಆದ್ದರಿಂದ ಇಂದ್ರಿಯಗಳು ಅಣುವೇ ಆಗಿವೆ ಎಂದು ಸಿದ್ಧಾಂತ.

**ಅಣುಭಾಷ್ಯ** : 'ಇಂದ್ರಿಯಾಣಿ'

ಇಲ್ಲಿ 'ಅಣೂನಿ' ಎಂದು ಸೇರಿಸಿಕೊಳ್ಳಬೇಕು. ಇಂದ್ರಿಯಗಳು ಅಣು ಪರಿಮಾಣವುಳ್ಳವೇ ಆಗಿವೆ ಎಂದರ್ಥ.

## ಅಧಿಕರಣ – ೬

## ॥ ಶ್ರೇಷ್ಠಾಧಿಕರಣ ॥

## ॥ ಓಂ ಶ್ರೇಷ್ಠಶ್ಚ ಓಂ ॥

ಇಂದ್ರಿಯ ಶ್ರೇಷ್ಠನಾದ ಮುಖ್ಯ ಪ್ರಾಣನೂ ಕೂಡ ಇತರ ಇಂದ್ರಿಯ ಗಳಂತೆಯೇ ಪರನವಾತ್ಮನಿಂದಲೇ ಹುಟ್ಟುತ್ತಾನೆ. ''ಸೌಕ್ಷ್ಮ್ಯೇಣ ಹ ವಾ ಏಷೋಽವತಿಷ್ಠತೇ ಸ್ಥೂಲತ್ವೇನೋದೇತಿ'' ಎಂಬ ಶ್ರುತಿಯು ಇದಕ್ಕೆ ಪ್ರಮಾಣ ವಾಗಿದೆ. ಇಲ್ಲಿ ಸೂಕ್ಷ್ಮ ರೂಪದಿಂದ ಇರುವ ಮುಖ್ಯಪ್ರಾಣನು ಸ್ಥೂಲರೂಪವನ್ನು ಹೊಂದುವುದೇ ಉತ್ಪತ್ತಿಯು ಎಂದು ನಿರೂಪಿಸಲ್ಪಟ್ಟಿದೆ. ಆದ್ದರಿಂದ ''ನೈಷ ಪ್ರಾಣ ಉದೇತಿ ನಾಸ್ತಮೇತಿ'' ಎಂಬ ಶ್ರುತಿಯಿಂದ ವಿರೋಧ ಬರುವುದಿಲ್ಲ.

**ಅಣುಭಾಷ್ಯ :** ''ಮುಖ್ಯಪ್ರಾಣಃ ತದುದ್ಭವಃ''

''ಮುಖ್ಯಪ್ರಾಣಾದಿದಂ ಜಗತ್ । ಮುಖ್ಯಪ್ರಾಣಃ ಪರಸ್ಮಾಚ್ಚ ನ ಪರಃ ಕಾರಣಾನ್ವಿತ'' ಇತ್ಯಾದಿ ಸ್ಮೃತಿ ಸಿದ್ಧವಾದ ಶ್ರೀಹರಿಯಿಂದ ಮುಖ್ಯಪ್ರಾಣನ ಜನ್ಮ ಎಂಬುದನ್ನು ಸೂಚಿಸಲು ಇಲ್ಲಿ ಪ್ರಾಣ ಎಂದಷ್ಟೇ ಹೇಳುವ ಬದಲು ಮುಖ್ಯಪ್ರಾಣ ಎಂದು ಹೇಳಿದ್ದಾರೆ.

## ಅಧಿಕರಣ – ೭

## ।। ಚಕ್ಷುರಾದ್ಯಧಿಕರಣ ।।

### ।। ಓಂ ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ಓಂ ।।

ಚಕ್ಷುರಾದಿಗಳಂತೆ ಮುಖ್ಯ ಪ್ರಾಣನೂ ಕೂಡ ಭಗವಂತನ ಅಧೀನನೇ ಆಗಿರುವನು. ಏಕೆಂದರೆ, ''ಸರ್ವಂ ಹ್ಯೇವೈತತ್ ಪರಮೇಽವತಿಷ್ಠತೇ....ಸಹ್ಯೇಕ ಏವೈತಾನ್ನಯತ್ಯುನ್ನಯತಿ ವಶೀಕರೋತಿ'' ಎಂದು ಗೌಪವನ ಶ್ರುತಿಯಲ್ಲಿ ಹೇಳಿದೆ.

''ಪ್ರಾಣಶ್ಚ ಪ್ರಾಣಾಶ್ಚ ಪ್ರಾಣನಶ್ಚ'' ಎಂಬ ಶ್ರುತಿಯಲ್ಲಿ ಚಕ್ಷುರಾದಿ ಇಂದ್ರಿಯಗಳ ಜೊತೆಯಲ್ಲಿಯೇ ಮುಖ್ಯಪ್ರಾಣನಿಗೆ ಪರಮಾತ್ಮನ ವಶತ್ವ ರೂಪದಿಂದ ಶಾಸನ ಮಾಡಲ್ಪಟ್ಟಿದೆ.

**ಅಣುಭಾಷ್ಯ :** ''ಮುಖ್ಯಪ್ರಾಣವಶೇ ಸರ್ವಂ ಸ ವಿಷ್ಣೋರ್ವಶಗಃ ಸದಾ''

'ಸರ್ವಂ' ಎಂದರೆ ರುದ್ರನೇ ಆದಿಯಾಗಿ ಸಕಲ ಜಗತ್ತು ಎಂದರ್ಥ. ''ಸಃ ವಿಷ್ಣೋಃ ವಶಗಃ'' ಎಂದು ಹೇಳಿದ್ದರೆ ಸಾಕಾಗಿತ್ತು. ಹಾಗಿದ್ದರೂ ''ಮುಖ್ಯಪ್ರಾಣ ವಶೇ ಸರ್ವಂ'' ಎಂದು ಹೇಳಲು ಕಾರಣವಿದೆ. ಮುಖ್ಯಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುವ ಶ್ರುತಿಗಳಿವೆ. ಆ ಮುಖ್ಯಪ್ರಾಣನಿಗೆ ಇರುವುದು ಗೌಣವಾದ ಸ್ವಾತಂತ್ರ್ಯ ಮಾತ್ರ, ವಿಷ್ಣುವಿಗೆ ಮುಖ್ಯವಾದ ಸ್ವಾತಂತ್ರ್ಯ ಎಂದು ಸೂಚಿಸಲು ಹೀಗೆ ಹೇಳಿದ್ದಾರೆ.

## ಅಧಿಕರಣ – ೮

## ।। ಪಂಚವೃತ್ತ್ಯಧಿಕರಣ ।।

## ।। ಓಂ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ ।।

ಮುಖ್ಯಪ್ರಾಣನ ದಾಸರಾದ ಪ್ರಾಣಾದಿ ಪಂಚರೂಪಗಳು ಮತ್ತು ಪಂಚ ಸ್ವರೂಪಭೂತ ರೂಪಗಳು – ಹೀಗೆ ಎರಡು ಬಗೆಯಲ್ಲಿ ಪಂಚಪ್ರಾಣಗಳಿವೆ ಎಂಬುದನ್ನು ನಿರೂಪಿಸುತ್ತಾರೆ.

ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನಾ ಎಂಬುದಾಗಿ ಮನಸ್ಸಿನ ಪಂಚವಿಧಗಳು ದಾಸಭೂತ ಹಾಗೂ ಸ್ವರೂಪಭೂತಗಳು ಎಂಬುದಾಗಿ ಎರಡು ವರ್ಗಗಳಾಗಿ ಶ್ರುತಿಯಲ್ಲಿ ನಿರೂಪಿತವಾಗಿವೆ. ಹಾಗೆಯೇ ಮುಖ್ಯಪ್ರಾಣನೂ ಕೂಡ ಎರಡು ಪ್ರಕಾರದಲ್ಲಿ ಪಂಚವಿಧಗಳಿಂದ ಕೂಡಿರುವನು. "ಪ್ರಾಣೋ ವಾ ವ ಪಂಚವೃತ್ತಿಃ ಪ್ರಾಣೋಽಪಾನೋ ವ್ಯಾನೋ ದಾನಸ್ಸಮಾನ ಇತಿ। ತೇಭ್ಯೋ ವಾ ಏತೇಭ್ಯಃ ಪಂಚದಾಸಾಃ ಪ್ರಜಾಯಂತೇ। ಪ್ರಾಣಾದ್ವಾವ ಪ್ರಾಣೋಽಪಾನಾದಪಾನೋ ವ್ಯಾನಾದ್ವ್ಯಾನ, ಉದಾನಾದ್ ಉದಾನಃ, ಸಮಾನದೇವ ಸಮಾನ" ಹೀಗೆ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

ಇಲ್ಲಿ ಪ್ರಾಣಾದಿಗಳು ಮುಖ್ಯ ಪ್ರಾಣನ ದಾಸಭೂತರೇ ಆಗಿರುವರು. ಏಕೆಂದರೆ "ಸರ್ವೇ ವಾ ಏತೇ ಮುಖ್ಯಪ್ರಾಣದಾಸಾಃ" ಎಂಬುದಾಗಿ ಶ್ರುತಿಯಿದೆ. ಇದಕ್ಕೆ ಸಂವಾದಿಯಾಗಿ "ಪ್ರಾಣಾಪಾನಾದಯಃ ಸರ್ವೇ ಮುಖ್ಯದಾಸಾಃ ಯತೋಽನಿಶಂ। ಅತಸ್ತದಾಜ್ಞಯಾ ನಿತ್ಯಂ ಸ್ವಾನಿ ಕರ್ಮಾಣಿ ಕುರ್ವತೇ ।।" ಎಂಬುದಾಗಿ ವಾಯುಪ್ರೋಕ್ತವಾದ ವಚನವಿದೆ. ಹೀಗೆ ಒಂದು ಪೂರ್ವಪಕ್ಷ. ಪ್ರಾಣಾದಿಗಳು ಮುಖ್ಯಪ್ರಾಣನ ಸ್ವರೂಪಭೂತಗಳೇ ಆಗಿವೆ ಎಂಬುದಾಗಿ ಮತ್ತೊಂದು ಪೂರ್ವಪಕ್ಷ. ಇದಕ್ಕೆ ಪ್ರಮಾಣವಾಗಿ ಅವರು ಗೌಪವನ ಶ್ರುತಿಯನ್ನು ಉಲ್ಲೇಖಿಸುತ್ತಾರೆ.

"ಮುಖ್ಯಸ್ಯೈವ ಸ್ವರೂಪಾಣಿ ಪ್ರಾಣಾದ್ಯಾಃ ಪಂಚ ವಾಯುವಃ।
ಸ ಏವ ಪ್ರಾಣಿನಾಂ ದೇಹೇ ಪಂಚಧಾ ವರ್ತತೇಽನಿಶಮ್ ।।"

ಹೀಗೆ ಎರಡು ಶ್ರುತಿಗಳಿಗೂ ಸಮಬಲರೂಪವಾದ ವಿರುದ್ಧೋಕ್ತಿಯಿರು

ವುದರಿಂದ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ ಎಂದು ಹೇಳುವುದು ಸರಿಯಲ್ಲ. ಎರಡು ಶ್ರುತಿಗಳೂ ಪ್ರಮಾಣವೇ. ಅವುಗಳಿಗೆ ಪರಸ್ಪರ ವಿರೋಧವಿಲ್ಲ. ಏಕೆಂದರೆ

''ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ ।
ತದ್ದಾಸಾಃ ಪಂಚ ಚಾನ್ಯೋಽಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ ॥''

ಎಂಬ ಶ್ರುತಿಯಲ್ಲಿ ಮೇಲಿನ ಎರಡು ಶ್ರುತಿ ವಾಕ್ಯಗಳನ್ನು ಸಮರ್ಥಿಸಿ ಸಮನ್ವಯ ಮಾಡಲಾಗಿದೆ.

**ಅಣುಭಾಷ್ಯ** : ''ಮುಖ್ಯ ಪ್ರಾಣಶ್ಚ''

'ಮುಖ್ಯಪ್ರಾಣ' ಎನ್ನುವುದರಿಂದ ಪ್ರಾಣನ ಮುಖ್ಯವಾದ ಅಂದರೆ ಪ್ರಧಾನವಾದ ಸ್ವರೂಪಭೂತವಾದ ಪ್ರಾಣಾಪಾನಾದಿ ಪಂಚರೂಪಗಳನ್ನು ತೆಗೆದುಕೊಳ್ಳಬೇಕು. 'ಚ' ಎಂಬ ಶಬ್ದದಿಂದ ಮುಖ್ಯಪ್ರಾಣನ ದಾಸಭೂತರಾದ ಐದು ರೂಪಗಳನ್ನು ಹೇಳಿದ್ದಾರೆ. ಎರಡು ಪಂಚರೂಪಗಳೂ ಪ್ರಧಾನವೇ ಆಗಿರುವುದರಿಂದ 'ಮುಖ್ಯಪ್ರಾಣ' ಎನ್ನುವ ಶಬ್ದದಿಂದಲೇ ಎರಡು ವರ್ಗವೂ ಹೇಳಲ್ಪಡುತ್ತವೆ.

## ಅಧಿಕರಣ – ೬
## ॥ಅಣ್ವಧಿಕರಣ॥
## ॥ಓಂ ಅಣುಶ್ಚ ಓಂ॥

ಮುಖ್ಯಪ್ರಾಣನು ಶರೀರದೊಳಗಿರುವ ಪ್ರಾಣರೂಪದಿಂದ ಅಣುವೂ, ಹೊರಗಡೆಯಲ್ಲಿ ವಾಯುರೂಪದಿಂದ ಮಹಾನ್ ಆಗಿಯೂ ಇರುವನು.

''ಸ ವಾ ಏಷ ಪ್ರಾಣೋಽಣುಃ'' ಎಂಬ ಶ್ರುತಿಯಿಂದ ಮುಖ್ಯಪ್ರಾಣನು ಅಣುವೇ ಎಂದು ತಿಳಿಯುತ್ತದೆ. ಇದರಿಂದ ವ್ಯಾಪ್ತಿ ಶ್ರುತಿಗೆ ವಿರೋಧವಿಲ್ಲ. ಏಕೆಂದರೆ ''ಅಂತರ್ವಾ ಅಣುರ್ಬಹಿರ್ಮಹಾನ'' ಎಂಬುದಾಗಿ ವಿಶೇಷ ಶ್ರುತಿಯಿದೆ. ಆದ್ದರಿಂದ ಮುಖ್ಯಪ್ರಾಣನಿಗೆ ಅಣುತ್ವ, ವ್ಯಾಪ್ತತ್ವ ಎರಡು ಗುಣಗಳೂ ಕೂಡುತ್ತವೆ ಎಂದೇ ಸಿದ್ಧಾಂತ.

**ಅಣುಭಾಷ್ಯ :** ''ಮುಖ್ಯಪ್ರಾಣಶ್ಚ''

''ಮುಖ್ಯಪ್ರಾಣಃ ಅಣುಃ'' ಎಂದೂ 'ಚ' ಶಬ್ದದಿಂದ ''ವ್ಯಾಪ್ತಶ್ಚ'' ಎಂದೂ ತಿಳಿಯತಕ್ಕದ್ದು. ಎರಡು ವಿಧದಲ್ಲಿಯೂ ಶ್ರುತಿ ಪ್ರಾಮಾಣ್ಯವಿದೆ.

## ಅಧಿಕರಣ – ೧೦

## ॥ ಜ್ಯೋತಿರಾದ್ಯಧಿಕರಣ ॥

### ॥ ಓಂ ಜ್ಯೋತಿರಾದ್ಯಧಿಷ್ಠಾನಂತು ತದಾಮನನಾತ್ ಓಂ ॥

ಬಿಡಿಬಿಡಿಯಾಗಿಯೂ, ಒಟ್ಟಾಗಿಯೂ ಜ್ಯೋತಿರಾದಿಗಳಲ್ಲಿ ಇದ್ದು ಅವುಗಳನ್ನು ನಿಯಮನ ಮಾಡುವ ಆ ಬ್ರಹ್ಮನೇ ಜ್ಯೋತಿರೂಪ ಹಾಗೂ ತದಂಶ ಭೂತ ಚಕ್ಷುರಾದಿಗಳಿಗೆ ನಿಯಾಮಕನು. ''ಯಃ ಪ್ರಾಣೇ ತಿಷ್ಠನ್'' ಇತ್ಯಾದಿ ಶ್ರುತಿಗಳ ಸರಿಯಾದ ಮನನದಿಂದ ಈ ವಿಷಯವು ಸ್ಪಷ್ಟವಾಗುತ್ತದೆ. ಚಕ್ಷುರಾದಿ ಇಂದ್ರಿಯಗಳಿಗೆ ಬ್ರಹ್ಮಸಂಬಂಧಿತ್ವವನ್ನು ಈ ಅಧಿಕರಣದಲ್ಲಿ ಸಮರ್ಥಿಸಿದ್ದಾರೆ. ಇಂದ್ರಿಯಗಳಿಗೆ ಜೀವ ಸಂಬಂಧಿತ್ವವನ್ನು ಇಲ್ಲಿ ಅಲ್ಲಗಳೆದಿದ್ದಾರೆ. ಬ್ರಹ್ಮನೇ ಚಕ್ಷುರಾದಿ ಇಂದ್ರಿಯಗಳಿಂದ ದರ್ಶನಾದಿಗಳನ್ನು ಮಾಡಿಸುತ್ತಾನೆ. ಚಕ್ಷುರಾದಿ ಗಳಿಂದ ದರ್ಶನಾದಿಗಳಿಗೆ ಕಾರಣವಾದ ತೇಜಸ್ಸು ಇತ್ಯಾದಿ ಭೂತಗಳಿಗೆ ಹಾಗೂ ತದಭಿಮಾನಿ ದೇವತೆಗಳಿಗೆ ಬ್ರಹ್ಮನೇ ನಿಯಾಮಕನು ಎಂದು ತಾತ್ಪರ್ಯ.

''ಯಃ ಪ್ರಾಣೇ ತಿಷ್ಠನ್, ಯಶ್ಚಕ್ಷುಷಿ ತಿಷ್ಠನ್, ಯಸ್ತೇಜಸಿ ತಿಷ್ಠನ್'' ಇತ್ಯಾದಿ ಶ್ರುತಿಯು '' ಸರ್ವ ಪ್ರಾಣಿ ಪ್ರೇರಕನಾದ ಬ್ರಹ್ಮನನ್ನು ಕುರಿತೇ ಹೇಳುತ್ತದೆ.

**ಅಣುಭಾಷ್ಯ :** ''ಇಂದ್ರಿಯಾಣಿ ತದುದ್ಭವಾನಿ''

ಇಂದ್ರಿಯಗಳು ಸೂಕ್ಷ್ಮರೂಪದಿಂದ ನಿತ್ಯವಾಗಿದ್ದರೂ ಸೃಷ್ಟಿಕಾಲದಲ್ಲಿ ಭೂತೋಪಚಯರೂಪದಿಂದ ಈಶ್ವರನ ಅಧೀನವಾಗಿ ಉತ್ಪತ್ತಿಮತ್ವವನ್ನು ಪಡೆಯುತ್ತವೆ. ಆದ್ದರಿಂದ ಇಂದ್ರಿಯಗಳಿಗೆ ಬ್ರಹ್ಮ ಸಂಬಂಧಿತ್ವನನ್ನೇ ಮುಖ್ಯವಾಗಿ ತಿಳಿಯತಕ್ಕದ್ದು ಜೀವಸಂಬಂಧಿತ್ವವನ್ನಲ್ಲ.

## ಅಧಿಕರಣ – ೧೧

## ॥ ತ ಇಂದ್ರಿಯಾಧಿಕರಣ ॥

## ॥ ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ ॥

ಈ ಅಧಿಕರಣದಲ್ಲಿ ಮುಖ್ಯ ಪ್ರಾಣನಿಂದ ಇತರವಾದ ಹನ್ನೆರಡು ಪ್ರಾಣಗಳಿಗೆ ಇಂದ್ರಿಯತ್ವವನ್ನು ಸಮರ್ಥಿಸಿದ್ದಾರೆ. ಶ್ರೇಷ್ಠಾತ್ ಅಂದರೆ ಶ್ರೇಷ್ಠನೆಂದು ಕರೆಯಲ್ಪಡುವ ಮುಖ್ಯಪ್ರಾಣನಿಂದ ಇತರವಾದ ಪ್ರಾಣಗಳು ಚಕ್ಷುರಾದಿ ಇಂದ್ರಿಯಗಳು. ಮುಖ್ಯಪ್ರಾಣನಾದರೋ ಅನಿಂದ್ರಿಯನು. ಏಕೆಂದರೆ ಶ್ರುತಿಗಳು ಹಾಗೆಂದು ಪ್ರತಿಪಾದಿಸುತ್ತವೆ.

''ಪ್ರಾಣಾ ವಾ ಇಂದ್ರಿಯಾಣಿ ಪ್ರಾಣಾ ಹೀದಂ ದ್ರವಂತಿ'' ಎಂಬ ಶ್ರುತಿಯ ಪ್ರಕಾರ ಎಲ್ಲ ಪ್ರಾಣಗಳೂ ಇಂದ್ರಿಯಗಳೇ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಮುಖ್ಯ ಪ್ರಾಣನನ್ನು ಬಿಟ್ಟು ಉಳಿದ ಹನ್ನೆರಡು ಪ್ರಾಣಗಳೇ ಇಂದ್ರಿಯತ್ವವುಳ್ಳವು ಎಂಬುದಾಗಿ ವಿಶೇಷ ಶ್ರುತಿಯಿದೆ. ಸಾಮಾನ್ಯ ಶ್ರುತಿಗಿಂತ ಇದು ಪ್ರಬಲವು.

''ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತು
ಅನಿಂದ್ರಿಯಮ್ ।
ದ್ರವತಾಮಿಂದ್ರಿಯಾಣಾಂ ತು ನಿಯಂತಾ ಪ್ರಾಣ ಏಕರಾಟ್ ॥

ಎಂಬುದಾಗಿ ಪೌತ್ರಾಯಣ ಶ್ರುತಿಯು ಹೇಳುತ್ತದೆ.

**ಅಣುಭಾಷ್ಯ** : ''ಮುಖ್ಯಪ್ರಾಣಶ್ಚೇಂದ್ರಿಯಾಣಿ''

ಇಲ್ಲಿ ಮುಖ್ಯಪ್ರಾಣಶ್ಚ ಇಂದ್ರಿಯಾಣಿ ಎಂಬುದಾಗಿ ಮುಖ್ಯಪ್ರಾಣ ಮತ್ತು ಇತರ ಇಂದ್ರಿಯಗಳನ್ನು ಪ್ರತ್ಯೇಕವಾಗಿ ನಿರ್ದೇಶಿಸಿರುವುದರ ಮೂಲಕ ಮುಖ್ಯ ಪ್ರಾಣನಿಗೆ ಅನಿಂದ್ರಿಯತ್ವವನ್ನು, ಉಳಿದವುಗಳಿಗೆ ಇಂದ್ರಿಯತ್ವವನ್ನು ಸೂಚಿಸಲಾಗಿದೆ. ಹಾಗಿಲ್ಲದಿದ್ದರೆ ''ಸರ್ವೇಽಪಿ ಪ್ರಾಣಾಃ ತದುದ್ಭವಾಃ'' ಎಂದು ಹೇಳಬೇಕಿತ್ತು.

## ಅಧಿಕರಣ – ೧೨

## ॥ ಸಂಜ್ಞಾಧಿಕರಣ ॥

## ॥ ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್‌ಕುರ್ವತ ಉಪದೇಶಾತ್ ಓಂ ॥

ಸಂಜ್ಞಾಮೂರ್ತಿ ಅಂದರೆ ನಾಮಾತ್ಮಕ ಹಾಗೂ ರೂಪಾತ್ಮಕವಾದ ಪ್ರಪಂಚ. ಇದರ ಸೃಷ್ಟಿಯು ತ್ರಿಕರಣಗಳಿಂದ ಅಂದರೆ ತೇಜಸ್ಸು, ನೀರು ಹಾಗೂ ಪೃಥಿವೀಗಳ ಮಿಶ್ರಣದಿಂದ ಮಾಡಲ್ಪಟ್ಟಿದೆ. ವಿಷ್ಣುವಿನಿಂದಲೇ ಈ ಪ್ರಕಾರವಾಗಿ ಸೃಷ್ಟಿಯು ಮಾಡಲ್ಪಟ್ಟಿದೆ. ಹೀಗೆ ಶ್ರುತಿಯು ಹೇಳುತ್ತದೆ. ''ಸರ್ವಾಣಿ ರೂಪಾಣಿ ವಿಚಿಂತ್ಯ ಧೀರಃ ನಾಮಾನಿ ಕೃತ್ವಾಽಭಿವದನ್ಯದಾಸ್ತೇ'' ಎಂದು ತೈತ್ತಿರೀಯಾರಣ್ಯಕದಲ್ಲಿರುವ ಪುರುಷ ಸೂಕ್ತ ಮಂತ್ರದಲ್ಲಿ ಹೇಳಿದೆ.

''ಸರ್ವ ನಾಮ್ನಾಂ ಚ ರೂಪಾಣಾಂ ವ್ಯವಹಾರೇಷು ಕೇಶವಃ ।
ಏಕ ಏವ ಯತಃ ಸ್ರಷ್ಟಾ ಬ್ರಹ್ಮಾದ್ಯಾಸ್ತದವಾಂತರಾಃ ॥''

ಎಂಬುದಾಗಿ ಪದ್ಮಪುರಾಣದ ವಾಕ್ಯವೂ ಇದನ್ನೇ ಸಮರ್ಥಿಸುತ್ತದೆ.

**ಅಣುಭಾಷ್ಯ :** ''ದೇಹೇಷ್ವೇವ ತದುದ್ಭವಃ'' ಎಂದು.

ದೇಹ ಎಂದರೆ ನಾಮರೂಪಾತ್ಮಕವಾದ ಸಮಸ್ತ ಪ್ರಪಂಚವು ಎಂದರ್ಥ. ಕೇವಲ ಮುಖ್ಯಪ್ರಾಣಾದಿಗಳು ಮಾತ್ರವಲ್ಲ ಎಂಬುದನ್ನು 'ಚ' ಶಬ್ದದಿಂದ ಸೂಚಿಸಿದ್ದಾರೆ. 'ತದುದ್ಭವಃ' ಎಂದರೆ ಆ ವಿಷ್ಣುವಿನಿಂದಲೇ ಹುಟ್ಟಿದವು, ವಿರಿಂಚಿಯಿಂದಲ್ಲ ಎಂದರ್ಥ.

## ಅಧಿಕರಣ - ೧೩

## ॥ ಮಾಂಸಾಧಿಕರಣ ॥

## ॥ ಓಂ ಮಾಂಸಾದಿ ಭೌಮಂ ಯಥಾ ಶಬ್ದಮಿತರಯೋಶ್ಚ ಓಂ ॥

ಇಂದ್ರಿಯಗಳಿಗೆ ಆಶ್ರಯವಾದ ಶರೀರವು ಪೃಥಿವ್ಯಾದಿಗಳಿಂದ ಹುಟ್ಟುತ್ತವೆ ಎಂದು ನಿರೂಪಿಸುತ್ತಾರೆ.

ದೇಹದಲ್ಲಿರುವ ಅಸ್ಥಿ, ಮಾಂಸವೇ ಮೊದಲಾದ ಯಾವ ಕಠಿಣ ವಸ್ತುಗಳಿವೆಯೋ ಅವು ಪೃಥಿವಿಯಿಂದ ಉತ್ಪನ್ನವಾದಂಥವು. ಅಂದರೆ ಪಾರ್ಥಿವವು. ಶೋಣಿತಾದಿಗಳು ನೀರಿನ ಕಾರ್ಯವು. ಮಜ್ಜಾದಿಗಳು ತೇಜಸ್ಸಿನ ಕಾರ್ಯವು. ಒಟ್ಟಿನಲ್ಲಿ ಶರೀರವು ಈ ಮೂರು ಭೂತಗಳ ಮೇಲನದಿಂದ ಹುಟ್ಟಿದೆ ಎಂದರ್ಥ.

''ಯತ್ ಕಠಿಣಂ ಸಾ ಪೃಥಿವೀ, ಯದ್ದ್ರವಂ ತದಾಪೋ, ಯದುಷ್ಣಂ ತತ್ತೇಜ'' ಎಂಬುದಾಗಿ ಗರ್ಭಶ್ರುತಿಯಲ್ಲಿ ಹೇಳಿದೆ. ''ಅದ್ಭ್ಯೋ ಹೀದಮುತ್ಪದ್ಯತೇ'', ''ಪೃಥಿವೀಂ ಶರೀರಮುಪ್ಯೇತಿ'', ''ತೈಜಸಮೇವ ಶರೀರಂ'' ಇತ್ಯಾದಿ ಶ್ರುತಿಗಳಿಂದ ದೇಹವು ಏಕಭೂತದ ಕಾರ್ಯವು ಎಂದು ತೋರುತ್ತದೆ. ಹೀಗೆ ಒಪ್ಪಿದರೆ ಪರಸ್ಪರ ಶ್ರುತಿ ವಿರೋಧ ಬರುತ್ತದೆ. ಆಯಾ ಭೂತಗಳ ಸಂಯೋಗ ವಿಶೇಷದಿಂದ ವಿವಿಧ ಅಂಗಾಂಶಗಳಿಂದ ಕೂಡಿದ ಶರೀರವು ಉತ್ಪತ್ತಿಯಾಗುತ್ತದೆ ಎಂದು ವಿಶೇಷ ಶ್ರುತಿಯಿಂದ ತಿಳಿದು ಬರುತ್ತದೆ. ಶರೀರವು ಈ ಮೂರೂ ಭೂತಗಳ ಕಾರ್ಯವು ಎಂದು ಅಂಗೀಕರಿಸುವುದರಿಂದ ಶ್ರುತಿಗಳಿಗೆ ವಿರೋಧ ಬರುವುದಿಲ್ಲ ಎಂಬುದೇ ಸಿದ್ಧಾಂತವು.

**ಅಣುಭಾಷ್ಯ** : ''ದೇಹಶ್ಚೈವ ತದುದ್ಭವಃ''

ದೇಹ ಮತ್ತು ಅದರ ಎಲ್ಲ ಅಂಗಗಳೂ ಭೂತತ್ರಯ ಸಂಯೋಗದಿಂದಲೇ ಹುಟ್ಟಿವೆ, ಕೇವಲ ಒಂದೇ ಒಂದು ಭೂತದಿಂದಲ್ಲ ಎಂದರ್ಥ.

## ಅಧ್ಯಾಯಾರ್ಥ ಉಪಸಂಹಾರ

''ಸರ್ವದೋಷೋಜ್ಝಿತಃ ತಸ್ಮಾತ್ ಭಗವಾನ್ ಪುರುಷೋತ್ತಮಃ ।
ಉಕ್ತಾಃ ಗುಣಾಶ್ಚ ಅವಿರುದ್ಧಾಃ ತಸ್ಯ ವೇದೇನ ಸರ್ವಶಃ ॥''

ಎಲ್ಲ ವೇದಗಳಲ್ಲಿ ಉಕ್ತವಾದ ಎಲ್ಲ ಗುಣಗಳನ್ನು ಪುರುಷೋತ್ತಮನಾದ

ಶ್ರೀ ಹರಿಯಲ್ಲಿ ಸಮನ್ವಯವನ್ನು ಹಿಂದಿನ ಅಧ್ಯಾಯದಲ್ಲಿ ಪ್ರತಿಪಾದಿಸಲಾಗಿದೆ. ಸೃಷ್ಟ್ಯುತ್ವಾದಿ ಎಲ್ಲ ಗುಣಗಳೂ ಎಲ್ಲ ರೀತಿಯಿಂದಲೂ ಅಂದರೆ ಹಿಂದೆ ಹೇಳಿದ ಪ್ರಕಾರದಿಂದ ಎಲ್ಲ ಯುಕ್ತಿ ಸಮಯಾದಿಗಳಿಂದಲೂ ಪುರುಷೋತ್ತಮನಲ್ಲಿ ಅವಿರುದ್ಧವಾಗಿಯೇ ಕೂಡುತ್ತವೆ. ಆದ್ದರಿಂದ ಪುರುಷೋತ್ತಮನು ಸರ್ವದೋಷ ರಹಿತನು ಎಂದರ್ಥ. 'ಭಗವಾನ್ ಪುರುಷೋತ್ತಮಃ' ಎಂದು ಹೇಳುವ ಮೂಲಕ ಈ ಅಧ್ಯಾಯಕ್ಕೆ ಮಂಗಲವನ್ನು ಸೂಚಿಸಿದ್ದಾರೆ. ವಿಶಿಷ್ಟ ವಸ್ತು ಸಂಕೀರ್ತನದಿಂದಲೇ ಮುಖ್ಯವಾಗಿ ಮಂಗಲವು.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಎರಡನೆಯ ಅಧ್ಯಾಯದ ನಾಲ್ಕನೆಯ ಪಾದವು ಮುಕ್ತಾಯವಾಯಿತು ॥**

**॥ ಇಲ್ಲಿಗೆ ಎರಡನೆಯ ಅಧ್ಯಾಯವು ಸಮಾಪ್ತವಾಯಿತು ॥**



# ಮೂರನೆಯ ಅಧ್ಯಾಯ

ಮೂರನೆಯ ಅಧ್ಯಾಯದಲ್ಲಿ ನಾಲ್ಕು ಪಾದಗಳಲ್ಲಿ ಕ್ರಮವಾಗಿ ವೈರಾಗ್ಯ, ಭಕ್ತಿ, ಉಪಾಸನೆ, ಅಪರೋಕ್ಷ ಜ್ಞಾನರೂಪವಾದ ಸಾಧನೆಯ ಸ್ವರೂಪವನ್ನು ನಿರೂಪಿಸಲಾಗಿದೆ.

## ಮೊದಲನೆಯ ಪಾದ

ಶುಭೇಣ ಕರ್ಮಣಾ ಸ್ವರ್ಗಂ ನಿರಯಂ ಚ ವಿಕರ್ಮಣಾ ।
ಮಿಥ್ಯಾಜ್ಞಾನೇನ ಚ ತಮೋ ಜ್ಞಾನೇನೈವ ಪರಂಪದಮ್ ॥೧॥
ಯಾತಿ ತಸ್ಮಾದ್ವಿರಕ್ತಃ ಸನ್ ಜ್ಞಾನಮೇವ ಸಮಾಶ್ರಯೇತ್ ।

ಅಧಿಕರಣ ೧ರಿಂದ ೧೦ರವರೆಗಿನ ತಾತ್ಪರ್ಯವನ್ನು ಅಣುಭಾಷ್ಯದ ಶುಭೇಣ ಕರ್ಮಣಾ ಸ್ವರ್ಗಂ ಎಂಬ ವಾಕ್ಯದಿಂದ ಸಂಗ್ರಹಿಸಲಾಗಿದೆ.

### ಅಧಿಕರಣ - ೧

### ॥ ತದಂತರಾಧಿಕರಣ ॥

### ॥ ಓಂ ತದಂತರ ಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ ಓಂ ॥

ಜೀವನು ಶುಭಕರ್ಮಗಳನ್ನು ಮಾಡಿ ಪೂರ್ವದೇಹವನ್ನು ತ್ಯಜಿಸಿದ ನಂತರ ಆದರ ಫಲವಾಗಿ ಭೂತಗಳೊಂದಿಗೆ ಕೂಡಿಕೊಂಡು ಸ್ವರ್ಗವನ್ನು ಕುರಿತು ಹೋಗುವನು. ಸ್ವರ್ಗಫಲವನ್ನು ಭೋಗಿಸಿದ ಅನಂತರ ಪುನಃ ಮತ್ತೊಂದು ದೇಹವನ್ನು ಹೊಂದಲಿಕ್ಕಾಗಿ ಭೂತಗಳಿಂದ ಕೂಡಿಕೊಂಡೇ ತಿರುಗಿ ಭೂಮಿಗೆ ಬರುವನು. ಹೀಗೇಕೆ ತಿಳಿಯಬೇಕು ಎಂದರೆ ಆದಕ್ಕೆ ಛಾಂದೋಗ್ಯ ಉಪನಿಷತ್ತಿನಲ್ಲಿ ಬಂದಿರುವ ಪ್ರವಾಹಣ ರಾಜನಿಗೂ ಶ್ವೇತಕೇತುವಿಗೂ ನಡೆದ ಪ್ರಶ್ನೋತ್ತರವನ್ನು ಉದಾಹರಿಸುತ್ತಾರೆ. ''ವೇತ್ಥ ಯಥಾ ಪಂಚಮ್ಯಾಮಾಹತಾವಾಪಃ ಪುರುಷ ವಚಸೋ ಭವಂತಿ'' ಎಂಬುದು ಶ್ವೇತಕೇತುವನ್ನು ಕುರಿತು ರಾಜನ ಪ್ರಶ್ನೆ. ಆ ಪ್ರಶ್ನೆಗೆ

ಪರಿಹಾರವನ್ನು ಕೊಡಲು ಅಸಮರ್ಥನಾದ ಶ್ವೇತಕೇತುವು ತನ್ನ ತಂದೆ ಗೌತಮರನ್ನು ಕೇಳಲಾಗಿ ಅವರಿಗೂ ಉತ್ತರಿಸಲಾಗದೇ ಪುನಃ ಪ್ರವಾಹಣ ರಾಜನನ್ನೇ ಕೇಳುತ್ತಾರೆ. ಅದಕ್ಕೆ ಉತ್ತರವಾಗಿ ''ಪಂಚಮಾಗ್ನಿಗಳಲ್ಲಿ ಆಹುತಿ ಕೊಡಲ್ಪಟ್ಟ 'ಆಪಃ' (ಅದ್ಭಿಃ) ಅಂದರೆ ನೀರುಗಳಿಂದ, ಉಪಲಕ್ಷಣಯಾ ಪಂಚಭೂತಗಳಿಂದ, ಸೇರಿಕೊಂಡೇ ಜೀವನು ದೇಹವನ್ನು ಹೊಂದಿ ''ಪುರುಷ ವಚಸಃ ಭವಂತಿ'' ಅಂದರೆ ಪುರುಷ ಎಂಬ ಹೆಸರನ್ನು ಹೊಂದಿದವನಾಗುತ್ತಾನೆ ಎಂದು ಅಲ್ಲಿ ನಿರೂಪಿತವಾಗಿದೆ.

ಈ ಅಧಿಕರಣದ ತಾತ್ಪರ್ಯ ಹೀಗಿದೆ - ಬಂಧನಿವೃತ್ತಿ ರೂಪವಾದ ಫಲವಿರುವುದರಿಂದ ವೈರಾಗ್ಯಾದಿ ಸಾಧನೆಯನ್ನು ಅನುಷ್ಠಾನ ಮಾಡಲೇಬೇಕು. ''ಮರಣದಿಂದಲೇ ಬಂಧ ನಿವೃತ್ತಿಯು ಆದ್ದರಿಂದ ವೈರಾಗ್ಯಾದಿ ಸಾಧನೆಯ ಅವಶ್ಯಕತೆಯಿಲ್ಲ'' ಎಂದು ಹೇಳುವುದು ಸರಿಯಲ್ಲ. ''ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಮ್'' ''ಭೂತಾನಾಂ ವಿನಿವೃತ್ತಿಸ್ತು ಮರಣಂ ಸಮುದಾಹೃತಮ್'' ಎಂಬ ಪ್ರಮಾಣ ವಾಕ್ಯಗಳ ಪ್ರಕಾರ ''ಭೂತ ಬಂಧವೇ ಸಂಸಾರ, ಆದರಿಂದ ಬಿಡುಗಡೆಯೇ ಮೋಕ್ಷ''.

''ಭೂತಗಳಿಂದ ನಿವೃತ್ತಿಯೇ ಮರಣವು'' ಎಂದು ಹೇಳಿದ್ದರೂ ಮರಣವೇ ಬಂಧ ನಿವೃತ್ತಿಯಲ್ಲ. ಮರಣವಾದಾಗ ಭೂತಗಳಿಂದ ಕೂಡಿಕೊಂಡೇ ಜೀವನು ಸ್ವರ್ಗಾದಿ ಗಮನಾಗಮನವನ್ನು ಅಂಗೀಕರಿಸಲಾಗಿದೆ. ಅದಕ್ಕೆ ಪ್ರಮಾಣವು ಇದೆ ''ಭೂತಯುಕ್ತಃ ಪರಂ ಲೋಕಂ. ಇಮಂ ಲೋಕಂ ಚ ಗಚ್ಛತಿ'' ಎಂಬುದಾಗಿ ಸ್ಮೃತಿಯಲ್ಲಿ ಹೇಳಿದೆ. ''ಭೂತಾನಾಂ ವಿನಿವೃತ್ತಿಸ್ತು ಮರಣಂ'' ಎಂದು ಹೇಳುವ ಶ್ರುತಿ ವಾಕ್ಯಕ್ಕೆ ಇದರಿಂದ ವಿರೋಧ ಬರುವುದಿಲ್ಲ. ಭಾಗಶಃ ಭೂತಗಳಿಂದ ನಿವೃತ್ತಿ ಎಂಬುದಾಗಿ ಈ ಶ್ರುತಿಗೆ ಅರ್ಥಮಾಡಬೇಕು. ವೈರಾಗ್ಯಾದಿ ಸಾಧನಾನುಷ್ಠಾನದಿಂದಲೇ ಪೂರ್ಣವಾಗಿ ಬಂಧನಿವೃತ್ತಿಯು ಎಂಬುದೇ ಸಿದ್ಧಾಂತ.

## ಅಧಿಕರಣ-೨

## ॥ ತ್ರ್ಯಾತ್ಮಕತ್ವಾಧಿಕರಣ ॥

### ॥ ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ ॥

ಜೀವನು ಎಲ್ಲ ಭೂತಗಳಿಂದ ಕೂಡಿಕೊಂಡೇ ಹೋಗುತ್ತಾನೆ, ಕೇವಲ ನೀರಿನೊಂದಿಗೇ ಅಲ್ಲ, ಹಿಂದೆ ಉಲ್ಲೇಖಿಸಲ್ಪಟ್ಟ 'ಆಪಃ' ಶಬ್ದಕ್ಕೆ ಇದರಿಂದ ವಿರೋಧವಿಲ್ಲ. ಏಕೆಂದರೆ ನೀರಿಗೆ ತ್ರ್ಯಾತ್ಮಕತ್ವವಿದೆ. ಅಂದರೆ ನೀರು ಎಂಬ ಶಬ್ದವು ತೇಜಸ್ಸು, ನೀರು ಮತ್ತು ಅನ್ನ (ಪೃಥಿವೀ) ಈ ಮೂರು ಭೂತಗಳನ್ನೂ ಒಳಗೊಂಡಿದೆ.

ಪಾರ್ಥಿವವಾದ ಸರ್ವದೇಹಗಳಲ್ಲಿ ಸೇರಿರುವ ಪೃಥಿವೀ, ತೇಜಸ್ಸು ಹಾಗೂ ನೀರು, ಇವುಗಳಲ್ಲಿ ನೀರಿನ ಅಂಶವೇ ಹೆಚ್ಚಿನ ಪ್ರಮಾಣದಲ್ಲಿರುವುದರಿಂದ 'ಆಪಃ' ಎಂಬ ಶಬ್ದವು ತ್ರಾತ್ಮಕತ್ವ ರೂಪದಿಂದ ಶ್ರುತಿಯಲ್ಲಿ ಪ್ರಯೋಗಿಸಲ್ಪಟ್ಟಿದೆ.

''ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್'' (ಛಾಂದೋಗ್ಯ), ''ಮಿಶ್ರಾಣಿ ಹಿ ಭೂತಾನಿ'' (ಕಾಷಾಯಣ ಶ್ರುತಿ) ಇತ್ಯಾದಿ ಶ್ರುತಿಗಳು ತ್ರ್ಯಾತ್ಮಕತ್ವಕ್ಕೆ ಪ್ರಮಾಣವಾಗಿವೆ.

## ಅಧಿಕರಣ-೩

### ॥ ಪ್ರಾಣಾಗತ್ಯಧಿಕರಣ ॥

### ॥ ಓಂ ಪ್ರಾಣಗತೇಶ್ಚ ಓಂ ॥

ವಿಶೇಷ ಶ್ರುತಿ ಪ್ರಮಾಣವೂ, ಅನುಮಾನವೂ ಇರುವುದರಿಂದ ಭೂತಗಳೂ (ಇಂದ್ರಿಯಗಳೂ ಸಹ) ಜೀವನೊಂದಿಗೇನೆ ಹೋಗುತ್ತವೆ. ಇದನ್ನೇ ಇಲ್ಲಿ ಪ್ರಾಣಗತೇಶ್ಚ ಎಂದು ಹೇಳಿದ್ದಾರೆ. ಭೂತಗಳಲ್ಲಿ ವ್ಯಾಪಕವಾದ ಪ್ರಾಣಗಳಿಗೆ ಅಂದರೆ ಇಂದ್ರಿಯಗಳಿಗೆ ಜೀವನೊಂದಿಗೆ ಸಹಗತಿಯನ್ನು ಶ್ರುತಿಗಳಲ್ಲಿ ಹೇಳಿದೆ. ''ಯತ್ರ ವಾವ ಭೂತಾನಿ ತತ್ರ ಕರಣಾನಿ ನಿತ್ಯಾನಿ ಹ ವಾ ಏತಾನಿ ಭೂತಾನಿ ಕರಣಾನಿ ಚ ನ ಚೈತಾನಿ ಕದಾಚಿದ್ವಿಯುಜ್ಯಂತೇ, ನ ಚ ವಿಲೀಯಂತೇ'' ಎಂಬ ಶ್ರುತಿಯು ಸತ್ಯವಾದ ಭೂತಗಳಿಗೂ ಇಂದ್ರಿಯಗಳಿಗೂ ಅವಿನಾಭಾವ ಸಂಬಂಧವನ್ನು ಹೇಳುತ್ತದೆ.

''ಪ್ರಾಣಾನಾಂ ಚ ಅಸ್ತಿ ಜೀವೇನ ಸಹ ಗತಿಃ'' ''ಪ್ರಾಣೈರ್ವಾವ ನ ವಿಯುಂಜಂತೇ'' ಇತ್ಯಾದಿ ಶ್ರುತಿಗಳು ಪ್ರಾಣಗಳಿಗೆ ಜೀವನೊಂದಿಗೆ ಸಹಗತಿಯನ್ನು ಹೇಳುತ್ತವೆ.

**ಅಧಿಕರಣ - ೪**

**॥ ಅಗ್ನ್ಯಾದ್ಯಧಿಕರಣ ॥**

**॥ ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ ॥**

ಪ್ರಾಣಗಳು ಜೀವನೊಂದಿಗೆ ಹೋಗುವುದಿಲ್ಲ. ಏಕೆಂದರೆ 'ಅಗ್ನಿಂ ವಾಗಪ್ಯೇತಿ'' ಎಂಬುದಾಗಿ ವಾಗಾದಿ ಇಂದ್ರಿಯಗಳಿಗೆ ಅಗ್ನ್ಯಾದಿಗಳನ್ನು ಕುರಿತು ಗಮನವು ಶ್ರುತವಾಗಿದೆ. ಹೀಗೆ ಹೇಳುವುದು ಸರಿಯಲ್ಲ.

ಏಕೆಂದರೆ ಅಗ್ನ್ಯಾದಿಗಳನ್ನು ಕುರಿತು ಗತಿಯನ್ನು ಹೇಳುವ ಶ್ರುತಿಗಳು ಭಾಗಶಃ ಗತಿ ವಿಷಯಕವಾಗಿವೆ. ''ಪುರುಷಸ್ಯ ಮೃತೌ ಬ್ರಹ್ಮನ್ ಪ್ರಾಣಾಃ ಭಾಗತ ಏವ ತು । ಅಧಿದೈವಂ ಪ್ರಾಪ್ನುವಂತಿ ಭಾಗತೋಽ ನುವ್ರಜಂತಿ ತಮ್ ॥'' ಇತ್ಯಾದಿ ಶ್ರುತಿಯೇ ಇದಕ್ಕೆ ಪ್ರಮಾಣ. ಆದ್ದರಿಂದ ಎಲ್ಲ ಪ್ರಾಣಗಳೂ ಜೀವನೊಂದಿಗೇ ಹೋಗುತ್ತವೆ ಎಂಬುದೇ ಸಿದ್ಧಾಂತವು.

**ಅಧಿಕರಣ – ೫**

**॥ ಪ್ರಥಮಾಧಿರಕಣ ॥**

**॥ ಓಂ ಪ್ರಥಮೇ ಶ್ರವಣಾದಿತಿ ಚೇನ್ನ ತಾ ಏವ ಹಿ ಉಪಪತ್ತೇಃ ಓಂ ॥**

''ಏತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ'' ಎಂದು ಉಪಕ್ರಮದಲ್ಲಿ ಹೇಳುವ ಶ್ರುತಿಯಲ್ಲಿ ಎಲ್ಲ ಭೂತಗಳೊಂದಿಗೆ ಜೀವನ ಗಮನವು ಶ್ರುತವಾಗಿಲ್ಲ. ಆದ್ದರಿಂದ ಎಲ್ಲ ಭೂತಗಳೊಂದಿಗೆ ಕೂಡಿಕೊಂಡು ಜೀವನು ಹೋಗುತ್ತಾನೆ ಎಂದು ಹೇಳು ವುದು ಕೂಡುವುದಿಲ್ಲ ಎಂದು ಹೇಳುವುದು ಅಯುಕ್ತವು. ಏಕೆಂದರೆ ಇಲ್ಲಿ ಶ್ರದ್ಧಾ ಶಬ್ದದಿಂದ ನೀರು (ಹಾಗೂ ಉಪಲಕ್ಷಣಯಾ ಭೂತತ್ರಯ) ಎಂಬುದಾಗಿಯೇ

ಹೇಳಲ್ಪಟ್ಟಿದೆ. ಹೀಗಾದರೂ ಏಕೆ ಅರ್ಥಮಾಡಬೇಕು ಎಂದರೆ, ಮುಂದೆ ಉಪಸಂಹಾರದಲ್ಲಿ ''ಆಪಃ ಪುರುಷ ವಚಸೋ ಭವಂತಿ'' ಎಂದು ಹೇಳಲ್ಪಟ್ಟಿದೆ.

## ಅಧಿಕರಣ – ೬
## ॥ ಅಶ್ರುತತ್ವಾಧಿಕರಣ ॥
### ॥ ಓಂ ಅಶ್ರುತತ್ವಾದಿತಿ ಚೇನ್ನ ಇಷ್ಟಾದಿಕಾರಿಣಾಂ ಪ್ರತೀತೇಃ ಓಂ ॥

ಪ್ರಾಣಾದಿಗಳಿಗೆ ಅಗ್ನ್ಯಾದಿಗತಿಯಂತೆ ಜೀವನೊಂದಿಗೆ ಭೂತಗಳ ಗಮನವು ಸಾಕ್ಷಾತ್ತಾಗಿ ಅಶ್ರುತವಾಗಿರುವುದರಿಂದ ಪೂರ್ವೋಕ್ತವಾದ ಭೂತ ಗಳೊಂದಿಗೆ ಜೀವನೊಂದಿಗೆ ಗತಿಯು ಕೂಡುವುದಿಲ್ಲ ಎಂದು ಹೇಳಿದರೆ, ಅದು ಸರಿಯಲ್ಲ. ಏಕೆಂದರೆ, ''ಅಥೈನಂ ಯಜಮಾನಂ ಕಿಂ ನ ಜಹಾತಿ, ಭೂತಾನ್ಯೇವ ಭೂತೈರೇವ ಗಚ್ಛತಿ'' ಇತ್ಯಾದಿ ಶ್ರುತಿಯಲ್ಲಿ ಸ್ಪಷ್ಟವಾಗಿ ಭೂತಗಳೊಂದಿಗೆ ಜೀವನ ಗತಿಯು ಹೇಳಲ್ಪಟ್ಟಿದೆ.

## ಅಧಿಕರಣ – ೭
## ॥ ಭಾಕ್ತಾಧಿಕರಣ ॥
### ॥ ಓಂ ಭಾಕ್ತಂ ವಾऽನಾತ್ಮವಿತ್ವಾತ್ತಥಾಹಿ ದರ್ಶಯತಿ ಓಂ ॥

''ಅಮೃತತ್ವಂ'' ಎಂದು ಸೇರಿಸಿಕೊಳ್ಳಬೇಕು. ಕಾಮ್ಯಕರ್ಮದಿಂದ ಸಾಧ್ಯವಾದ ಅಮೃತತ್ವವು ಭಾಗಶಃ ಅಂದರೆ ಗೌಣ ಅಥವಾ ಅಲ್ಪಕಾಲೀನವು ಎಂದರ್ಥ. ಏಕೆಂದರೆ ಕಾಮ್ಯಕರ್ಮಚಾರಿಗಳು ಅನಾತ್ಮಜ್ಞಾನಿಗಳು. ಆತ್ಮಜ್ಞಾನಿಗಳಿಗೆ ಮಾತ್ರ ಮುಖ್ಯವಾದ ಅಮೃತತ್ವವು. 'ತಮೇವ ವಿದ್ವಾನ್ ಅಮೃತ ಇಹ ಭವತಿ'' ಇತ್ಯಾದಿ ಶ್ರುತಿಸಮೂಹವು ಆತ್ಮಜ್ಞಾನಿಗೆ ಮುಖ್ಯವಾದ ಅಮೃತತ್ವವು (ಅಂದರೆ ಮೋಕ್ಷವು) ಎಂದು ಹೇಳುತ್ತದೆ. ''ಅಪಾಮ ಸೋಮಮಮೃತಾ ಅಭೂಮ'' ಎಂಬ ಶ್ರುತಿಯಲ್ಲಿನ ಅಮೃತ ಶಬ್ದಕ್ಕೆ ಅಧಿಕಾರಿ ಭೇದದಿಂದ ಅನ್ಯಾರ್ಥವನ್ನು ಮಾಡಬೇಕು. ಕರ್ಮಗಳಲ್ಲಿ ಕಾಮ್ಯ, ಅಕಾಮ್ಯ ಎಂದು ಎರಡು ವಿಧ. ಅಕಾಮ್ಯ ದಲ್ಲಿಯೂ ಎರಡು ವಿಧವು – ಜ್ಞಾನ ಬರುವುದಕ್ಕಿಂತ ಮೊದಲು ಹಾಗೂ ಜ್ಞಾನ

ಬಂದ ಮೇಲೆ ಎಂಬುದಾಗಿ. ಆದ್ದರಿಂದ ಶ್ರುತಿಯು ಕಾಮ್ಯ ಕರ್ಮ ಪರವಾಗಿದ್ದರೆ ಆಗ ಅಮೃತ ಪದ ಸ್ವರ್ಗಾದಿ ಶುಭ ಫಲ ಎಂದರ್ಥ. ಜ್ಞಾನಕ್ಕಿಂತ ಪೂರ್ವಭಾವಿ ಯಾದ ಅಕಾಮ್ಯಕರ್ಮಪರವಾಗಿದ್ದರೆ ಆಗ ಅಮೃತ ಶಬ್ದಕ್ಕೆ ಮೋಕ್ಷ ಸಾಧನೀ ಭೂತವಾದ ಫಲ ಎಂದರ್ಥ. ಆದರೆ ಅಪರೋಕ್ಷ ಜ್ಞಾನಾನಂತರ ಮಾಡುವ ಅಕಾಮ್ಯಕರ್ಮದಿಂದ ಮುಖ್ಯವಾದ ಅಮೃತತ್ವ ಅಂದರೆ ಮೋಕ್ಷವೇ ಸಾಕ್ಷಾತ್ತಾಗಿ ಫಲವು. ಶುದ್ಧ ಸತ್ತ್ವನಾದ ಜ್ಞಾನಿಯು ಮಾಡುವ ಕರ್ಮವು ವೈರಾಗ್ಯಾದಿ ಸಾಧನ ದ್ವಾರಾ ಮೋಕ್ಷಸಾಧನವು ಎಂದು ತಿಳಿಯತಕ್ಕದ್ದು. ಮೋಕ್ಷಫಲಕ್ಕಾಗಿ ಕರ್ಮವು ಗೌಣ, ವೈರಾಗ್ಯಾದಿ ಸಾಧನವೇ ಮುಖ್ಯವು. ಕೇವಲ ಕರ್ಮಕ್ಕೆ ಸಾಕ್ಷಾತ್ ಮೋಕ್ಷ ಸಾಧನತ್ವವಿಲ್ಲ ಎಂಬುದೇ ಸಿದ್ಧಾಂತವು.

## ಅಧಿಕರಣ – ೮

## ।। ಕೃತಾತ್ಯಯಾಧಿಕರಣ ।।

### ।। ಓಂ ಕೃತಾತ್ಯಯೇಽನುಶಯವಾನ್ ದೃಷ್ಟ ಸ್ಮೃತಿಭ್ಯಾಮ್ ಓಂ ।।

ಜೀವನ ಕರ್ಮದ ಫಲವು ಸ್ವರ್ಗಾದಿಗಳಲ್ಲಿ ಭೋಗದಿಂದ ಕ್ಷಯಿಸಿದ ಮೇಲೆ ಜೀವನು ಕರ್ಮ ಶೇಷದ ಸಂಬಂಧವನ್ನು ಹೊಂದಿಯೇ ಈ ಲೋಕಕ್ಕೆ ವಾಪಸ್ಸು ಬರುತ್ತಾನೆ. ಹೀಗೆಂದು ಶ್ರುತಿ, ಸ್ಮೃತಿಗಳಲ್ಲಿ ಹೇಳಿದೆ. ''ತತಃ ಶೇಷೇಣೇಮಂ ಲೋಕಮಾಯಾತಿ। ಪುನಃ ಕರ್ಮ ಕುರುತೇ । ಪುನರ್ಗಚ್ಛತಿ । ಪುನರಾಗಚ್ಛತಿ ।।'' ಎಂದು ಶ್ರುತಿಯಲ್ಲಿ ಹೇಳಿದೆ. ''ಭುಕ್ತಶೇಷಾನುಶಯವಾನಿಮಾಂ ಪ್ರಾಪ್ಯ ಭುವಂ ಪುನಃ । ಕರ್ಮ ಕೃತ್ವಾ ಪುನರ್ಗಚ್ಛೇತ್ ಪುನರಾಯಾತಿ ನಿತ್ಯಶಃ । ಆಚತುರ್ದಶ ಮಾದ್ವರ್ಷಾತ್ ಕರ್ಮಾಣಿ ನಿಯಮೇನ ತು । ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಮ್ । ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ।।'' ಹೀಗೆಂದು ಸ್ಮೃತಿಯಲ್ಲಿ ಹೇಳಿದೆ. ಈ ಶ್ರುತಿ ಸ್ಮೃತಿಗಳ ತಾತ್ಪರ್ಯವೇನೆಂದರೆ – ಕರ್ಮದ ಫಲವು ಕೇವಲ ಭೋಗದಿಂದಲೇ ಪೂರ್ಣವಾಗಿ ನಾಶವಾಗುವುದಿಲ್ಲ, ಭಾಗಶಃವಷ್ಟೇ ಭೋಗದಿಂದ ಕರ್ಮಕ್ಷಯವು. ಆದ್ದರಿಂದ ವೈರಾಗ್ಯಾದಿ ಸಾಧನಗಳ ಮೂಲಕ ಭಗವಂತನ ಉಪಾಸನೆ ಮಾಡಬೇಕು. ಸಾಧನೆಯ ದ್ವಾರಾ ಭಗವಂತನ

ಅನುಗ್ರಹ ಸಂಪಾದಿಸಬೇಕು. ಆಗಲೇ ಅಪರೋಕ್ಷ ಜ್ಞಾನ, ತನ್ಮೂಲಕ ಕರ್ಮಕ್ಷಯ. ಅನಂತರವೇ ಪರಮಾತ್ಮನ ಅತ್ಯರ್ಥ ಪ್ರಸಾದವಾದ ಮೋಕ್ಷ. ಇದೇ ಸಿದ್ಧಾಂತ.

## ಅಧಿಕರಣ – ೯

## ॥ಯಥೇತಾಧಿಕರಣ॥

## ॥ಓಂ ಯಥೇತಮನೇವಂ ಚ ಓಂ॥

ಜೀವನು ಯಾವ ಮಾರ್ಗದಿಂದ ಸ್ವರ್ಗವನ್ನು ಕುರಿತು ಹೋಗುತ್ತಾನೋ ಹಾಗೆಯೇ ಈ ಲೋಕಕ್ಕೆ ವಾಪಸ್ಸು ಬರುತ್ತಾನೆ. ಹೀಗೆಂದೇ ನಿಯಮವಿಲ್ಲ. ಗಮನ ಮಾರ್ಗಕ್ಕಿಂತ ಬೇರೆಯೇ ಆದ ಮಾರ್ಗದಿಂದಲೂ ವಾಪಸ್ಸು ಬರುತ್ತಾನೆ. ಹೀಗೇಕೆ ಅರ್ಥಮಾಡಬೇಕು ಎಂದರೆ ಅದಕ್ಕೆ ಪ್ರಮಾಣವಾಗಿ ಶ್ರುತಿಯನ್ನು ಉದಾಹರಿಸುತ್ತಾರೆ. ''ಧೂಮಾದಭ್ರಂ ಅಭ್ರಾದಾಕಾಶಂ ಆಕಾಶಾತ್ ಚಂದ್ರಲೋಕಂ, ಯಥೇತಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ, ಧೂಮೋ ಭೂತ್ವಾ ಪ್ರವರ್ಷತಿ'' ಹೀಗೆಂದು ಕಾಷಾಯಣ ಶ್ರುತಿಯಲ್ಲಿ ಹೇಳಿದೆ.

## ಅಧಿಕರಣ – ೧೦

## ॥ಚರಣಾಧಿಕರಣ॥

## ॥ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜನಿಃ ಓಂ॥

''ತದ್ಯ ಇಹ ರಮಣೀಯ ಚರಣಾಃ ರಮಣೀಯಾಂ ಯೋನಿಮಾಪದ್ಯಂತೇ । ಕಪೂಯಚರಣಾಃ ಕಪೂಯಾಂ ಯೋನಿಮಾಪದ್ಯಂತೇ ॥'' ಹೀಗೆಂದು ಛಾಂದೋಗ್ಯೋಪನಿಷತ್ತು ಹೇಳುತ್ತದೆ. ಆದ್ದರಿಂದ ಗಮನಾಗಮನವು ಕರ್ಮಾಂಗ ಆಚರಣೆಯಿಂದ ಉಂಟಾಗುತ್ತದೆ. ಹೊರತು ಯಜ್ಞಾದಿ ಕರ್ಮದಿಂದಲ್ಲ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಶ್ರುತಿಯು ಯಜ್ಞಾದಿ ಉಪಲಕ್ಷಣಾರ್ಥವಾಗಿ ಆಚರಣೆಯ ಬಗ್ಗೆ ಹೇಳುತ್ತದೆ. ಹೀಗೆಂದು ಕಾರ್ಷ್ಣಾಜನಿ ಆಚಾರ್ಯರು ಹೇಳುತ್ತಾರೆ.

ಗಮನಾಗಮನ ವಿಷಯದಲ್ಲಿ ಕರ್ಮಫಲತ್ವದ ಅಭಾವವನ್ನು ಶಂಕಿಸ

ಬಾರದು. ''ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯತ್ ಶ್ರೇಯೋ ವೇದಯಂತೇ ಪ್ರಮೂಢಾಃ। ನಾಕಸ್ಯ ಪೃಷ್ಠೇ ಸುಕೃತೇ ತೇಽನುಭೂತ್ವಾ ಇಮಂ ಲೋಕಂ ಹೀನತರಂ ವಾ ವಿಶಂತಿ॥'' ಹೀಗೆಂದು ಅಥರ್ವಣೋಪನಿಷತ್ತಿನಲ್ಲಿ ಹೇಳಿದೆ. ''ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ'' ಎಂದು ಭಗವದ್ಗೀತೆಯಲ್ಲಿ ಹೇಳಿದೆ.

**ಅಣುಭಾಷ್ಯ :** ''ಶುಭೇಣ ಕರ್ಮಣಾ ಸ್ವರ್ಗಂ ಯಾತಿ''

ಜೀವನು ಕಾಮ್ಯರೂಪವಾದ ಪುಣ್ಯಕರ್ಮದಿಂದ ಸ್ವರ್ಗವನ್ನು ಹೊಂದುತ್ತಾನೆ. ಸ್ವರ್ಗ ಎನ್ನುವುದು ಉಪಲಕ್ಷಣ. ಗತ್ಯಾಗತಿರೂಪವಾದ ಗರ್ಭವಾಸಾದಿ ಫಲವನ್ನೂ ಹೊಂದುತ್ತಾನೆ ಎಂದು ತಾತ್ಪರ್ಯ.

ಮೊದಲನೆಯ ಅಧಿಕರಣದಲ್ಲಿ ಜೀವರುಗಳಿಗೆ ಸಾಮಾನ್ಯತಃ ಭೂತಸಹಿತವಾಗಿ ಸ್ವರ್ಗಗಮನವನ್ನು ಸಮರ್ಥಿಸಲಾಗಿದೆ. ಎರಡನೆಯದರಲ್ಲಿ ಸಮಸ್ತ ಭೂತ ಸಹಿತವಾಗಿ ಗಮನವನ್ನು ಸಮರ್ಥಿಸಲಾಗಿದೆ. ಮೂರನೆಯದರಲ್ಲಿ ಭೂತಗಳಿಗೆ ಜೀವನೊಂದಿಗೆ ಗಮನವನ್ನು ಸಾಧಿಸಲು ಭೂತಗಳೊಂದಿಗೆ ಅವಿನಾಭೂತ ಸಂಬಂಧವಿರುವ ಇಂದ್ರಿಯಗಳ ಸಹಗತಿಯನ್ನು ಸಮರ್ಥಿಸಲಾಗಿದೆ. ನಾಲ್ಕನೆಯದರಲ್ಲಿ ಪೂರ್ವೋಕ್ತವಾದ ಪ್ರಾಣಗತಿಗೆ ಆಕ್ಷೇಪವನ್ನು ಪರಿಹರಿಸಲಾಗಿದೆ. ಐದು ಮತ್ತು ಆರನೆಯ ಅಧಿಕರಣಗಳಲ್ಲಿ ಮತ್ತೆ ಪೂರ್ವೋಕ್ತವಾದ ಭೂತಗಳ ಗತಿಯ ವಿಷಯದಲ್ಲಿ ಆಕ್ಷೇಪಕ್ಕೆ ಸಮಾಧಾನಮಾಡಲಾಗಿದೆ. ಏಳು ಮತ್ತು ಎಂಟನೆಯ ಅಧಿಕರಣಗಳಲ್ಲಿ ವೈರಾಗ್ಯಾದಿ ಅವಶ್ಯಕತೆಯನ್ನು ಪ್ರತಿಪಾದಿಸುವ ಮೂಲಕ, ಗತ್ಯಾದಿ ಉಪಯುಕ್ತತೆಯನ್ನು ಪ್ರತಿಪಾದಿಸಲಾಗಿದೆ. ವೈರಾಗ್ಯಾದಿಗಳು ಅನವಶ್ಯಕವಾದ್ದರಿಂದ ಆದಕ್ಕೋಸ್ಕರವಾಗಿ ಗತ್ಯಾದಿಗಳ ಪ್ರತಿಪಾದನೆಯು ಅನವಶ್ಯಕವು ಎಂದು ಹೇಳುವುದು ಆಯುಕ್ತವು ಎಂದು ತಾತ್ಪರ್ಯ. ಒಂಭತ್ತನೆಯ ಅಧಿಕರಣದಲ್ಲಿ ಸ್ವರ್ಗಾದಿಗಳಿಂದ ಆಗಮನ ಪ್ರಕಾರವನ್ನು ಉಪಪಾದಿಸಲಾಗಿದೆ. ಹತ್ತನೆಯದರಲ್ಲಿ ಗತ್ಯಾದಿಗಳಿಗೆ ಕರ್ಮಫಲತ್ವವನ್ನು

ಉಪಪಾದಿಸಲಾಗಿದೆ. ಅಣುಭಾಷ್ಯದ "ಶುಭೇಣ ಕರ್ಮಣಾ ಸ್ವರ್ಗಂ" ಎಂಬ ವಾಕ್ಯದಿಂದ ಇವೆಲ್ಲದರ ತಾತ್ಪರ್ಯವು ಸಂಗ್ರಹವಾಗಿ ಹೇಳಲ್ಪಟ್ಟಿದೆ.

ಅಧಿಕರಣ ೧೧ರಿಂದ ೧೪ರವರೆಗಿನ ತಾತ್ಪರ್ಯವನ್ನು ಅಣುಭಾಷ್ಯದ 'ನಿರಯಂ ಚ ವಿಕರ್ಮಣಾ" ಎಂಬ ವಾಕ್ಯದಿಂದ ಸಂಗ್ರಹಿಸಲಾಗಿದೆ.

## ಅಧಿಕರಣ – ೧೧

## ॥ ಅನಿಷ್ಟಾಧಿಕರಣ ॥

## ॥ ಓಂ ಅನಿಷ್ಟಾದಿಕಾರಿಣಾಂ ಚ ಶ್ರುತಮ್ ಓಂ ॥

ಪುಣ್ಯಕರ್ಮಗಳಾದ ಯಜ್ಞಯಾಗಾದಿಗಳನ್ನು ಮಾಡಿದವರಿಗೆ ಇರುವಂತೆಯೇ ಅನಿಷ್ಟವಾದ ಪಾಪಕರ್ಮಕಾರಿಗಳಿಗೂ ಗಮನಾಗಮನವು ಇರುವುದು. ಹಾಗೆಂದು ಶ್ರುತಿಯಲ್ಲಿ ಹೇಳಿದೆ. "ತದ್ಯ ಇಹ ಶುಭಕೃತೋ ಯೇ ಚಾಶುಭಕೃತಃ ತೇ ಅಶುಭಮನುಭೂಯಾವರ್ತಂತೇ। ಪುನಃ ಕರ್ಮ ಕುರ್ವಂತಿ, ಪುನಃ ಗಚ್ಛಂತಿ। ಪುನರಾಗಚ್ಛಂತಿ ॥" ಎಂದು ಒಂದು ಶ್ರುತಿ ಹೇಳಿದರೆ, "ಸರ್ವೇ ವಾ ಏತೇ ಅಶುಭಕೃತಃ ಸಂಯಮನೇ ಪ್ರಪಂತಿ" ಎಂದು ಮತ್ತೊಂದು ಶ್ರುತಿ ಹೇಳುತ್ತದೆ. "ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ" ಎಂಬುದಾಗಿ ಸ್ಮೃತಿಯೂ ಹೇಳುತ್ತದೆ.

## ಅಧಿಕರಣ – ೧೨

## ॥ ಅಪಿಸಪ್ತಾಧಿಕರಣ ॥

## ॥ ಓಂ ಅಪಿ ಸಪ್ತ ಓಂ ॥

ನರಕವು ನಿತ್ಯವಾದ್ದರಿಂದ, ಒಮ್ಮೆ ನರಕವುಂಟಾದರೆ ಮತ್ತೆ ಗಮನಾಗಮನವಿಲ್ಲ. ಆದ್ದರಿಂದ ಪಾಪಿಗಳಿಗೆ ಗಮನಾಗಮನವಿಲ್ಲ ಎಂದು ಹೇಳುವುದು ಅಯುಕ್ತವು. ಏಕೆಂದರೆ ನರಕದಲ್ಲಿ ಒಂದೇ ಪ್ರಕಾರವಿಲ್ಲ. ಏಳು ಪ್ರಕಾರಗಳ ನರಕವುಂಟು. ಅವುಗಳಲ್ಲಿ ತಾಮಿಸ್ರ ಮತ್ತು ಅಂಧತಾಮಿಸ್ರವೆಂಬ ಎರಡು ರೀತಿಯ ನರಕಗಳು ಮಾತ್ರ ನಿತ್ಯ. ಉಳಿದ ಐದು ವಿಧದ ನರಕಗಳು ಅನಿತ್ಯವಾದ್ದರಿಂದ,

ಅವುಗಳನ್ನು ಹೊಂದಿದವರಿಗೆ ಗಮನಾಗಮನವುಂಟು ಎಂದು ತಾತ್ಪರ್ಯ. "ರೌರವ, ಮಹಾರೌರವ, ವಹ್ನಿ ವೈತರಣೀ, ಕುಂಭೀಪಾಕ ಎಂಬುದಾಗಿ ಐದು ವಿಧದ ನರಕಗಳು ಅನಿತ್ಯವು. ತಾಮಿಸ್ರ ಮತ್ತು ಅಂಧತಾಮಿಸ್ರ ಎಂಬುದಾಗಿ ಎರಡು ನರಕಗಳು ನಿತ್ಯವು". ಹೀಗೆ ಮಹಾಭಾರತದಲ್ಲಿ ವರ್ಣಿಸಲ್ಪಟ್ಟಿದೆ.

## ಅಧಿಕರಣ – ೧೩

## ॥ ತತ್ರಾಪ್ಯಧಿಕರಣ ॥

## ॥ ಓಂ ತತ್ರಾಪಿ ಚ ತದ್ ವ್ಯಾಪಾರಾದವಿರೋಧಃ ಓಂ ॥

ದುಃಖರೂಪವಾದ ನರಕದಲ್ಲಿಯೂ ಕೂಡ ಈಶ್ವರ ಪ್ರೇರಣಾಖ್ಯ ವ್ಯಾಪಾರ ವುಂಟು. ಹಾಗಿದ್ದರೂ ಈಶ್ವರನು ಸ್ವತಂತ್ರ ಹಾಗೂ ಆನಂದ ಪೂರ್ಣನಾದ್ದರಿಂದ ಅವನಿಗೆ ನರಕ ಸಂಬಂಧವಾದ ದುಃಖಾದಿಗಳಿರುವುದಿಲ್ಲ. ಆದಪ್ರಯುಕ್ತ ನರಕಾದಿ ದುಃಖಾನುಭವಿಯಾದ ಜೀವನಲ್ಲಿ ಅಂತರ್ಯಾಮಿಯಾಗಿದ್ದು ದುಃಖಾನುಭವ ಪ್ರೇರಕತ್ವ ರೂಪವಾದ ಈಶ್ವರನ ವ್ಯಾಪಾರಕ್ಕೆ ವಿರೋಧ ಬರುವುದಿಲ್ಲ. "ಜೀವನ ಒಳಗಿದ್ದು ಪ್ರೇರಕನಾದ ಈಶ್ವರನಿಗೂ ದುಃಖ ಪ್ರಾಪ್ತಿಯ ಸಂಭವವಿರುವುದರಿಂದ ದುಃಖರೂಪವಾದ ನರಕವೇ ಇಲ್ಲ" ಎಂಬುದಾಗಿ ಪೂರ್ವಪಕ್ಷ. ಜೀವನ ಅಂತರ್ಯಾಮಿಯಾಗಿದ್ದರೂ ಈಶ್ವರನಿಗೆ ನರಕದ ದುಃಖಾನುಭವವಿಲ್ಲ. ಏಕೆಂದರೆ ನರಕವೂ ಪರಮಾತ್ಮನ ಅಧೀನಕ್ಕೊಳಪಟ್ಟಿದೆ. "ಸ ಸ್ವರ್ಗೇ ಸ ಭೂಮೌ ಸ ನರಕೇ ಸೋಽಂಧೇ ತಮಸಿ ಪ್ರವೃತ್ತಿಕೃದೇಕ ಏವಾನುಪ್ರವಿಷ್ಟೋ ನಾಸೌ ದುಃಖಭುಗೀಶ್ವರಃ । ಪ್ರಭುತ್ವಾತ್ ಸರ್ವಂ ಪಶ್ಯತಿ। ಸರ್ವಂ ಕಾರಯತಿ ॥" ಹೀಗೆಂದು ಪೌತ್ರಾಯಣ ಶ್ರುತಿಯಲ್ಲಿ ಹೇಳಿದೆ. ಸ್ವರ್ಗ, ನರಕಾದಿ, ಎಲ್ಲಕ್ಕೂ ಸ್ವಾಮಿಯಾದ ಈಶ್ವರನು ಎಲ್ಲವನ್ನೂ ನೋಡುತ್ತಾನೆ, ಎಲ್ಲವನ್ನೂ ಮಾಡಿಸುತ್ತಾನೆ. ಆದ್ದರಿಂದ ಈಶ್ವರನಿಗೆ ದುಃಖಾದಿ ಭೋಗವಿಲ್ಲ. "ನರಕೇಽಪಿ ವಸನ್ನೀಶೋ ನಾಸೌ ದುಃಖಭುಗುಚ್ಯತೇ । ನಾಸೌ ನೀಚೋಚ್ಚತಾಂ ಯಾತಿ ಪಶ್ಯತ್ಯೇವ ಪ್ರಭುತ್ವತಃ ॥" ಎಂಬುದಾಗಿ ಭಾಗವತ ತಂತ್ರದಲ್ಲಿ ಹೇಳಿದೆ.

## ಅಧಿಕರಣ – ೧೪
## ॥ ವಿದ್ಯಾಧಿಕರಣ ॥
## ॥ ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ ॥

ಜೀವರಿಗೆ ಫಲರೂಪತ್ವ ಗತಿ ಸ್ವಾತಂತ್ರ್ಯವುಂಟು ಎಂದು ತಿಳಿಯತಕ್ಕದ್ದಲ್ಲ. ಏಕೆಂದರೆ ವಿದ್ಯಾಮಾರ್ಗ ಮತ್ತು ಕರ್ಮಮಾರ್ಗ ಎಂಬುದಾಗಿ ಎರಡು ರೀತಿಯ ಮಾರ್ಗಗಳಿವೆ ಎಂಬುದಾಗಿ ಶ್ರುತಿಗಳಿಂದ ಸಿದ್ಧವಾಗಿದೆ. ವಿದ್ಯೆಯ ಫಲಭೂತ ವಾದ ಮಾರ್ಗವು ದೇವಯಾನ, ಕರ್ಮಫಲಭೂತವಾದುದು ಪಿತೃಯಾನ. ಜೀವನಿಗೆ ಸಾಧನ ರೂಪವಾದ ವಿದ್ಯಾಕರ್ಮಗಳಲ್ಲಿ ಹೇಗೆ ಸ್ವಾತಂತ್ರ್ಯವಿಲ್ಲವೋ ಹಾಗೆಯೇ ಫಲತ್ವರೂಪವಾದ ಗತ್ಯಾಗತಿ ವಿಷಯದಲ್ಲಿಯೂ ಸ್ವಾತಂತ್ರ್ಯವಿಲ್ಲ.

**ಅಣುಭಾಷ್ಯ :** "ನಿರಯಂ ಚ ವಿಕರ್ಮಣಾ ಯಾತಿ" (ಅಧಿಕರಣ ೧೧ರಿಂದ ೧೪)

ವಿಕರ್ಮದಿಂದ ನರಕವನ್ನು ಹೊಂದುತ್ತಾನೆ. 'ವಿ' ಉಪಸರ್ಗವು ವಿರುದ್ಧಾರ್ಥ ಹಾಗೂ ಅಭಾವಾರ್ಥಗಳಲ್ಲಿ ಇಲ್ಲಿ ಪ್ರಯೋಗಿಸಲ್ಪಟ್ಟಿದೆ. ಶಾಸ್ತ್ರ ವಿರುದ್ಧವಾದ ಬ್ರಾಹ್ಮಣಹನನಾದಿ ಪಾಪಕರ್ಮವೂ ವಿಕರ್ಮವೇ. ಶಾಸ್ತ್ರವಿಹಿತ ವಾದ ಯಜ್ಞಾದಿ ಕರ್ಮಗಳನ್ನು ಮಾಡದಿರುವುದು ವಿಕರ್ಮವೇ. ಹೀಗೆ ಉಭಯ ವಿಧವಾದ ವಿಕರ್ಮದ ಫಲವಾಗಿ ಜೀವನು ದುಃಖರೂಪವಾದ ನರಕವನ್ನು ಹೊಂದುತ್ತಾನೆ. ಜೀವನು ಪಾಪಕರ್ಮಗಳ ವೈವಿಧ್ಯಕ್ಕೆ ಅನುಗುಣವಾಗಿ ಸಪ್ತವಿಧವಾದ ನರಕವನ್ನು ಹೊಂದುತ್ತಾನೆ ಎಂದೂ ಇಲ್ಲಿ ಹೇಳಲಾಗಿದೆ. ಜೀವನಿಗೆ ಹೇಗೆ ಸಾಧನೆ ಹಾಗೂ ನರಕ ಪ್ರಾಪ್ತಿರೂಪವಾದ ಫಲವನ್ನು ಹೊಂದವುದರಲ್ಲಿ ಸ್ವಾತಂತ್ರ್ಯವಿಲ್ಲವೋ ಹಾಗೆಯೇ ಗಮನಾಗಮನಗಳಲ್ಲಿಯೂ ಸ್ವಾತಂತ್ರ್ಯವಿಲ್ಲ ಎಂಬುದನ್ನು 'ಚ' ಶಬ್ದದಿಂದ ಸೂಚಿಸಲಾಗಿದೆ.

ಮೇಲಿನ ಒಂದೇ ವಾಕ್ಯದಿಂದ ನಾಲ್ಕು ಅಧಿಕರಣಗಳ ತಾತ್ಪರ್ಯವು ಹೇಗೆ ಎಂದರೆ – ಹನ್ನೊಂದನೆಯ ಅಧಿಕರಣದಲ್ಲಿ ವಿಹಿತಕರ್ಮಗಳನ್ನು ಮಾಡದವರಿಗೆ ಹಾಗೂ ನಿಷಿದ್ಧ ಕರ್ಮಕಾರಿಗಳಿಗೆ ನರಕ ಪ್ರಾಪ್ತಿಯನ್ನು ಸಮರ್ಥಿಸಲಾಗಿದೆ.

ಹನ್ನೆರಡನೆಯದರಲ್ಲಿ ನಿಷಿದ್ಧ ಕರ್ಮಫಲವಾದ ನರಕಕ್ಕೆ ನಿತ್ಯತ್ವವನ್ನು ಸಮರ್ಥಿಸಲಾಗಿದೆ. ಹದಿಮೂರನೆಯದರಲ್ಲಿ ವಿರುದ್ಧವಾದ ಕರ್ಮಫಲಕ್ಕೇನೆ ದುಃಖತ್ವರೂಪವಾದ ನರಕ ಪ್ರಾಪ್ತಿಯು ಎಂಬುದನ್ನು ಸಮರ್ಥಿಸಲಾಗಿದೆ. ಹದಿನಾಲ್ಕನೆಯ ಅಧಿಕರಣದಲ್ಲಿ ವಿಕರ್ಮಫಲತ್ವರೂಪವಾದ ನರಕ ಪ್ರಾಪ್ತಿಯಲ್ಲಿ ಗತಿ ಸ್ವಾತಂತ್ರ್ಯವನ್ನು ನಿರಾಸೆ ಮಾಡಲಾಗಿದೆ.

## ಅಧಿಕರಣ – ೧೫

## ॥ ನ ತೃತೀಯಾಧಿಕರಣ ॥

## ॥ ಓಂ ನ ತೃತೀಯೇ ತಥೋಪಲಬ್ಧೇಃ ಓಂ ॥

ತೃತೀಯೇ ಅಂದರೆ ಮೂರನೆಯ ಯಾತನಾತಮವಾದ ಅಂಧಂ ತಮಸ್ಸಿನಲ್ಲಿ, ನ (ಸುಖಂ) – ಸುಖದ ಲೇಶವೂ ಇಲ್ಲ ಎಂದು ತಿಳಿಯತಕ್ಕದ್ದು. ಹೀಗೆಂದು ಶ್ರುತಿ, ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. ''ಅಂಧಂತಮಸ್ಸು ಕೂಡ ಸುಖ ಯುಕ್ತವೇ ಆಗಿರುವುದು, ದುಃಖ ಯುಕ್ತವಾದುದರಿಂದ, ಸಂಸಾರದಲ್ಲಿದ್ದಂತೆ'' ಎಂದು ಕೆಲವರು ಹೇಳುತ್ತಾರೆ. ಅದಕ್ಕೆ ಅವರು ಕೊಡುವ ಪ್ರಮಾಣವು ಹೀಗಿದೆ –

''ಯತ್ರ ದುಃಖಂ ಸುಖಂ ತತ್ರ ಸರ್ವತ್ರಾಪಿ ಪ್ರತೀಯತೇ ।''
ಅಪಿ ನೀಚಗತೌ ಕಿಂಚಿತ್ ಕಿಮು ಮಾನುಷ ದೇಹಿನಃ ॥''

ಹೀಗೆ ಹೇಳುವುದು ಅಯುಕ್ತವು. ಅಂಧಂತಮಸ್ಸಿನಲ್ಲಿ ಸುಖಲೇಶವೂ ಇರುವುದಿಲ್ಲ, ಏಕೆಂದರೆ ''ಅಥಾವಿದ್ವಾನಕರ್ಮಾऽವಾರ್ಗಗಚ್ಛತಿ । ತ್ರಿಧಾ ಹವಾऽವಾರ್ಗಗ್ಗತಿಸ್ತಿರ್ಯಗ್ಯಾಯತನಾತಮ ಇತಿ । ದ್ವೇವಾವ ಸುಖಾನುವೃತ್ತೇ ನ ತಮಃ ಸುಖಾನುವೃತ್ತಮ್ ॥'' ಎಂದು ಶ್ರುತಿಯಲ್ಲಿ ಹೇಳಿದೆ.

''ತಿರ್ಯಕ್ಷು ನರಕೇ ಚೈವ ಸುಖಲೇಶೋ ವಿಧೀಯತೇ ।
ನಾಂಧೇ ತಮಸಿ ಮಗ್ನಾನಾಂ ಸುಖಲೇಶೋऽಪಿ ಕಶ್ಚನ ॥''

ಎಂಬುದಾಗಿ ಸ್ಮೃತಿಯೂ ಇರುವುದು.

**ಅಣುಭಾಷ್ಯ** : ''ಮಿಥ್ಯಾಜ್ಞಾನೇನ ಚ ತಮಃ ಯಾತಿ''

ಪೂರ್ವೋಕ್ತವಾದ ವಿಕರ್ಮ ಸಮುಚ್ಚಯವನ್ನು ಇಲ್ಲಿನ 'ಚ' ಶಬ್ದವು ಸೂಚಿಸುತ್ತದೆ. ಅಂದರೆ ಮಿಥ್ಯಾಜ್ಞಾನದ ಫಲವಾದ ಹರಿದ್ವೇಷಾದಿ ರೂಪವಾದ ವಿಕರ್ಮದಿಂದ ಸುಖಲೇಶ ರಹಿತವಾದ ನಿತ್ಯನರಕವೆನಿಸಿದ ತಮಸ್ಸನ್ನು ಹೊಂದುತ್ತಾನೆ ಎಂದರ್ಥ.

ಅಧಿಕರಣ ೧೬ರಿಂದ ೨೦ರವರೆಗಿನ ತಾತ್ಪರ್ಯವನ್ನು ಅಣುಭಾಷ್ಯದಲ್ಲಿ ''ಜ್ಞಾನೇನೈವ ಪರಂ ಪದಂ। ಯಾತಿ ತಸ್ಮಾದ್ವಿರಕ್ತಸ್ಸನ್ ಜ್ಞಾನಮೇವ ಸಮಾಶ್ರಯೇತ್ ॥'' ಎಂಬ ವಾಕ್ಯ ಸಮುಚ್ಚಯದಿಂದ ಸಂಗ್ರಹಿಸಲಾಗಿದೆ.

## ಅಧಿಕರಣ – ೧೬

## ॥ ತತ್‌ಸ್ವಾಭಾವ್ಯಾಧಿಕರಣ ॥

**॥ ಓಂ ತತ್‌ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ ॥**

''ಸ್ವಭಾವೋ ಯಸ್ಯ ಸಃ ತತ್ ಸ್ವಾಭಾವಃ'' ''ತಸ್ಯ ಭಾವಃ ತತ್‌ಸ್ವಾಭಾವ್ಯಂ'' ಅಂದರೆ ಕರ್ಮಾದಿ ಆಚರಣೆ ಮಾಡುವವರಿಗೆ ಧೂಮಾದಿ ದೇವತಾಸ್ವಭಾವಕ್ಕೆ ಸದೃಶ್ಯವಾದ ಸ್ವಭಾವತ್ವದ ಪ್ರಾಪ್ತಿಯು ಉಂಟಾಗುತ್ತದೆ. ಧೂಮಾದಿ ದೇವತೆಗಳೊಂದಿಗೆ ಐಕ್ಯವಾಗಲೀ ಅವರ ಪದಪ್ರಾಪ್ತಿಯಾಗಲೀ ಅಸಂಭವವು. ದೇವತಾ ಪದವಿಗಳಿಗೆ ನಿಯತವಾದ ಅಧಿಕಾರಿಗಳಿಗೆ ಮಾತ್ರ ಜ್ಞಾನದಿಂದಲೇ ಆಯಾಯ ಪದವಿಗಳು ಪ್ರಾಪ್ತವಾಗಿರುತ್ತವೆ. ಆದ್ದರಿಂದ ಅನ್ಯರಾದ ಕರ್ಮಚಾರಿಗಳಿಗೆ ಧೂಮಾದಿಗಳಲ್ಲಿ ಪ್ರವೇಶ ಹಾಗೂ ಆಯಾ ದೇವತೆಗಳೊಂದಿಗೆ ಗಮನಾಗಮನವನ್ನಷ್ಟೇ ''ಧೂಮೋ ಭೂತ್ವಾ ಅಭ್ರಂ ಭವತಿ'' ಇತ್ಯಾದಿ ಶ್ರುತಿಯು ಪ್ರತಿಪಾದಿಸುತ್ತದೆ.

''ಧೂಮಾದಿಭಾವ ಪ್ರಾಪ್ತಿಶ್ಚ ತದ್ಗತೌ ಗತಿರೇವತು ।
ಸ್ಥಿತಿಃ ಸ್ಥಿತೌ ಪ್ರವೇಶಶ್ಚ ಲಘುತ್ವಾದಿಸ್ತಥೈವ ಚ ॥''

ಎಂಬ ಸ್ಮೃತಿಯೂ ಇದನ್ನು ಸಮರ್ಥಿಸುತ್ತದೆ.

## ಅಧಿಕರಣ – ೧೭

## ॥ ನಾತಿಚಿರೇಣಾಧಿಕರಣ ॥

## ॥ ಓಂ ನಾತಿಚಿರೇಣ ವಿಶೇಷಾತ್ ಓಂ ॥

ಕರ್ಮಿಗಳಿಗೆ ಅತಿ ನಿಧಾನವಾಗಿ ಸ್ವರ್ಗದಿಂದ ಆಗಮನವು ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಶೀಘ್ರ ಗಮನವನ್ನು ಪ್ರತಿಪಾದಿಸುವ ವಿಶೇಷ ಶ್ರುತಿಯಿದೆ. "ತದ್ಯ ಇಹ ರಮಣೀಯ ಚರಣಾಃ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ" ಎಂಬುದಾಗಿ ಶ್ರುತಿಯು. ಸ್ವರ್ಗವನ್ನು ಹೊಂದಿದ ಕರ್ಮಿಯು ಶೀಘ್ರವಾಗಿ ಅಂದರೆ ಒಂದು ವರ್ಷಕ್ಕಿಂತ ಮುಂಚೆಯೇ ದೇಹವನ್ನು ಹೊಂದುತ್ತಾನೆ ಎಂಬುದಾಗಿ ಸ್ಮೃತಿಯೂ ಹೇಳುತ್ತದೆ.

> "ಸ್ವರ್ಗಾಲ್ಲೋಕಾದರ್ವಾಕ್ ಪ್ರಾಪ್ತೋ ವತ್ಸರಾತ್ ಪೂರ್ವಮೇವ ತು ।
> ಮಾತುಃ ಶರೀರಮಾಪ್ನೋತಿ ಪರ್ಯಟನ್ ಯತ್ರ ತತ್ರ ಚ ॥"

## ಅಧಿಕರಣ – ೧೮

## ॥ ಅನ್ಯಾಧಿಕರಣ ॥

## ॥ ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ ॥

ಸ್ವರ್ಗದಿಂದ ವಾಪಸ್ಸು ಭೂಮಿಗೆ ಬರುವ ಕರ್ಮಿಗಳು ಧಾನ್ಯಾದಿಗಳಾಗಿ ಹುಟ್ಟುತ್ತಾರೆ ಎಂಬುದಾಗಿ ಶ್ರುತಿಯು ಹೇಳುವುದರಿಂದ ಅವರಿಗೆ ದುಃಖಾನುಭವವು ಸಿದ್ಧವಾಗುತ್ತದೆ. ಏಕೆಂದರೆ "ತ ಇಹ ವ್ರೀಹಿಯವಾ ಓಷಧಿ ವನಸ್ಪತಿಯಸ್ತಿಲಾ ಮಾಷಾ ಇತಿ ಜಾಯಂತೇ" ಎಂದು ಹೇಳುವುದು ಸರಿಯಲ್ಲ. ವ್ರೀಹ್ಯಾದಿ ಭಾವವನ್ನು ಹೊಂದಿದ ಕರ್ಮಿಗಳು ದುಃಖವನ್ನು ಅನುಭವಿಸುತ್ತಾರೆ ಎಂದು ಹೇಳುವುದಕ್ಕೆ ಪ್ರಮಾಣವಿಲ್ಲ. ತತ್‌ಸ್ವಾಭಾವ್ಯಾಧಿಕರಣದಲ್ಲಿ ಹೇಳಿರುವಂತೆಯೇ ಇಲ್ಲಿಯೂ ಅರ್ಥ ಮಾಡಬೇಕು. ವ್ರೀಹ್ಯಾದಿಗಳಲ್ಲಿ ಪ್ರವೇಶ ಮತ್ತು ಅವುಗಳ ಮೂಲಕ ಗತಿಯನ್ನಷ್ಟೇ ತಿಳಿಯಬೇಕು. ಕರ್ಮಿಗಳಿಗೆ ವ್ರೀಹ್ಯಾದಿ ಶರೀರದಲ್ಲಿ ಅಭಿಮಾನಿತ್ವವಿಲ್ಲದಿರುವುದರಿಂದ ದುಃಖಾದಿಗಳ ಪ್ರಸಂಗವಿರುವುದಿಲ್ಲ.

## ಅಧಿಕರಣ – ೧೯

## ॥ ರೇತೋಽಧಿಕರಣ ॥

### ॥ ಓಂ ರೇತಃ ಸಿಗ್ಯೋಗೋಽಥ ಓಂ ॥

ಕರ್ಮಿಗಳಿಗೆ ಮೊದಲು ರೇತಸ್ಸಿನ ಮೂಲಕ ಪಿತೃಶರೀರ ಪ್ರವೇಶ, ಅನಂತರವೇ ಮಾತೃಶರೀರ ಪ್ರವೇಶವು. ಹೀಗೆಂದೇ ತಿಳಿಯತಕ್ಕದ್ದು. ''ತತೋ ರೇತಸ್ಸಿಚಮೇವಾನುಪ್ರವಿಶತಿ, ಅಥ ಮಾತರಂ, ಅಥ ಪ್ರಸೂತೇ, ಸ ಕರ್ಮ ಕುರುತೇ'' ''ಈಶ ಕ್ಲೃಪ್ತ್ಯೈವ ಪಿತರಂ ಪ್ರವಿಶ್ಯಾಯಾತಿ ಮಾತರಮ್'' ಇತ್ಯಾದಿ ಶ್ರುತಿಗಳು ಇದಕ್ಕೇ ಪ್ರಮಾಣವಾಗಿವೆ.

## ಅಧಿಕರಣ – ೨೦

## ॥ ಯೋನ್ಯಧಿಕರಣ ॥

### ॥ ಓಂ ಯೋನೇಃ ಶರೀರವ್ ಓಂ ॥

ಕರ್ಮಿಯು ಪಿತೃವಿನ ಮೂಲಕ ತಾಯಿಯ ಯೋನಿಯನ್ನು ಪ್ರವೇಶಿಸಿದ ನಂತರವೇ ಶರೀರವನ್ನು ಹೊಂದುತ್ತಾನೆ ಎಂಬುದು ಸಾಮಾನ್ಯ ನಿಯಮ. ಆದರೆ ಕೆಲವು ವಿಶೇಷ ಸಂದರ್ಭಗಳಲ್ಲಿ (ಶುಕಾದಿ ಜೀವರಲ್ಲಿ) ಮಾತೃಪ್ರವೇಶವಿಲ್ಲದೇ ದೇಹಪ್ರಾಪ್ತಿಯು ಕಂಡಿದೆ. ಹೀಗೆ ಕೆಲವು ವಿಶೇಷ ಜೀವರನ್ನು ಹೊರತು ಪಡಿಸಿ ಉಳಿದ ಎಲ್ಲ ಜೀವರಿಗೂ ಮಾತೃಯೋನಿ ದ್ವಾರಾ ಪ್ರವೇಶವು. ಅನಂತರ ಕಲಲ, ಬುದ್ಬುದಾದಿ ಕ್ರಮದಿಂದ ದೇಹ ಪ್ರಾಪ್ತಿಯು. ಗರ್ಭವಾಸದ ದುಃಖವು ಅವಶ್ಯ ಅನುಭಾವ್ಯವು. ಆದ್ದರಿಂದ ವೈರಾಗ್ಯವನ್ನು ಹೊಂದಿ ಭಗವಂತನನ್ನು ಭಜಿಸಬೇಕು ಎಂಬುದಾಗಿ ಸಿದ್ಧಾಂತವು.

**ಅಣುಭಾಷ್ಯ :** ''ಜ್ಞಾನೇನೈವ ಪರಂ ಪದಮ್ । ಯಾತಿ ತಸ್ಮಾತ್ ವಿರಕ್ತಸ್ಸನ್
ಜ್ಞಾನಮೇವ ಸಮಾಶ್ರಯೇತ್ ॥''

ಹದಿನಾರನೆಯ ಅಧಿಕರಣದಿಂದ ಆರಂಭಿಸಿ 20 ನೇ ಅಧಿಕರಣದವರೆಗಿನ

ತಾತ್ಪರ್ಯವನ್ನು "ಶುಭೇಣ ಕರ್ಮಣಾ ಸ್ವರ್ಗಂ" ಇತ್ಯಾದಿಯಾಗಿ ಹೇಳಿರುವ ವಚನದಿಂದ ಉಪಲಕ್ಷಣಯಾ ತಿಳಿಯತಕ್ಕದ್ದು. ಆದಕಾರಣ ಇಲ್ಲಿ ಪ್ರತ್ಯೇಕವಾಗಿ ಹೇಳಿರುವುದಿಲ್ಲ. ಹೇಗೆಂದರೆ 16ನೇ ಅಧಿಕರಣದಲ್ಲಿ ಸ್ವರ್ಗದಿಂದ ವಾಪಸ್ಸು ಬರುವ ಜೀವನಿಗೆ ಧೂಮಾದಿ ಭಾವ ಪ್ರಾಪ್ತಿಯನ್ನು ಪ್ರತಿಪಾದಿಸಲಾಗಿದೆ. 17ನೇ ಅಧಿಕರಣದಲ್ಲಿ ಸ್ವರ್ಗದಿಂದ ಬಂದ ಜೀವನಿಗೆ ಶೀಘ್ರದಲ್ಲಿಯೇ ಗರ್ಭವಾಸಾದಿ ಪ್ರಾಪ್ತಿಯನ್ನು ಸಮರ್ಥಿಸಲಾಗಿದೆ. 18ನೇ ಅಧಿಕರಣದಲ್ಲಿ ಆಗಮನದ ಕಾಲದಲ್ಲಿ ವ್ರೀಹ್ಯಾದಿ ಶರೀರ ಪ್ರವೇಶವನ್ನು ಹೇಳಲಾಗಿದೆ. ಹತ್ತೊಂಬತ್ತನೆಯ ಅಧಿಕರಣದಲ್ಲಿ ಸ್ವರ್ಗದಿಂದ ಆಗಮಿಸಿದ ಜೀವನ ವ್ರೀಹ್ಯಾದಿ ದ್ವಾರಾ ಪಿತೃಶರೀರ ಪ್ರವೇಶವನ್ನು ಸಮರ್ಥಿಸಲಾಗಿದೆ. 20ನೇ ಅಧಿರಕಣದಲ್ಲಿ ಸ್ವರ್ಗದಿಂದ ಬಂದ ಜೀವನು ಪಿತೃವಿನ ಸಕಾಶದಿಂದ ಯೋನಿದ್ವಾರಾ ಮಾತೃಶರೀರ ಪ್ರವೇಶಿಸಿ ತನ್ನ ಶರೀರವನ್ನು ಪಡೆಯುತ್ತಾನೆ ಎಂಬುದನ್ನು ಸಮರ್ಥಿಸಲಾಗಿದೆ.

ಈ ಪ್ರಕಾರವಾಗಿ ಈ ಶ್ಲೋಕದ ಪಾದತ್ರಯದಿಂದ 3ನೇ ಅಧ್ಯಾಯದ ಪ್ರಥಮ ಪಾದದ ತಾತ್ಪರ್ಯವನ್ನು ಸಂಗ್ರಹಿಸಿರುವ ಶ್ರೀಮದಾಚಾರ್ಯರು, ಶ್ಲೋಕದ ನಾಲ್ಕನೆಯ ಪಾದದಿಂದ ಪರಿಶೇಷಸಿದ್ಧವಾದ ಅರ್ಥವನ್ನು ಹೇಳುತ್ತಾರೆ – "ಜ್ಞಾನೇನೈವ ಪರಂ ಪದಮ್‌ಯಾತಿ" ಎಂಬುದಾಗಿ ಏವ ಶಬ್ದದಿಂದ ಕಾಮ್ಯ ಕರ್ಮಾದಿಗಳು ಪರಮ ಪದವಿಯಾದ ಮೋಕ್ಷಕ್ಕೆ ಅನುಪಯುಕ್ತವು ಎಂಬುದನ್ನು ಸೂಚಿಸಿದ್ದಾರೆ. ಹಾಗೂ ಅಪರೋಕ್ಷ ಜ್ಞಾನದಿಂದಲೇ ಶ್ರೇಷ್ಠವಾದ ಮೋಕ್ಷ ಪದವಿಯ ಪ್ರಾಪ್ತಿ ಎಂಬುದನ್ನು ಸಮರ್ಥಿಸಿದ್ದಾರೆ.

ಪಾದಾರ್ಥವನ್ನು ಉಪಸಂಹಾರ ಮಾಡುತ್ತಾರೆ – "ತಸ್ಮಾದ್ವಿರಕ್ತಸ್ಸನ್ ಜ್ಞಾನಮೇವ ಸಮಾಶ್ರಯೇತ್"

ಯಾವ ಕಾರಣದಿಂದ ಕಾಮ್ಯಕರ್ಮಾದಿಗಳಿಂದ ಸ್ವರ್ಗಾದಿ ಪ್ರಾಪ್ತಿಯೋ, ಜ್ಞಾನದಿಂದಲೇ ನಿತ್ಯಪುರುಷಾರ್ಥವಾದ ಮೋಕ್ಷಪ್ರಾಪ್ತಿಯೋ, ಆದ್ದರಿಂದ ಮೋಕ್ಷ ದಿಂದ ಇತರವಾದ ಪುರುಷಾರ್ಥಗಳಲ್ಲಿ ವಿರಕ್ತಿಯನ್ನು ಹೊಂದಿ, ಮೋಕ್ಷಕ್ಕಾಗಿ

ಜ್ಞಾನವನ್ನೇ ಚೆನ್ನಾಗಿ ಆಶ್ರಯಿಸಬೇಕು ಎಂಬುದೇ ತೃತೀಯಾಧ್ಯಾಯ ಪ್ರಥಮ ಪಾದದ ತಾತ್ಪರ್ಯವು. ಇದೇ ಸಿದ್ಧಾಂತವು.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಮೂರನೆಯ ಅಧ್ಯಾಯದ ಮೊದಲನೆಯ ಪಾದವು ಮುಕ್ತಾಯವಾಯಿತು ॥**



# ಮೂರನೆಯ ಅಧ್ಯಾಯದ ಎರಡನೆಯ ಪಾದ

ಸರ್ವಾವಸ್ಥಾಪ್ರೇರಕಶ್ಚ ಸರ್ವರೂಪೇಷ್ವಭೇದವಾನ್॥೨॥
ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ।
ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್ ॥೩॥

ಹಿಂದಿನ ಪಾದದಲ್ಲಿ ವೈರಾಗ್ಯದ ಅವಶ್ಯಕತೆಯನ್ನು ನಿರೂಪಿಸಲಾಯಿತು. ಈಗ ಪ್ರಸಂಗ ಬಂದಿದ್ದರಿಂದ ಭಕ್ತಿಯ ನಿರೂಪಣೆ ಈ ಪಾದದಲ್ಲಿ ಮಾಡುತ್ತಾರೆ.

'ಸರ್ವಾವಸ್ಥಾಪ್ರೇರಕಶ್ಚ' ಎಂಬ ವಚನದಿಂದ ಮೊದಲನೆಯ ಅಧಿಕರಣ ದಿಂದ ಏಳನೆಯ ಅಧಿಕರಣದವರೆಗಿನ ತಾತ್ಪರ್ಯವನ್ನು ಸಂಗ್ರಹಿಸಿದ್ದಾರೆ.

### ಅಧಿರಕಣ – ೧
### ॥ ಸಂಧ್ಯಾಧಿಕರಣ ॥
### ॥ ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ॥

ಜಾಗ್ರತ್, ಸುಷುಪ್ತಿಗಳ ನಡುವಿನ ಸ್ವಪ್ನಕಾಲದಲ್ಲಿ ಸ್ವಾಪ್ನ ಪದಾರ್ಥಗಳ ಸೃಷ್ಟಿ ಹಾಗೂ ಅನಂತರದಲ್ಲಿಯೇ ಅವುಗಳ ನಿರೋಧವೂ ಈಶ್ವರನಿಂದಲೇ ಮಾಡ ಲ್ಪಡುತ್ತದೆ. 'ಹಿ' ಎಂಬ ಶಬ್ದವು ಇದಕ್ಕೆ ಶ್ರುತಿಯ ಪ್ರಾಮಾಣ್ಯವನ್ನು ಸೂಚಿಸುತ್ತದೆ.

ಸ್ವಪ್ನವು ಅಸತ್ಯವಾದುದರಿಂದ ಅದು ಈಶ್ವರಾಧೀನವೆಂಬುದು ಅಯುಕ್ತವು ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಸ್ವಪ್ನವು ಸತ್ಯವೇ ಆಗಿದೆ. ಸತ್ಯವಾದುದ ರಿಂದ ಈಶ್ವರಾಧೀನವೆಂಬುದು ಯುಕ್ತವೇ ಆಗಿದೆ. ತತ್ಕಾಲದಲ್ಲಿಯೇ ಸ್ವಪ್ನದ ಸೃಷ್ಟಿ

– ನಿರೋಧಗಳು ಅಂಗೀಕರಿಸಲ್ಪಟ್ಟಿವೆ. ಈ ವಿಷಯದಲ್ಲಿ ಪ್ರಮಾಣದ ಅಭಾವ ವಿಲ್ಲ. "ಅಥ ರಥಾನ್ ರಥಯೋಗಾನ್ ಪಥಃ ಸೃಜತೇ" "ಯ ಯೇಷು ಸುಪ್ತೇಷು ಜಾಗರ್ತಿ ಕಾಮಂಕಾಮಂ ಪುರುಷೋ ನಿರ್ಮಿಮಾಣ" ಹೀಗೆ ಶ್ರುತಿಗಳು ಹೇಳುತ್ತವೆ. "ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ। ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತೀರ್ಯತೇ ॥" ಹೀಗೆಂದು ಸ್ಮೃತಿಯು ಸ್ವಪ್ನವನ್ನು ಕುರಿತು ಹೇಳುತ್ತದೆ. "ಜೀವನಲ್ಲಿರುವ ಮನೋಗತವಾದ ಸಂಸ್ಕಾರ ಗಳನ್ನು ಬಳಸಿಕೊಂಡು ಅವುಗಳನ್ನು ಪರಮೇಶ್ವರನು ಸ್ವಪ್ನರೂಪದಲ್ಲಿ ಜೀವನಿಗೆ ತೋರಿಸುತ್ತಾನೆ" ಎಂಬುದಾಗಿ ಹೇಳುವ ಈ ಸ್ಮೃತಿಯು ಸ್ವಪ್ನ ಸತ್ಯತ್ವವನ್ನು ಪರಮೇಶ್ವರನೇ ಸ್ವಪ್ನದ ಸೃಷ್ಟಿಕರ್ತನೆಂಬುದನ್ನೂ ದೃಢೀಕರಿಸುತ್ತದೆ.

## ಅಧಿಕರಣ – ೨

## ॥ ಪರಾಭಿಧ್ಯಾನಾಧಿಕರಣ ॥

## ॥ ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ ॥

ಸ್ವಪ್ನವು ಈಶ್ವರನ ಇಚ್ಛೆಯಿಂದಲೇ ತಿರೋಧಾನವಾಗುತ್ತದೆ ಹೊರತು ಎಚ್ಚರವಾಗುವುದರಿಂದಲ್ಲ. ಏಕೆಂದರೆ ಜೀವನ ಬಂಧ ಮೋಕ್ಷಗಳೆರಡೂ ಪರಮೇಶ್ವರನ ಇಚ್ಛೆಯಿಂದಲೇ ಸಂಭವಿಸುತ್ತವೆ.

ಇಲ್ಲಿ ಸ್ವಪ್ನ ತಿರೋಭಾವವು ಈಶ್ವರನ ಇಚ್ಛಾಧೀನವಲ್ಲ. ಅದು ಜೀವನ ಬಾಹ್ಯ ಜ್ಞಾನಾಧೀನ. ಏಕೆಂದರೆ ಬಾಹ್ಯಜ್ಞಾನದ ನಿಮಿತ್ತದಿಂದಲೇ ಸ್ವಪ್ನವು ಕಾಣಿಸಿ ಕೊಳ್ಳುತ್ತದೆ. ಹೀಗೆಂದು ಪೂರ್ವಪಕ್ಷ. ಇದು ಅಯುಕ್ತವು. ಸ್ವಪ್ನ ತಿರೋಧಾನವೂ ಈಶ್ವರಾಧಿನವೇ ಎಂಬುದು ಸಿದ್ಧಾಂತ. "ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ" ಇತ್ಯಾದಿ ಪ್ರಮಾಣಗಳು ಜೀವನನ್ನು ಸಂಸಾರ ಪಾಶದಲ್ಲಿ ಸಿಲುಕಿಸು ವವನು ಹಾಗೂ ಅದರಿಂದ ಬಿಡುಗಡೆಗೊಳಿಸುವನೂ ಈಶ್ವರನೇ ಆಗಿರುವನು. ಅಜ್ಞಾನದಿಂದ ಬಂಧ, ಜ್ಞಾನದಿಂದ ಮೋಕ್ಷ ಎಂದು ತೋರಿದರೂ, ಜ್ಞಾನಾಜ್ಞಾನ ಗಳೂ ಈಶ್ವರಾಧೀನವೇ ಆಗಿವೆ.

"ಸ್ವಪ್ನಾದಿಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ ।
ತದಿಚ್ಛಯಾ ಯತೋ ಹ್ಯಸ್ಯ ಬಂಧಮೋಕ್ಷಾ ಪ್ರತಿಷ್ಠಿತೌ ॥"

ಎಂಬ ಕೂರ್ಮಪುರಾಣದ ವಚನವೂ ಇದಕ್ಕೆ ಪ್ರಮಾಣವಾಗಿದೆ.

## ಅಧಿಕರಣ – ೩

## ॥ ದೇಹಯೋಗಾಧಿಕರಣ ॥

## ॥ ಓಂ ದೇಹಯೋಗಾದ್ವಾಸೋಽಪಿ ಓಂ ॥

ಜೀವನಿಗೆ ದೇಹಾಭಿಮಾನತ್ವದ ಫಲವಾಗಿ ಶರೀರದಲ್ಲಿ ಅವಸ್ಥಿತಿಯನ್ನು ಒಪ್ಪಿದರೂ ಜಾಗ್ರದ್ ಅವಸ್ಥೆಯೂ ಕೂಡ ಈಶ್ವರಾಧಿನವೇ ಆಗಿರುವುದು. "ಸ ಏವ ಜಾಗರಿತೇ ಸ್ಥಾಪಯತಿ ಸ ಸ್ವಪ್ನೇ ಸ ಪ್ರಭುಃ"

ಇತ್ಯಾದಿ ಶ್ರುತಿಯು ಜಾಗರಣಾವಸ್ಥೆಯೂ ಈಶ್ವರಾಧಿನವೇ ಹೊರತು ಕಾಲಾಧೀನವಲ್ಲ ಎಂಬುದನ್ನು ಪ್ರಮಾಣೀಕರಿಸುತ್ತದೆ.

## ಅಧಿಕರಣ – ೪

## ॥ ತದಭಾವಾಧಿಕರಣ ॥

## ॥ ಓಂ ತದಭಾವೋ ನಾಡೀಷು ತತ್ ಶ್ರುತೇರಾತ್ಮನಿ ಹ ಓಂ ॥

ತದಭಾವಃ ಎಂದರೆ ಜಾಗ್ರತ್ ಮತ್ತು ಸ್ವಪ್ನಗಳಿಲ್ಲದ ಸ್ಥಿತಿ, ಅಂದರೆ ಸುಷುಪ್ತಿ ಎಂದರ್ಥ. ನಾಡಿಗಳಲ್ಲಿ ಪರಮಾತ್ಮನ ಅವಸ್ಥಿತಿಯೇ ಸುಷುಪ್ತಿ. ಹೀಗೆಂದು ಶ್ರುತಿಗಳಲ್ಲಿ ಪ್ರಸಿದ್ಧವು. ಜೀವನು ಸುಷುಪ್ತಿಯ ಅವಸ್ಥೆಯಲ್ಲಿ ನಾಡಿಗಳಲ್ಲಿ ಪರಮಾತ್ಮನೊಂದಿಗೆ ಇರುತ್ತಾನೆ. ಆದ್ದರಿಂದ ಆಗ ಜೀವನಿಗೆ ದುಃಖ ಪ್ರಾಪ್ತಿಯೇ ಇರುವುದಿಲ್ಲ.

"ಆಸು ತದಾ ನಾಡೀಷು ಸುಪ್ತೋ ಭವತಿ", "ಸತಾ ಸೌಮ್ಯ ತದಾ ಸಂಪನ್ನೋ ಭವತಿ" ಇತ್ಯಾದಿ ಶ್ರುತಿಗಳು ಇದಕ್ಕೆ ಪ್ರಮಾಣವಾಗಿವೆ.

## ಅಧಿಕರಣ – ೫

## ॥ ಪ್ರಭೋಧಾಧಿಕರಣ ॥

## ॥ ಓಂ ಅತಃ ಪ್ರಬೋಧೋಽಸ್ಮಾತ್ ಓಂ ॥

ಜೀವನ ಸುಪ್ತಾವಸ್ಥೆಗೆ ಪರಮಾತ್ಮನೇ ಕಾರಣನು. ಸುಪ್ತಿಯಲ್ಲಿ ಪರಮಾತ್ಮನ ಅವಸ್ಥಿತಿ ನಿಮಿತ್ತವಾಗಿಯೇ ಜೀವನು ಆನಂದವನ್ನು ಅನುಭವಿಸುತ್ತಾನೆ. ಅವನಿಗೆ ದುಃಖವೇ ಇರುವುದಿಲ್ಲ. ಹೀಗೆ ಪರಮಾತ್ಮನಿಂದಲೇ ಜೀವನಿಗೆ ಸುಪ್ತಾವಸ್ಥೆಯು. ಅದೇ ಪರಮಾತ್ಮನಿಂದಲೇ ಜೀವನು ಸುಪ್ತಿಯಿಂದ ಎಚ್ಚರಗೊಳ್ಳುತ್ತಾನೆ. ಪರಮಾತ್ಮನ ಇಚ್ಛೆಯಿಲ್ಲದಿದ್ದರೆ ಭೇರಿತಾಡನಾದಿಗಳಿಂದಲೂ ಜೀವನನ್ನು ಸುಪ್ತಾವಸ್ಥೆಯಿಂದ ಎಚ್ಚರಗೊಳಿಸಲು ಸಾಧ್ಯವಿಲ್ಲ. ಜೀವನನ್ನು ಜಾಗ್ರತ್ ಅವಸ್ಥೆಗೆ ಮತ್ತೆ ತರುವವನು ಪರಮಾತ್ಮನೇ ಎಂದು ತಾತ್ಪರ್ಯ. ''ಏಷ ಏವ ಸುಪ್ತಂ ಪ್ರಬೋಧಯತಿ, ಏತಸ್ಮಾತ್ ಜೀವ ಉತ್ತಿಷ್ಠತಿ'' ಇತ್ಯಾದಿ ಶ್ರುತಿಗಳು ಇದಕ್ಕೆ ಪ್ರಮಾಣವಾಗಿವೆ.

## ಅಧಿಕರಣ – ೬

## ॥ ಕರ್ಮಾನುಸ್ಮೃತ್ಯಧಿಕರಣ ॥

## ॥ ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ ॥

ಪರಮಾತ್ಮನೇ ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಎಲ್ಲ ಅವಸ್ಥೆಗಳಿಗೂ ಪ್ರೇರಕನು. ಏಕೆಂದರೆ ಜೀವನ ಎಲ್ಲ ವ್ಯಾಪಾರಕ್ಕೂ ಭಗವದಧೀನತ್ವವನ್ನು ಪ್ರತಿಪಾದಿಸುವ ಶ್ರುತಿಗಳು ಇವೆ. ''ಏಷ ಹ್ಯೇವ ಸಾಧುಕರ್ಮ ಕಾರಯತಿ'', ''ಪ್ರದರ್ಶಸ್ತು ಸರ್ವೇಷಾಂ'', ''ಏಷ ಸ್ವಪ್ನಾನ್ ದರ್ಶಯತಿ'' ಇತ್ಯಾದಿ ಶ್ರುತಿಗಳು ಪರಮಾತ್ಮನಿಗೇ ಸ್ವಪ್ನಾದಿ ಕಾರಣತ್ವವನ್ನು ಪ್ರತಿಪಾದಿಸುತ್ತವೆ. ''ಆತ್ಮಾನಮೇವ ಲೋಕಮುಪಾಸಿತ'' ಇತ್ಯಾದಿ ಶ್ರುತಿಯು ಪರಮಾತ್ಮನನ್ನೇ ಉಪಾಸನೆ ಮಾಡತಕ್ಕದ್ದು ಎಂದು ವಿಧಿಸುತ್ತದೆ. ಅನ್ಯರು ಪ್ರೇರಕರಾಗಿದ್ದ ಪಕ್ಷದಲ್ಲಿ ಈ ಶ್ರುತಿಯಲ್ಲಿ ಏವಕಾರವನ್ನು ಬಳಸುತ್ತಿರಲಿಲ್ಲ. ಈಶ್ವರನೇ ಸ್ವಪ್ನಾದಿ ಸರ್ವಾವಸ್ಥೆಗೂ ಸರ್ವದಾ ಸರ್ವತ್ರ ಎಲ್ಲ ಜೀವರಿಗೂ ಸ್ವಪ್ನಾದಿ ಸರ್ವಾವಸ್ಥೆಗೂ ಸರ್ವದಾ ಸರ್ವತ್ರ ಎಲ್ಲ ಜೀವರಿಗೂ ಪ್ರೇರಕನು ಎಂಬುದಾಗಿ ಹೇಳುವ ಸಂವಾದಿಯಾದ ಸ್ಮೃತಿಯೂ ಇದೆ.

ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು ।
ಪರಮಃ ಪುರುಷೋ ವಿಷ್ಣುಃ ತತೋಽನ್ಯೋ ನಾಸ್ತಿ ಕಶ್ಚನ ॥"

## ಅಧಿಕರಣ – ೭

## ॥ ಸಂಪತ್ಯಧಿಕರಣ ॥

## ॥ ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ ॥

ಜಾಗ್ರದ್, ಸ್ವಪ್ನ ಹಾಗೂ ಸುಷುಪ್ತಿ ಈ ಮೂರು ಅವಸ್ಥೆಗಳಿಗಿಂತಲೂ ವಿಭಿನ್ನವಾದ ಮೂರ್ಛಾವಸ್ಥೆಗೂ ಪರಮಾತ್ಮನೇ ಪ್ರೇರಕನು.

ಜೀವನ ಹೃದಯದಲ್ಲಿರುವ ಪ್ರಾಜ್ಞನಾಮಕ ಪರಮಾತ್ಮನ ಅರ್ಧಪ್ರವೇಶವಿದ್ದಾಗ ಮೂರ್ಛಾವಸ್ಥೆಯು. ಇದನ್ನು ಹೇಗೆ ಹೇಳುತ್ತೀರಿ ಎಂದರೆ "ಪರಿಶೇಷಾತ್" ಪರಿಶೇಷಾನುಮಾನದಿಂದ ಎಂದರ್ಥ.

ಹೃದಯದಲ್ಲಿರುವ ಶ್ರೀಹರಿಯಿಂದ ದೂರಸ್ಥತ್ವ, ಸಮೀಪಸ್ಥತ್ವ ಸಮಪ್ರವೇಶ ಹಾಗೂ ಅರ್ಧಪ್ರವೇಶಗಳಲ್ಲಿ ಮೊದಲಿನ ಮೂರು ಅವಸ್ಥಿತಿಗಳು ಜಾಗ್ರಾದಾದಿ ಅವಸ್ಥಾತ್ರಯ ಧರ್ಮತ್ವೇನ ಹೇಳಿರುವುದರಿಂದ ಅರ್ಧಪ್ರವೇಶವೇ ಪರಿಶೇಷ ಪ್ರಮಾಣದಿಂದ ಸಿದ್ಧವಾಗುವುದು.

"ಹೃದಯಸ್ಥಾತ್ ಪರಾತ್ ಜೀವೋ ದೂರಸ್ಥೋ ಜಾಗ್ರದೇಷ್ಯತಿ ।
ಸಮೀಪಸ್ಥಃ ತಥಾ ಸ್ವಪ್ನಂ ಸ್ವಪಿತ್ಯಸ್ಮಿನ್ ಲಯಂ ವ್ರಜನ್ ॥
ಯತ ಏವಂ ತ್ರಯೋಽವಸ್ಥಾಃ ಮೋಹಸ್ತು ಪರಿಶೇಷತಃ ॥
ಅರ್ಧಪ್ರಾಪ್ತಿರಿತಿ ಜ್ಞೇಯೋ ದುಃಖ ಮಾತ್ರ ಪ್ರತಿಸ್ಮೃತೇಃ ॥"

ಹೀಗೆ ವರಾಹ ಪುರಾಣದಲ್ಲಿ ಮೂರ್ಛಾವಸ್ಥೆಯ ಬಗ್ಗೆ ಹೇಳಿದೆ.

ಆದಕಾರಣ ಹೃದಯಸ್ಥನಾದ ಶ್ರೀಹರಿಯ ಅರ್ಧಪ್ರವೇಶದ ನಿಮಿತ್ತದಿಂದಲೇ ಮೂರ್ಛಾವಸ್ಥೆಯು ಎಂದು ಸಿದ್ಧಾಂತ.

ಅಣುಭಾಷ್ಯದಲ್ಲಿ ಮೇಲಿನ ಎಲ್ಲ ಏಳು ಅಧಿಕರಣಗಳ ತಾತ್ಪರ್ಯವನ್ನು

ಒಟ್ಟಿಗೇ ಸಂಗ್ರಹಿಸಿದ್ದಾರೆ. ''ಸರ್ವಾವಸ್ಥಾಪ್ರೇರಕಶ್ಚ'' ಎಂಬ ವಚನದಿಂದ ಮುಂದೆ ಹೇಳಲಿರುವ ಪರಮೇಶ್ವರಃ ಎಂಬುದನ್ನು ಇಲ್ಲಿಯೂ ಅನ್ವಯಿಸಿಕೊಳ್ಳಬೇಕು. 'ಚ' ಶಬ್ದವು ನಿರ್ವತಕತ್ವವನ್ನು ಸೂಚಿಸುತ್ತದೆ. ಪ್ರಥಮಾಧಿಕರಣದಲ್ಲಿ ಸ್ವಪ್ನಾವಸ್ಥೆಗೆ ಭಗವದಧೀನತ್ವವನ್ನು ಸಮರ್ಥಿಸಲಾಗಿದೆ. ಎರಡನೆಯದಲ್ಲಿ ಸ್ವಪ್ನ ನಿರ್ವಕತ್ವವೂ ಭಗವಂತನಿಂದಲೇ ಎಂಬುದನ್ನು ಹೇಳಲಾಗಿದೆ. ಮೂರನೆಯ ಅಧಿಕರಣದಲ್ಲಿ ಜಾಗ್ರದವಸ್ಥಾ ಪ್ರವರ್ತಕತ್ವನನ್ನು ಹೇಳಲಾಗಿದೆ. ನಾಲ್ಕನೆಯದರಲ್ಲಿ ಸುಷುಪ್ತಿಯ ಪ್ರಾಪ್ತಿಯನ್ನು ಹೇಳುವ ಮೂಲಕ ಸುಪ್ತಾವಸ್ಥೆಯ ಪ್ರೇರಕತ್ವವನ್ನು ಹೇಳಲಾಗಿದೆ. ಐದನೆಯದರಲ್ಲಿ ಸುಪ್ತಬೋಧಕತ್ವವನ್ನು ಹೇಳಿದೆ. ಆರನೆಯದರಲ್ಲಿ ಸಾರ್ವಕಾಲಿಕ ಸರ್ವಾವಸ್ಥಾಪ್ರೇರಕತ್ವವನ್ನು ನಿರೂಪಿಸಲಾಗಿದೆ. ಸಪ್ತಮಾಧಿಕರಣದಲ್ಲಿ ಮೋಹಾವಸ್ಥಾ ಪ್ರೇರಕತ್ವದ ಸಮರ್ಥನೆಯು. ಹೀಗೆ ಎಲ್ಲವೂ ''ಸರ್ವಾವಸ್ಥಾ ಪ್ರೇರಕಶ್ಚ'' ಎಂಬುದರಿಂದ ಸ್ಪಷ್ಟವಾಗುತ್ತದೆ.

''ಸರ್ವರೂಪೇಷು ಅಭೇದವಾನ್'' ಎಂಬ ಅಣುಭಾಷ್ಯದ ವಚನದಿಂದ ಎಂಟನೆಯ ಅಧಿಕರಣದ ತಾತ್ಪರ್ಯವನ್ನು ಸಂಗ್ರಹಿಸಲಾಗಿದೆ.

## ಅಧಿರಕಣ – ೮

## ॥ನ ಸ್ಥಾನತೋಽಪ್ಯಧಿಕರಣ॥

## ॥ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ॥

ಬೇರೆ ಬೇರೆ ಸ್ಥಾನಗಳಲ್ಲಿದ್ದರೂ ಪರಮಾತ್ಮನಿಗೆ ಸ್ಥಾನ ಭೇದ ನಿಮಿತ್ತವಾದ ಭಿನ್ನರೂಪತೆಯಿಲ್ಲ. ಏಕೆಂದರೆ ಎಲ್ಲ ಸ್ಥಳಗಳಲ್ಲಿಯೂ ಎಲ್ಲ ಭೂತಗಳಲ್ಲಿಯೂ ಇರುವ ಪರಮಾತ್ಮನ ರೂಪ ರೂಪಗಳಲ್ಲಿ ಭೇದವಿಲ್ಲ ಎಂಬುದಾಗಿ ''ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ'' ಇತ್ಯಾದಿ ಶ್ರುತಿಗಳು ಸಾರುತ್ತಿವೆ. ಕಣ್ಣು ಮೊದಲಾದವುಗಳಲ್ಲಿ ಸ್ಥಿತನಾದ ವಿಶ್ವಾದಿರೂಪಿಯಾದ ಶ್ರೀಹರಿಯು ವಿಭಿನ್ನ ಸ್ಥಾನದಲ್ಲಿದ್ದರೂ ಅಭಿನ್ನವೇ ಆಗಿರುವನು ಎಂದು ತಾತ್ಪರ್ಯ.

**ಅಣುಭಾಷ್ಯ:** ''ಸರ್ವರೂಪೇಷ್ವಭೇದವಾನ್''

ಪರಮೇಶ್ವರಃ ಎಂಬುದನ್ನು ಇಲ್ಲಿಯೂ ಸೇರಿಸಿಕೊಳ್ಳಬೇಕು. ಜಾಗ್ರದಾದಿ ಅವಸ್ಥಾಪ್ರೇರಕವಾದ ಪರಮಾತ್ಮನ ವಿಶ್ವಾದಿ ರುಪಗಳಲ್ಲಿ ಯಾವುದೇ ಭೇದವಿರುವುದಿಲ್ಲ. ಶರೀರದ ಕಣ್ಣು, ಗಂಟಲು, ಹೃದಯ ಇವೇ ಮೊದಲಾದ ವಿಭಿನ್ನವಾದ ಸ್ಥಾನದಲ್ಲಿದ್ದರೂ ಪರಮಾತ್ಮನ ರೂಪ ರೂಪಗಳಿಗೆ ಭೇದವಿಲ್ಲ ಎಂದರ್ಥ.

''ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ''

ಎಂಬ ವಾಕ್ಯದಿಂದ ಒಂಭತ್ತನೆಯ ಅಧಿಕರಣದ ತಾತ್ಪರ್ಯವನ್ನು ಸಂಗ್ರಹಿಸುತ್ತಾರೆ.

## ಅಧಿಕರಣ – ೯

## ॥ ಅರೂಪಾಧಿಕರಣ ॥

### ॥ ಓಂ ಅರೂಪವದೇವ ಹಿ ತತ್ ಪ್ರಧಾನತ್ವಾತ್ ಓಂ ॥

ವ್ಯಸ್ತವೂ ಸಮಸ್ತವೂ ಆದ ಬ್ರಹ್ಮನ ಎಲ್ಲ ರೂಪಗಳೂ ಪ್ರಾಕೃತವಾದ ಭೌತಿಕ ರೂಪದಂತಲ್ಲ. ಏಕೆಂದರೆ ಬ್ರಹ್ಮನು ಪ್ರಕೃತ್ಯಾದಿಗಳಿಗಿಂತ ಅತ್ಯಂತ ವಿಲಕ್ಷಣನು ಹಾಗೂ ಉತ್ತಮನು. ಏವ ಶಬ್ದದಿಂದ ಜ್ಞಾನಾನಂದಾತ್ಮಕ ರೂಪವತ್ವನ್ನು ಅಂಗೀಕರಿಸುತ್ತಾರೆ. 'ಹಿ' ಶಬ್ದದಿಂದ ಶ್ರುತ್ಯಾದಿಗಳಲ್ಲಿ ಪ್ರಸಿದ್ಧವು ಎಂದು ಹೇಳುತ್ತಾರೆ. ''ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ'' ಇತ್ಯಾದಿ ಶ್ರುತಿಗಳಿಗೆ ವಿರೋಧ ಬರುವುದಿಲ್ಲ. ಶ್ರುತಿಯು ಹೇಳುವುದು ಅಪ್ರಾಕೃತ ರೂಪಾದಿಗಳನ್ನೇ ಹೊರತು ಪ್ರಾಕೃತವಾದ ಭೌತಿಕ ರೂಪಾದಿಗಳನ್ನಲ್ಲ. ಈ ದೃಷ್ಟಿಯಿಂದ ಪರಮಾತ್ಮನು ರೂಪರಹಿತನೇ ಆಗಿರುವನು. ಅಂದರೆ ಅಪ್ರಾಕೃತಸ್ವರೂಪನು ಎಂದರ್ಥ.

''ಆನಂದರೂಪಮಮೃತಂ ಯದ್ವಿಭಾತಿ'' ಇತ್ಯಾದಿ ಶ್ರುತಿಯೂ, ''ಶುದ್ಧ ಸ್ಫಟಿಕಸಂಕಾಶಮ್'' ಇತ್ಯಾದಿ ಸ್ಮೃತಿಯು ಇದೇ ಸಿದ್ಧಾಂತಕ್ಕೆ ಪ್ರಮಾಣವಾಗಿವೆ.

**ಅಣುಭಾಷ್ಯ :** ''ಪರಮೇಶ್ವರಃ''

ಪರಮಾ ಎಂದರೆ ಎಲ್ಲರಿಗಿಂತ ಉತ್ತಮ ಎಂದರ್ಥ. ಅಥವಾ ''ಪರಾ

ಚ ಸಾ ಮಾ ಚ''. ''ಪರಮಾ'' ಎಂದರೆ ಪ್ರಕೃತಿಯು. ಪರಮೇಶ್ವರಃ ಎಂದರೆ ಅವಳಿಗೂ ಸ್ವಾಮಿ (ತಸ್ಯಾಃ ಈಶ್ವರಃ) ಎಂದರ್ಥ. ಪ್ರಕೃತ್ಯಾದಿ ಪ್ರೇರಕತ್ವ ರೂಪದಿಂದ ಪ್ರಕೃತಿಗಿಂತ ಉತ್ತಮನು ಹಾಗೂ ವಿಲಕ್ಷಣನು. ಆದ್ದರಿಂದ ಪ್ರಾಕೃತಾದಿ ರೂಪರಹಿತನು ಎಂದು ತಾತ್ಪರ್ಯ.

## ಅಧಿಕರಣ – ೧೦

## ।। ಉಪಮಾಧಿಕರಣ।।

### ।।ಓಂ ಅತ ಏವ ಚೋಪಮಾ ಸೂರ್ಯಕಾದಿವಾತ್ ಓಂ।।

'ನ ಭೇದಾದಿತಿ ಚೇನ್ನ' ಎಂಬ ಸೂತ್ರದ ಮುಂದುವರಿದ ಭಾಗ. ಈ ಸೂತ್ರವನ್ನು ಅನ್ವಯಮಾಡಿಕೊಳ್ಳಬೇಕು. ಸೂರ್ಯನಿಗೂ ಸೂರ್ಯನ ಪ್ರತಿಬಿಂಬಕ್ಕೂ ಹೇಗೆ ಐಕ್ಯವಿಲ್ಲವೋ ಹಾಗೆಯೇ ಭಗವಂತನಿಗೂ ಅವನ ಭಿನ್ನಾಂಶವಾದ ಜೀವನಿಗೂ ಅಭೇದವಿಲ್ಲ, ಭೇದವೇ ಪ್ರಾಮಾಣಿಕವಾಗಿದೆ. ಜೀವನು ಭಗವಂತನ ಅಂಶ ಎಂಬ ಕಾರಣದಿಂದಲೇ ಭೇದವು ಸಿದ್ಧವಾಗುತ್ತದೆ. ಸೂರ್ಯನ ಪ್ರತಿಬಿಂಬವು ಸೂರ್ಯನ ಅಂಶವಾಗಿದ್ದರೂ ಹೇಗೆ ವಿಭಿನ್ನವೋ ಹಾಗೆ. ಜೀವನು ಪರಮಾತ್ಮನ ಪ್ರತಿಬಿಂಬನಾದ್ದರಿಂದ ಪರಮಾತ್ಮನಿಂದ ಭಿನ್ನವೇ ಆಗಿರುವನು ಎಂದು ಸಿದ್ಧಾಂತ.

**ಅಣುಭಾಷ್ಯ :**

ಸಮನ್ವಯಾಧ್ಯಾಯದಲ್ಲಿಯೇ ''ಅನ್ಯಶ್ಚ ಜೀವತಃ'' ಎಂಬುದಾಗಿ ಈ ಅಧಿಕರಣದ ತಾತ್ಪರ್ಯವನ್ನು ಹೇಳಿರುವುದರಿಂದ ಇಲ್ಲಿ ಪುನಃ ಪ್ರತ್ಯೇಕವಾಗಿ ಈ ಅಧಿಕರಣದ ಸಾರಾಂಶವನ್ನು ಸಂಗ್ರಹಿಸಿಲ್ಲ ಎಂದು ತಿಳಿಯತಕ್ಕದ್ದು.

## ಅಧಿಕರಣ – ೧೧

## ।। ಅಂಬುವದಧಿಕರಣ ।।

### ।। ಓಂ ಅಂಬುವದಗ್ರಹಣಾತ್ತು ನ ತಥಾತ್ವಮ್ ಓಂ ।।

ಸ್ನೇಹಾತ್ಮಕವಾದ ಅಂಬುಪದದಿಂದ ಇಲ್ಲಿ ಮಾನಸಸ್ನೇಹವನ್ನು ಗ್ರಹಿಸಬೇಕು. ಗ್ರಹಣ ಎಂಬ ಪದದಿಂದ ಜ್ಞಾನವನ್ನು ತೆಗೆದುಕೊಳ್ಳಬೇಕು. ಅಂದರೆ ಸ್ನೇಹಯುಕ್ತವಾದ ಜ್ಞಾನದ ಅಂದರೆ ಭಕ್ತಿಯ ಅಭಾವದಿಂದಾಗಿ ಜ್ಞಾನಾನಂದಾದಿ ಭಗವತ್ ಸಾದೃಶ್ಯವು ಅಂದರೆ ಜೀವನ ಸ್ವರೂಪಾವಿರ್ಭಾವವು ಪೂರ್ಣವಾಗಿ ಅಭಿವ್ಯಕ್ತವಾಗುವುದಿಲ್ಲ. ಭಕ್ತಿಯಿಂದಲೇ ಅದು ಸಾಧ್ಯವು. ಭಕ್ತಿಯಿಂದ ಪ್ರಸನ್ನನಾದ ಭಗವಂತನು ಜೀವನ ಸ್ವರೂಪಾನಂದವನ್ನು ಅಭಿವ್ಯಕ್ತಿಗೊಳಿಸಿ ಮೋಕ್ಷಾನಂದವನ್ನು ಅನುಗ್ರಹಿಸುತ್ತಾನೆ ಎಂದು ಸಿದ್ಧಾಂತವು. ''ಯಮೇವೈಷ ವೃಣುತೇ ತೇನ ಲಭ್ಯಃ, ತಸ್ಯೈಷ ಆತ್ಮಾ ವಿವೃಣತೇ ತನೂಂ ಸ್ವಾಂ'' ಹೀಗೆ ಶ್ರುತಿಯಿದೆ.

''ಮಹತ್ವಬುದ್ಧಿರ್ಭಕ್ತಿಸ್ತು ಸ್ನೇಹಪೂರ್ವಾಽಭಿದೀಯತೇ ।
ತಯೈವ ವ್ಯಜ್ಯತೇ ಸಮ್ಯಕ್ ಜೀವರೂಪಂ ಸುಖಾದಿಕಮ್ ॥''

ಎಂಬ ಸ್ಮೃತಿಯೂ (ಪದ್ಮಪುರಾಣವಚನ) ಇದನ್ನೇ ಹೇಳುತ್ತದೆ.

## ಅಧಿಕರಣ – ೧೨

## ॥ ವೃದ್ಧಿಹ್ರಾಸಾಧಿಕರಣ ॥

## ॥ ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಮ್ ಓಂ ॥

ಭಕ್ತ್ಯಾದಿಗಳಲ್ಲಿ ವೃದ್ಧಿಹ್ರಾಸವತ್ವವಿರುವುದರಿಂದ ಭಕ್ತಿಯಲ್ಲಿ ತಾರತಮ್ಯವು ಇರುವುದು ಎಂದು ಅಂಗೀಕರಿಸಬೇಕು. ಈ ತಾರತಮ್ಯವು ಬ್ರಹ್ಮಾದಿಗಳಲ್ಲಿಯೂ ಮನುಷ್ಯೋತ್ತಮರಲ್ಲಿಯೂ ಭಕ್ತಿಯಲ್ಲಿಯೇ ಸೇರಿಕೊಂಡಿದೆ. ಇಲ್ಲದಿದ್ದರೆ ಪ್ರಮಾಣಸಿದ್ಧವಾದ ಬ್ರಹ್ಮಾದಿಗಳಿಗೆ ಮಹತ್ ಫಲವೂ, ಇತರರಿಗೆ ಅಲ್ಪಫಲವೂ ಎನ್ನುವುದು ಕೂಡುತ್ತಿರಲಿಲ್ಲ. ಫಲತಾರತಮ್ಯವಿರಲಿ, ಭಕ್ತಿಯಲ್ಲಿ ತಾರತಮ್ಯ ಏಕೆ ಎಂದರೆ ಅದಕ್ಕೇ ಹೇಳುತ್ತಾರೆ ''ಉಭಯ ಸಾಮಂಜಸ್ಯಾತ್'' ಎಂದು. ಭಕ್ತಿಗೆ ಸಮನಾದ ಫಲ ಎಂದು ಒಪ್ಪದಿದ್ದರೆ ನಿರ್ದೋಷನಾದ ಭಗವಂತನಿಗೆ ವೈಷಮ್ಯಾದಿ ದೋಷ ಹೇಳಿದಂತಾಗುತ್ತದೆ. ಬ್ರಹ್ಮಾದಿಗಳಿಗೆ ತಕ್ಕಫಲ, ಮನುಷ್ಯೋತ್ತಮಾದಿಗಳಿಗೆ

ತಕ್ಕ ಫಲ ಎಂದು ಅಂಗೀಕರಿಸುವುದೇ ಸಮಂಜಸ. ಆಗಲೇ ಪರಮಾತ್ಮನು ಸಮ ಎನಿಸಿಕೊಳ್ಳುತ್ತಾನೆ. ಭಕ್ತಿ ತಾರತಮ್ಯಕ್ಕೆ ಅನುಗುಣವಾಗಿ ಫಲದಲ್ಲಿ ತಾರತಮ್ಯ ಎಂಬುದೇ ಸಿದ್ಧಾಂತ. ''ಅಥಾತ ಆನಂದಸ್ಯ ಮೀಮಾಂಸಾ ಭವತಿ'' ಇತ್ಯಾದಿ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ.

''ಯಥಾ ಭಕ್ತಿ ವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ ।
ತಥಾ ಮುಕ್ತಿ ವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ ॥''

ಎಂಬ ಸ್ಮೃತಿಯೂ ಇದನ್ನೇ ಹೇಳುತ್ತದೆ.

**ಅಣುಭಾಷ್ಯ :** ''ತದ್ಭಕ್ತಿ ತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್''

ಈ ವಾಕ್ಯವು ಮೇಲಿನ ಎರಡು ಅಧಿಕರಣಗಳ (೧೧ ಮತ್ತು ೧೨) ತಾತ್ಪರ್ಯವನ್ನು ಸಂಗ್ರಹಿಸುತ್ತದೆ.

ಮುಮುಕ್ಷುಗಳು ಆ ಪರಮೇಶ್ವರನಲ್ಲಿ ಮಾಡುವ ಭಕ್ತಿಯಲ್ಲಿ ತಾರತಮ್ಯವಿರುವ ಪ್ರಯುಕ್ತ (ಸ್ವರೂಪ ಯೋಗ್ಯತೆಯೇ ಇದಕ್ಕೆ ಕಾರಣ) ಮುಕ್ತಿಯಲ್ಲಿಯೂ ತಾರತಮ್ಯವು ಇರುತ್ತದೆ. ಭಕ್ತಿ ತಾರತಮ್ಯವನ್ನು ಹೇಳುವ ಮೂಲಕ ೧೧ನೇ ಅಧಿಕರಣದ ಸಾರವನ್ನೂ ಮುಕ್ತಿಯಲ್ಲಿ ತಾರತಮ್ಯವನ್ನು ಹೇಳುವ ಮೂಲಕ ೧೨ನೇ ಅಧಿಕರಣದ ಸಾರವನ್ನೂ ಸಂಗ್ರಹಿಸಲಾಗಿದೆ.

## ಅಧಿಕರಣ – ೧೩

## ॥ ಪಾಲಕತ್ವಾಧಿಕರಣ ॥

**॥ ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ ॥**

ಭಗವಂತನು ಪಾಲನಕರ್ತನಷ್ಟೇ ಅಲ್ಲ. ಅದಕ್ಕಿಂತಲೂ ಅಧಿಕನು. ಇದು ಸ್ವತಃ ಸಿದ್ಧವಾಗದಿದ್ದರೂ ಶ್ರುತಿಯಿಂದ ಸಿದ್ಧವಾಗುತ್ತದೆ. ''ನೈತಾವದೇನಾ ಪರೋ

ಅನ್ಯದಸ್ಯ್ಕಾಸ ದ್ಯಾವಾಪೃಥಿವೀ ಬಿಭರ್ತಿ'' ಎಂಬ ಶ್ರುತಿಯು ಶ್ರೀಹರಿಗೆ ಸೃಷ್ಟಿ ಸಂಹಾರ ಕರ್ತೃತ್ವವನ್ನಷ್ಟೇ ಹೇಳುವುದಿಲ್ಲ, ಅದಕ್ಕಿಂತಲೂ ಹೆಚ್ಚಾದ ಪಾಲಕತ್ವಾದಿ ಗುಣಗಳನ್ನೂ ಹೇಳುತ್ತದೆ.

''ಸೃಷ್ಟಿಂ ಚ ಪಾಲನಶ್ಚೈವ ಸಂಹಾರಂ ನಿಯಮಂ ತಥಾ ।

''ಏಕ ಏವ ಕರೋತೀಶಃ ಸರ್ವಸ್ಯ ಜಗತೋ ಹರಿಃ ॥'' ಸ್ಮೃತಿಯೂ (ಬ್ರಹ್ಮಾಂಡ ಪುರಾಣದ ವಚನ) ಇದಕ್ಕೆ ಸಂವಾದಿಯಾಗಿದೆ.

**ಅಣುಭಾಷ್ಯ**

ಈ ಅಧಿಕರಣದ ತಾತ್ಪರ್ಯವನ್ನು ಸಮನ್ವಯಾಧ್ಯಾಯದಲ್ಲಿಯೇ 'ಸರ್ವಕರ್ತಾ' ಎಂಬ ಶಬ್ದದಿಂದಲೇ ಪ್ರತಿಪಾದಿಸಲಾಗಿದೆ.

## ಅಧಿಕರಣ – ೧೪

## ॥ ಅವ್ಯಕ್ತಾಧಿಕರಣ ॥

## ॥ ಓಂ ತದವ್ಯಕ್ತಮಾಹ ಹಿ ಓಂ ॥

ಆ ಬ್ರಹ್ಮನು ಅವ್ಯಕ್ತನು ಅಂದರೆ ಪ್ರಯತ್ನದಿಂದ ಅವನನ್ನು ನೋಡುವುದು ಅಶಕ್ಯವು. ಏಕೆಂದರೆ ''ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಂ'' ಎಂಬುದಾಗಿ ಶ್ರುತಿಯು ಬ್ರಹ್ಮನು ಅವ್ಯಕ್ತನು ಎಂದು ಹೇಳುತ್ತದೆ.

ಹಾಗಾದರೆ ಬ್ರಹ್ಮನು ಸದಾ ಅವ್ಯಕ್ತನಾದರೆ, ಆಗ ಆತನಲ್ಲಿ ಮಾಡುವ ಭಕ್ತಿಯು ವ್ಯರ್ಥವೇ ಆಗುವುದು. ಅವ್ಯಕ್ತ ಸ್ವಭಾವನಾದ ಬ್ರಹ್ಮನನ್ನು ನೂರಾರು ರೀತಿಯ ಸಾಧನೆಯಿಂದಲೂ ವ್ಯಕ್ತೀಕರಿಸಿಕೊಳ್ಳುವುದು ಅಶಕ್ಯವೆಂದಾದರೆ ಭಕ್ತ್ಯಾದಿ ಸಾಧನೆಯು ಅನವಶ್ಯಕವು. ಹೀಗೆ ಪೂರ್ವಪಕ್ಷಿಗಳು ಹೇಳುತ್ತಾರೆ. ಇದು ಸರಿಯಲ್ಲ. ಇಲ್ಲಿ ಅವ್ಯಕ್ತನೆಂದರೆ, ಎಂದಿಗೂ ಯಾವಕಾರಣದಿಂದಲೂ ವ್ಯಕ್ತನಾಗುವುದೇ ಇಲ್ಲವೆಂದರ್ಥವಲ್ಲ. ಬ್ರಹ್ಮನು ವ್ಯಕ್ತನಾಗುವುದು ಅವನ ಇಚ್ಛೆಗೆ ಸೇರಿದ್ದು, ಕೇವಲ ಪುರುಷ ಪ್ರಯತ್ನದಿಂದಲೇ ಸಾಧ್ಯವಿಲ್ಲ ಎಂದರ್ಥ. ಪುರುಷನು ಭಕ್ತಿ

ಪೂರ್ವಕವಾದ ಶ್ರವಣಾದಿ ಸಾಧನೆಯಿಂದ ಬ್ರಹ್ಮನನ್ನು ಮೆಚ್ಚಿಸಿದರೆ ಅಲ್ಲಿಯ ವರೆಗೂ ಆ ಪುರುಷನಿಗೆ ಅವ್ಯಕ್ತನಾಗಿದ್ದ ಬ್ರಹ್ಮನು ಅವನ ಸಾಧನೆಯಿಂದ ಸಂತುಷ್ಟಗೊಂಡು ವ್ಯಕ್ತನಾಗುತ್ತಾನೆ. ಅವ್ಯಕ್ತತ್ವವು ಪರಮಾತ್ಮನು ಸ್ವಭಾವವೇ ಆಗಿದ್ದರೂ ಅವನಿಗೆ ವ್ಯಕ್ತತ್ವವನ್ನು ಹೇಳುವುದು ಅಯುಕ್ತವೇನಲ್ಲ. ಅಘಟಿತ – ಘಟನಾದಿ ಅನಂತ ಶಕ್ತಿತ್ವವುಳ್ಳವನು ಆ ಪರಬ್ರಹ್ಮನು.

ನಿತ್ಯಾವ್ಯಕ್ತೋಽಪಿ ಭಗವಾನ್ ಈಕ್ಷ್ಯತೇ ನಿಜಶಕ್ತಿತಃ ।
ತಮೃತೇ ಪರಮಾತ್ಮಾನಾಂ ಕಃ ಪಶ್ಯೇತಾಮಿತಂ ಪ್ರಭುಮ್॥

ಎಂಬ ಶ್ರುತಿಯು ಇದನ್ನೇ ಸಮರ್ಥಿಸುತ್ತದೆ.

**ಅಣುಭಾಷ್ಯ :** ''ಪರಮೇಶ್ವರಃ''

ಪರಮಾತ್ಮನು ಅಘಟಿತಘಟನಾದಿ ಪರಮೈಶ್ವರ್ಯದಿಂದ ಕೂಡಿದವನು. ಇಲ್ಲಿ ಜೀವನಿಗೆ ಸ್ವಸಾಮರ್ಥ್ಯದಿಂದ ಪರಮಾತ್ಮನನ್ನು ಕಾಣಲು ಅಶಕ್ಯವೆಂಬುದನ್ನು ಅವ್ಯಕ್ತ ಶಬ್ದದಿಂದ ಹೇಳಿದ್ದಾರೆ. ಜೊತೆಗೆ ಅವ್ಯಕ್ತವಾದ ಪರಮಾತ್ಮನಿಗೆ ಸ್ವಸಾಮರ್ಥ್ಯದಿಂದ ವ್ಯಕ್ತತ್ವವನ್ನು ಸಮರ್ಥಿಸಿದ್ದಾರೆ. ಹೀಗೆ ಪರಮಾತ್ಮನ ಅಚಿಂತ್ಯ ಐಶ್ವರ್ಯವನ್ನು 'ಪರಮೇಶ್ವರಃ' ಎಂಬ ಶಬ್ದದಿಂದ ಸಂಗ್ರಹಿಸಿದ್ದಾರೆ.

## ಅಧಿಕರಣ – ೧೫

## ॥ ಅಹಿಕುಂಡಲಾಧಿಕರಣ ॥

## ॥ ಓಂ ಉಭಯವ್ಯಪದೇಶಾತ್ತು ಅಹಿಕುಂಡಲವತ್ ಓಂ ॥

ಪರಮಾತ್ಮನಿಗೆ ಗುಣತ್ವ – ಗುಣಿತ್ವ ರೂಪವಾದ ಉಭಯ ಧರ್ಮತ್ವವನ್ನು ''ಆನಂದಂ ಬ್ರಹ್ಮಣೋ ವಿದ್ವಾನ್ । ಆನಂದೋ ಬ್ರಹ್ಮ॥'' ''ಅಥೈಷ ಏವ ಪರಮಾನಂದಃ'' ಇತ್ಯಾದಿ ಶ್ರುತಿಗಳಲ್ಲಿ ''ಭಗವಂತನು ಆನಂದವುಳ್ಳವನು, ಪರಮಾನಂದನೆಂದರೆ ಅವನೇ'' ಎಂಬುದಾಗಿ ಹೇಳಲಾಗಿದೆ.

ಇದನ್ನು ಹೇಗೆ ಒಪ್ಪಬೇಕು ಎಂಬುದಕ್ಕೆ ಅಹಿಕುಂಡಲ ದೃಷ್ಟಾಂತವನ್ನು

ನೀಡಿದ್ದಾರೆ. ಸರ್ಪವು ಕುಂಡಲದಂತೆ ಸುತ್ತಿಕೊಂಡಿದೆ. ಕುಂಡಲಿಯೇ ಸರ್ಪವು. ಹೀಗೆ ಕುಂಡಲಾತ್ಮಕವಾದ ಸರ್ಪವನ್ನು ಕುಂಡಲೀ ಎಂದು ಹೇಳುವುದು ಲೋಕ ದಲ್ಲಿ ಕಂಡಿದೆ ಎಂದರ್ಥ. ಆದ್ದರಿಂದ ಗುಣಿತ್ವ ಗುಣತ್ವ ರೂಪದಿಂದ ಉಭಯ ವಿಧದಲ್ಲಿ ಶ್ರುತಿಗಳಲ್ಲಿ ಪರಮಾತ್ಮನನ್ನು ವರ್ಣಿಸಿರುವುದರಿಂದ ಭಗವಂತನಲ್ಲಿ ಅವಶ್ಯವಾಗಿ ಭಕ್ತಿಯನ್ನು ಮಾಡಬೇಕು ಎಂದು ತಾತ್ಪರ್ಯ.

**ಅಣುಭಾಷ್ಯ :** ''ಪರಮೇಶ್ವರಃ''

''ಪರಮೈಃ'' ಅಂದರೆ ಸರ್ವೋತ್ಕೃಷ್ಟವಾದ ಜ್ಞಾನಾನಂದಾದಿ ಗುಣಗಳಿಂದ ''ಈಶ್ವರಃ'' ಸಮರ್ಥನು. ಅಂದರೆ ಸಮಸ್ತಗುಣಪೂರ್ಣನು ಎಂದರ್ಥ. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಅವಶ್ಯಕರ್ತವ್ಯವು ಎಂಬುದೇ ಸಿದ್ಧಾಂತ.

## ಅಧಿಕರಣ – ೧೬
## ॥ ಪರವೂಧಿಕರಣ ॥
### ॥ ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ ॥

ಪರಬ್ರಹ್ಮನ ಆನಂದಾದಿಗಳು ಲೌಕಿಕ ಆನಂದಾದಿಗಳಿಗಿಂತ 'ಪರಂ' ಅಂದರೆ ವಿಲಕ್ಷಣವು. ಏಕೆಂದರೆ ಸೇತೂನ್ಮಾನ ಸಂಬಂಧ ಭೇದವನ್ನು ವ್ಯಪದೇಶಿಸಿರು ವುದರಿಂದ. ಸೇತೂನ್ಮಾನವೆಂಬುದು ಭಾವಪ್ರಧಾನವಾದ ವ್ಯಪದೇಶ. ''ಏಷ ಸೇತುಃ'' ''ಯತೋ ವಾಚೋ ನಿವರ್ತಂತೇ'' ಇತ್ಯಾದಿ ಶ್ರುತಿಗಳಲ್ಲಿ ಪೂರ್ಣತ್ವ ಹಾಗೂ ಉನ್ಮಾನತ್ವ ರೂಪವಾದ ಬ್ರಹ್ಮನ ಆನಂದಾದಿಗಳಿಗೆ ಲೌಕಿಕ ಆನಂದಾದಿ ಗಳೊಂದಿಗೆ ವೈಲಕ್ಷಣ್ಯವನ್ನು ಹೇಳಲಾಗಿದೆ. ಅಂದರೆ ಲೌಕಿಕ ಆನಂದಾದಿಗಳಿಗೆ ಅಸಂಭಾವಿತವಾದ ಸೇತುತ್ವ ಉನ್ಮಾನತ್ವ ರೂಪ ವೈಲಕ್ಷಣ್ಯವು ಉಪದೇಶಿಸಲಾಗಿದೆ. ''ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ'' ಎಂಬ ಶ್ರುತಿಯಲ್ಲಿ ಈಶ – ಜೀವರಿಗೆ ಬಿಂಬ – ಪ್ರತಿಬಿಂಬತ್ವ ರೂಪ ಸಂಬಂಧವನ್ನು ಹೇಳಲಾಗಿದೆ. ''ಅನ್ಯತ್ ಜ್ಞಾನಂತು ಜೀವಾನಾಂ ಅನ್ಯತ್ ಜ್ಞಾನಂ ಪರಸ್ಯ ಚ''

ಎಂಬ ಶ್ರುತಿಯಲ್ಲಿ ಈಶ – ಜೀವರಿಗೆ ಭೇದವನ್ನು ಸಮರ್ಥಿಸಲಾಗಿದೆ. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಅವಶ್ಯ ಕರ್ತವ್ಯವು.

**ಅಣುಭಾಷ್ಯ :** ''ಪರಮೇಶ್ವರಃ''

''ಪರಮ್ಯೆಃ'' ಅಂದರೆ ಲೋಕ ವಿಲಕ್ಷಣ ಗುಣಗಳಿಂದ ''ಈಶ್ವರಃ''. ಈಶ್ವರನು ಲೌಕಿಕ ಆನಂದಾದಿ ವಿಲಕ್ಷಣವಾದ ಗುಣವುಳ್ಳವನು ಎಂದರ್ಥ.

**ಅಧಿಕರಣ – ೧೭**

**॥ ಸ್ಥಾನವಿಶೇಷಾಧಿಕರಣ ॥**

**॥ ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ ॥**

ಬಿಂಬಭೂತನಾದ ಸೂರ್ಯನು ಒಬ್ಬನೇ ಆಗಿದ್ದರೂ, ಅಂದರೆ ಅವಿಶೇಷನಾಗಿದ್ದರೂ, ಸ್ಥಾನ ವಿಶೇಷದಿಂದಾಗಿ, ಅಂದರೆ ಸೂರ್ಯಕಾಂತಾದಿ ಸ್ಥಾನಗಳ ಗುಣವೈಚಿತ್ರ್ಯದಿಂದಾಗಿ, ಪ್ರತಿಬಿಂಬದಲ್ಲಿ ಪ್ರಕಾಶಾದಿ ವೈಚಿತ್ರ್ಯವು ಕಂಡುಬರುವುದು. ಹಾಗೆಯೇ ಭಗವಂತನ ಆನಂದಾದಿಗಳಲ್ಲಿ ವೈಚಿತ್ರ್ಯವಿಲ್ಲದಿದ್ದರೂ ಪ್ರತಿಬಿಂಬರೂಪವಾದ ಬ್ರಹ್ಮಾದಿಗಳಲ್ಲಿರುವ ವೈಚಿತ್ರ್ಯದಿಂದಾಗಿ ಅವರುಗಳ ಆನಂದಾದಿಗಳಲ್ಲಿ ವೈಚಿತ್ರ್ಯವು ಅಂದರೆ ತಾರತಮ್ಯವು ಎಂದರ್ಥ. ಬಿಂಬಭೂತನಾದ ಪರಮಾತ್ಮನಾದರೂ ಸರ್ವದಾ ಏಕಪ್ರಕಾರವಾದ ಆನಂದಾದಿ ಪೂರ್ಣತ್ವದಿಂದ ಕೂಡಿರುವನು ಎಂದು ಸಿದ್ಧಾಂತ.

''ಐಶ್ವರ್ಯಾತ್ ಪರಮಾದ್ವಿಷ್ಣೋಃ ಭಕ್ತ್ಯಾದೀನಾಮನಾದಿತಃ ।
ಬ್ರಹ್ಮಾದೀನಾಂ ಸೂಪಪನ್ನಾಹ್ಯಾನಂದಾದೇಃ ವಿಚಿತ್ರತಾ ॥''

ಎಂಬ ಪದ್ಮಪುರಾಣದ ವಾಕ್ಯವೂ ಇದಕ್ಕೆ ಸಂವಾದಿಯಾಗಿದೆ.

**ಅಣುಭಾಷ್ಯ :** ''ಸ ಏಕಃ ಪರಮೇಶ್ವರಃ''

''ಸಃ'' ವಿಷ್ಣುವು ''ಏಕಃ'' ಜ್ಞಾನಾನಂದಾದಿಗಳಿಂದ ಏಕಪ್ರಕಾರನೇ ಆಗಿರು

ವನು. ಅಂದರೆ ಪ್ರತಿಬಿಂಬಗಳಲ್ಲಿ ತಾರತಮ್ಯವಿದ್ದರೂ ಬಿಂಬರೂಪನಾದ ಪರಮಾತ್ಮನಲ್ಲಿ ತಾರತಮ್ಯವಿಲ್ಲ ಎಂದರ್ಥ. ಹೀಗೇಕೆ ತಿಳಿಯಬೇಕು ಎಂದರೆ, ಅವನು ಪರಮೈಶ್ವರ್ಯವುಳ್ಳವನು ಎಂದು 'ಪರಮೇಶ್ವರಃ' ಎಂಬ ಶಬ್ದದಿಂದ ತಿಳಿಸುತ್ತಾರೆ.

ಅಥವಾ ''ತದ್ಭಕ್ತಿ ತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ'' ಎಂಬ ವಚನದಿಂದ ಈ ಅಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ. ಭಗವಂತನ ಆನಂದಾದಿಗಳಲ್ಲಿ ವಿಶೇಷವಿಲ್ಲದಿದ್ದರೂ, ಬ್ರಹ್ಮಾದಿಗಳ ಭಕ್ತ್ಯಾದಿ ಗುಣಗಳಲ್ಲಿ ತಾರತಮ್ಯವಿರುವುದರಿಂದ (ಬ್ರಹ್ಮಾದಿ ಸ್ಥಾನ ಗುಣವಿಶೇಷದಿಂದ) ಮೋಕ್ಷದ ವರೆಗೂ ಹಾಗೂ ಮೋಕ್ಷದಲ್ಲಿಯೂ ಬ್ರಹ್ಮಾದಿಗಳ ಆನಂದಾದಿಗಳಲ್ಲಿ ವಿಶೇಷವು, ಅಂದರೆ ತಾರತಮ್ಯವು ಇರುವುದು ಎಂದು ಸಿದ್ಧಾಂತ.

## ಅಧಿಕರಣ – ೧೮

## ॥ ತಥಾನ್ಯತ್ವಾಧಿಕರಣ ॥

## ॥ಓಂ ತಥಾಽನ್ಯತ್ ಪ್ರತಿಷೇಧಾತ್ ಓಂ॥

ಭಗವಂತನ ಆನಂದಾದಿಗಳು ಜೀವರ ಆನಂದಾದಿಗಳಿಗಿಂತ ಬೇರೆಯೇ ಆಗಿರುತ್ತವೆ. ಹಾಗೆಯೇ ಜೀವರ ಧ್ಯಾನ ಕಾಲದಲ್ಲಿ ಗೋಚರಿಸುವ ಪ್ರತೀಕಕ್ಕಿಂತ ಪರಮಾತ್ಮನು ಭಿನ್ನನೇ ಆಗಿರುವನು. ಆ ಪ್ರತೀಕವೇ ಪರಮಾತ್ಮನಲ್ಲ. ಏಕೆ ಹೀಗೆ ತಿಳಿಯಬೇಕೆಂದರೆ

''ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ ।
ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥''

ಇತ್ಯಾದಿ ಶ್ರುತಿಗಳಲ್ಲಿ ಧ್ಯಾನ ಕಾಲದಲ್ಲಿ ಪ್ರತೀತವಾದುದಕ್ಕೆ ಬ್ರಹ್ಮತ್ವವನ್ನು ನಿಷೇಧಿಸಲಾಗಿದೆ.

**ಅಣುಭಾಷ್ಯ**

ಈ ಅಧಿಕರಣದ ತಾತ್ಪರ್ಯವನ್ನು ''ತದವ್ಯಕ್ತಮಾಹ ಹಿ'' ಎಂಬ ೧೪ನೇ

ಅಧಿಕರಣದ ತಾತ್ಪರ್ಯ ಸಂಗ್ರಹದಲ್ಲಿಯೇ "ಪರಮೇಶ್ವರಃ" ಎಂಬುದರಿಂದ ಸಂಗ್ರಹಿಸಿದ್ದಾರೆ. ಆದ್ದರಿಂದ ಇಲ್ಲಿ ಪ್ರತ್ಯೇಕವಾಗಿ ಹೇಳಿರುವುದಿಲ್ಲ.

## ಅಧಿಕರಣ – ೧೯

## ॥ ಸರ್ವಗತತ್ವಾಧಿಕರಣ ॥

**॥ ಓಂ ಅನೇನ ಸರ್ವಗತತ್ವಮಾಯಮಯ ಶಬ್ದಾದಿಭ್ಯಃ ಓಂ ॥**

ಈ ಪರಮೇಶ್ವರನಿಂದಲೇ ಯಾವಾಗಲೂ ಎಲ್ಲ ಕಡೆಯಲ್ಲಿಯೂ ಸೃಷ್ಟ್ಯಾದಿಗಳು ಪ್ರವರ್ತಿಸಲ್ಪಡುತ್ತವೆ. ಏಕೆಂದರೆ ಮಾಯಾಮಯ ಶಬ್ದಾದಿಗಳನ್ನು ವ್ಯಾಖ್ಯಾನಮಾಡುವ ಶ್ರುತಿಗಳಲ್ಲಿ ಸರ್ವಗತ್ವಾದಿಗಳನ್ನು ಪ್ರತಿಪಾದಿಸಲಾಗಿದೆ.

"ಸರ್ವತ್ರ ಸರ್ವಮೇತಸ್ಮಾತ್ ಸರ್ವದಾ ಸರ್ವವಸ್ತುಷು ।
ಸ್ವರೂಪಭೂತಾಯಾ ನಿತ್ಯಶಕ್ತ್ಯಾ ಮಾಯಾಖ್ಯಯಾ ಯತಃ ॥
ಅತೋ ಮಾಯಾಮಯಂ ವಿಷ್ಣುಂ ಪ್ರವದಂತಿ ಸನಾತನಮ್ ॥"

ಹೀಗೆ ಚತುರ್ವೇದ ಶಿಖೆಯಲ್ಲಿ ಹೇಳಲಾಗಿದೆ.

"ಏಷ ಸರ್ವಃ, ಏಷ ಸರ್ವಗತಃ, ಏಷ ಸರ್ವೇಶ್ವರಃ, ಏಷೋऽಚಿಂತ್ಯಃ" ಹೀಗೆ ಭಾಲ್ಲವೇಯ ಶ್ರುತಿಯಲ್ಲಿ ಸರ್ವಗತತ್ವವನ್ನು ಪ್ರತಿಪಾದಿಸಲಾಗಿದೆ.

**ಅಣುಭಾಷ್ಯ :** "ಸರ್ವದೇಶೇಷು ಕಾಲೇಷು ಸ ಏಕಃ ಪರಮೇಶ್ವರಃ"

ಏಕಮೇವಾದ್ವಿತೀಯನಾದ ಆ ಪರಮೇಶ್ವರನೊಬ್ಬನೇ ಎಲ್ಲ ದೇಶಗಳಲ್ಲಿ ಎಲ್ಲ ಕಾಲಗಳಲ್ಲಿ ಸೃಷ್ಟ್ಯಾದಿಕರ್ತನು ಎಂದು ಸಿದ್ಧಾಂತ.

## ಅಧಿಕರಣ - ೨೦

## ॥ ಫಲಾಧಿರಕಣ ॥

**॥ ಓಂ ಫಲಮತ ಉಪಪತ್ತೇಃ ಓಂ ॥**

ಪರಮೇಶ್ವರನಿಂದಲೇ ಫಲವು. ಅವನು ಪರಮ ಚೇತನನಾದ್ದರಿಂದ

ಫಲದಾನವು ಕೂಡುತ್ತದೆ. ''ಕರ್ಮವೇ ಫಲದಾತೃವು, ಈಶ್ವರನಲ್ಲ'' ಎಂದು ಕೆಲವರು ಹೇಳುತ್ತಾರೆ. ಅದನ್ನು ನಿರಾಕರಿಸಲು ಈ ಅಧಿಕರಣ. ಕರ್ಮವು ಜಡವು. ಅದಕ್ಕೆ ಸ್ವತಃ ಪ್ರವೃತ್ತಿಯಿಲ್ಲ. ಆದ್ದರಿಂದ ಕರ್ಮವು ಫಲದಾತೃವಾಗಲು ಅಸಂಭವವು. ಪರಮೇಶ್ವರನು ಚೇತನನು ಹಾಗೂ ಸ್ವತಂತ್ರನು. ಆದ್ದರಿಂದ ಅವನೇ ಫಲದಾತೃವು ಎಂಬುದೇ ಸಿದ್ಧಾಂತ. ''ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್'' ''ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮ್'' ಇತ್ಯಾದಿ ಶ್ರುತಿಗಳು ಇದನ್ನು ಪುಷ್ಟೀಕರಿಸುತ್ತವೆ.

**ಅಣುಭಾಷ್ಯ :** ''ಸ ಏಕಃ ಪರಮೇಶ್ವರಃ''

ಆ ವಿಷ್ಣುವೊಬ್ಬನೇ ಫಲದಾನಾದಿಗಳಲ್ಲಿ ಚೇತನತ್ವೇನ ಪರಮಸಮರ್ಥನು. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯನ್ನು ಅವಶ್ಯ ಮಾಡತಕ್ಕದ್ದು. ಇದನ್ನೇ ''ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್'' ಎಂಬ ವಚನದಿಂದ ಶ್ರೀಮದಾಚಾರ್ಯರು ಹೇಳುತ್ತ ಈ ಪಾದಾರ್ಥವನ್ನು ಉಪಸಂಹಾರ ಮಾಡಿರುತ್ತಾರೆ.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಮೂರನೆಯ ಅಧ್ಯಾಯದ ಎರಡನೆಯ ಪಾದವು ಮುಕ್ತಾಯವಾಯಿತು ॥**



## ಮೂರನೆಯ ಅಧ್ಯಾಯದ ಮೂರನೆಯ ಪಾದ

ಸಚ್ಚಿದಾನಂದ ಆತ್ಮೇತಿ ಮಾನುಷ್ಯೈಸ್ತು ಸುರೇಶ್ವರೈಃ ।
ಯಥಾಕ್ರಮಂ ಬಹುಗುಣೈಃ ಬ್ರಹ್ಮಣಾ ತ್ವಖಿಲೈರ್ಗುಣೈಃ ॥೪॥
ಉಪಾಸ್ಯಃ ಸರ್ವವೇದೈಶ್ಚ ಸರ್ವೈರಪಿ ಯಥಾಕ್ರಮಮ್ (ಬಲಮ್) ।
ಜ್ಞೇಯೋ ವಿಷ್ಣುರ್ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತಮ್ ॥೫॥

ಈ ಪಾದದಲ್ಲಿ ಉಪಾಸನೆಯ ಸ್ವರೂಪವನ್ನು ನಿರೂಪಿಸುತ್ತಾರೆ. ವಿಷಯ ವೈರಾಗ್ಯವು ಭಗವಂತನಲ್ಲಿ ಭಕ್ತಿಯನ್ನು ಹುಟ್ಟಿಸುತ್ತದೆ. ಮಾಹಾತ್ಮ್ಯಜ್ಞಾನ ಪೂರ್ವಕ ವಾದ ಸ್ನೇಹವೇ ಭಕ್ತಿ. ಆದ್ದರಿಂದ ಭಗವಂತನಲ್ಲಿ ನಿಜವಾದ ಭಕ್ತಿಯು ಹುಟ್ಟ ಬೇಕಾದರೆ ಅದು ಜ್ಞಾನದಿಂದಲೇ ಸಾಧ್ಯ. ಜ್ಞಾನಕ್ಕೆ ಸಾಧನ ಉಪಾಸನೆ. ಆದ್ದರಿಂದ ಮೊದಲೆರಡು ಪಾದಗಳಲ್ಲಿ ವೈರಾಗ್ಯ, ಭಕ್ತಿಗಳನ್ನು ನಿರೂಪಿಸಿ, ಈಗ ಮೂರನೆಯ ಪಾದದಲ್ಲಿ ಜ್ಞಾನಕ್ಕೆ ಸಾಧನವಾದ ಉಪಾಸನೆಯ ಸ್ವರೂಪವನ್ನು ನಿರೂಪಿಸುತ್ತಾರೆ.

## ಅಧಿಕರಣ -೧

## ॥ ಸರ್ವವೇದಾಂತಾಧಿಕರಣ ॥

## ॥ ಓಂ ಸರ್ವವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ ॥

"ಸರ್ವವೇದಾಂತ ಪ್ರತ್ಯಯಂ" ಎಂದರೆ ಸರ್ವವೇದಗಳ ನಿರ್ಣಯದಿಂದ ಹುಟ್ಟುವ ಪರಮಾತ್ಮನ ವಿಷಯಕವಾದ ಜ್ಞಾನ . ಆದ್ದರಿಂದ ಎಲ್ಲರಿಂದಲೂ ಯಥಾಶಕ್ತಿ ಎಲ್ಲ ವೇದಗಳ ಶ್ರವಣ ಮನನಾದಿಗಳಿಂದ ಬ್ರಹ್ಮನೊಬ್ಬನೇ ಜ್ಞಾತವ್ಯನು. ಏಕೆಂದರೆ "ಆತ್ಮೇತ್ಯೇವೋಪಾಸೀತ" ಇತ್ಯಾದಿ ಶ್ರುತಿಯು ಬ್ರಹ್ಮನನ್ನು ಆತ್ಮನೆಂದೇ ಎಲ್ಲರೂ ಉಪಾಸನೆ ಮಾಡತಕ್ಕದ್ದು ಎಂಬುದಾಗಿ ಸರ್ವಸಾಧಾರಣ ವಿಧಿಯನ್ನು ಹೇಳುತ್ತದೆ. ಎಲ್ಲ ಶಾಖೆಗಳಲ್ಲಿ ಹೇಳಲ್ಪಟ್ಟ ಏಕಮೇವ ಬ್ರಹ್ಮನೇ ಎಲ್ಲ ರಿಂದಲೂ ತಿಳಿಯಲ್ಪಡತಕ್ಕದ್ದು ಎಂಬುದಾಗಿ ಇದರಿಂದ ನಿಶ್ಚಯವಾಗುತ್ತದೆ ಎಂಬುದಾಗಿ ಈ ಅಧಿಕರಣದ ತಾತ್ಪರ್ಯ.

**ಅಣುಭಾಷ್ಯ:** "ಸರ್ವವೇದೈಶ್ಚ ಸರ್ವೈರಪಿ ಯಥಾಕ್ರಮಂ(ಬಲಂ) ಜ್ಞೇಯೋ ವಿಷ್ಣುಃ"

ಎಲ್ಲ ಅಧಿಕಾರಿಗಳಿಂದಲೂ ಅವರವರ ಶಕ್ತಿಯ ಅನುಸಾರವಾಗಿ, ಅಂದರೆ ಯೋಗ್ಯತೆಯನ್ನು ಆಧರಿಸಿ, ಎಲ್ಲ ವೇದಗಳಿಂದಲೂ ವಿಷ್ಣುವೇ ಜ್ಞೇಯನು. ತಮ್ಮ ತಮ್ಮ ಶಾಖೋಕ್ತ ರೀತಿಯಿಂದಲ್ಲ ಎಂದು ಸಿದ್ಧಾಂತ. ಏಕೆಂದರೆ ಸರ್ವವೇದಗಳ ಸರ್ವಶಾಖೆಗಳಲ್ಲಿ ಮಹಾತಾತ್ಪರ್ಯವೇ ವಿಷ್ಣು ಸರ್ವೋತ್ತಮತ್ವವು. 'ಸರ್ವ

ವೇದಾಂತ ಪ್ರತ್ಯಯಂ' ಎಂಬ ಪ್ರಥಮ ಸೂತ್ರದಲ್ಲಿ ಎಲ್ಲರೂ ಯಥಾಶಕ್ತಿ ಸರ್ವವೇದಾರ್ಥ ಜ್ಞಾನವನ್ನು ಸಂಪಾದಿಸಬೇಕು ಎಂದು ಸೂತ್ರಕಾರರು ಹೇಳಿದ್ದರೂ, ಭಾಷ್ಯಕಾರರು ಅಣುಭಾಷ್ಯದಲ್ಲಿ ಈ ಸೂತ್ರದ ಸಾರಾಂಶ ಮೊದಲು ಸಂಗ್ರಹಿಸದೇ ಕ್ರಮೋಲ್ಲಂಘನೆ ಮಾಡಿದ್ದಾರೆ. ಉಪಾಸನೆಯ ದೃಷ್ಟಿಯಿಂದ ಸರ್ವವೇದಾರ್ಥ ಪರಿಜ್ಞಾನಕ್ಕೆ ಪ್ರಾಧಾನ್ಯವಿರುವ ಕಾರಣ, ಸೋಪಾನ ಅವರೋಹಣ ನ್ಯಾಯದಿಂದ ಅಧಿಕಾರಿ ಕ್ರಮವನ್ನು ಗಮನದಲ್ಲಿಟ್ಟುಕೊಂಡು "ಸಚ್ಚಿದಾನಂದ ಆತ್ಮಾ" ಇತ್ಯಾದಿಯಾಗಿ ಉಪಾಸನೆಯ ಸ್ವರೂಪವನ್ನು ಹೇಳಿ ತದನಂತರ "ಸರ್ವ ವೇದಾಂತ ಪ್ರತ್ಯಯಂ" ಎಂಬ ಸೂತ್ರದ ವಿಷಯವನ್ನು ಸಂಗ್ರಹಿಸಿದ್ದಾರೆ. ಆದ್ದರಿಂದ ಯಾವುದೇ ದೋಷವಿಲ್ಲ ಎಂದು ತಿಳಿಯತಕ್ಕದ್ದು.

## ಅಧಿಕರಣ - ೩

## ॥ ಉಪಸಂಹಾರಾಧಿಕರಣ ॥

## ॥ಓಂ ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ ಸಮಾನೇ ಚ ಓಂ ॥

ಆನಂದಾದಿ ಗುಣಗಳ ವಿಷಯದಲ್ಲಿ ಹಾಗೂ ದೋಷಗಳ ಅಭಾವದ ವಿಷಯದಲ್ಲಿ ಸರ್ವವೇದಾರ್ಥಗಳಲ್ಲೂ ಭೇದವಿಲ್ಲದಿರುವುದರಿಂದ, ಸರ್ವ ವೇದಾರ್ಥವನ್ನೂ ಯಾವುದೇ ವಿಭಾಗಮಾಡದೇ ಉಪಸಂಹಾರ ಮಾಡುವ ಮೂಲಕ ಬ್ರಹ್ಮನನ್ನು ಧ್ಯಾನಿಸಬೇಕು. 'ಅವಿಭಾಗೇನ' ಎಂದರೆ "ಬುದ್ಧಿಯಲ್ಲಿ ಒಂದೇ ರೀತಿಯಲ್ಲಿ ತಂದುಕೊಂಡು" ಎಂದರ್ಥ. "ವಿಧಿಶೇಷವತ್" ಎಂದರೆ ಶಿಷ್ಟವಾದ ವಿಧಿವಾಕ್ಯಗಳಲ್ಲಿ ಹೇಳಲ್ಪಟ್ಟ ಕರ್ಮಗಳಂತೆ ಎಂದರ್ಥ. ಹೇಗೆ ಸಂಧ್ಯಾವಂದನಾದಿಗಳು ವಿಹಿತವಾದ ಅವಶ್ಯ ಕರ್ತವ್ಯವೋ ಅದೇ ರೀತಿ ಧ್ಯಾನವೂ ಕರ್ತವ್ಯ. 'ಸಮಾನ ಚ' ಎಂದರೆ "ಸಮಾನ ಏವ". ಭಗವಂತನಲ್ಲಿ ಯೋಗ್ಯ ಗುಣವನ್ನೇ ಉಪಾಸನೆ ಮಾಡಬೇಕು. ಅಯೋಗ್ಯವಾದ ರೋದನಾದಿ ವಿಷಯವನ್ನು ಉಪಾಸಿಸಬಾರದು. ಏಕೆಂದರೆ "ಗುಣೈರೇವ ಸ ತೂಪಾಸ್ಯೊ ನೈವ ದೋಷೈಃ ಕಥಂಚನ" ಎಂಬುದಾಗಿ ಬೃಹತ್‌ತಂತ್ರದ ವಾಕ್ಯವು ಹೇಳುತ್ತದೆ.

ಇಲ್ಲದಿದ್ದರೆ ವೇದವಿಹಿತಕ್ರಿಯಾಲೋಪ ಪ್ರಸಂಗದಿಂದ ಪ್ರತ್ಯವಾಯವು ಉಂಟಾದೀತು.

**ಅಣುಭಾಷ್ಯ :** ''ಬ್ರಹ್ಮಣಾ ತು ಅಖಿಲೈಃಗುಣೈಃ ಉಪಾಸ್ಯಃ ಸರ್ವವೇದೈಶ್ಚ''

ಉಪಸಂಹೃತ್ಯ ಎಂದು ಸೇರಿಸಿಕೊಳ್ಳಬೇಕು. ಬ್ರಹ್ಮನಿಂದ ಸರ್ವವೇದೋಕ್ತವಾದ ಸರ್ವಗುಣಗಳನ್ನು ಉಪಸಂಹಾರ ಮಾಡುವ ಮೂಲಕವೇ ವಿಷ್ಣುವು ಧ್ಯಾನಿಸಲ್ಪಡತಕ್ಕದ್ದು ಎಂದು ಸಿದ್ಧಾಂತ.

**ಅಧಿಕರಣ - ೩**

**॥ ಪ್ರಾಪ್ತ್ಯಧಿಕರಣ ॥**

**॥ ಓಂ ಪ್ರಾಪ್ತೇಶ್ಚ ಸಮಂಜಸಮ್ ಓಂ ॥**

ಉಪಾಸಕರ ಯೋಗ್ಯತಾನುಸಾರವಾಗಿ ಅಂದರೆ ಪುರುಷ ಭೇದದಿಂದ ಉಪಸಂಹಾರ ಮತ್ತು ಅನುಪಸಂಹಾರ ಎಂಬುದಾಗಿ ಎರಡು ಅರ್ಥವೂ ಯುಕ್ತವೇ ಆಗಿವೆ. ಏಕೆಂದರೆ ಯೋಗ್ಯತೆಯು ವ್ಯವಸ್ಥಿತವಾದುದು. ''ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ । ಯುಗಪತ್ ಸ್ವಭುಜೌ ಯದ್ವತ್ ಧ್ಯಾಯೇತ್ ತಾವತ ಏವ ಸಃ'' ಎಂಬ ಶ್ರುತಿಯೇ ಇದಕ್ಕೆ ನಿಯಮಕವಾಗಿದೆ.

**ಅಣುಭಾಷ್ಯ :** ''ಸರ್ವೈರಪಿ ಯಥಾಬಲಮ್''

ಯಥಾಯೋಗ್ಯವಾಗಿ ಎಲ್ಲರಿಂದಲೂ ಭಗವದ್ಗುಣಗಳನ್ನು ಉಪಸಂಹಾರ ಮಾಡುವ ಮೂಲಕ ಉಪಾಸನೆ ಮಾಡತಕ್ಕದ್ದು. ತನ್ನ ಎರಡು ತೋಳುಗಳನ್ನು ಶಕ್ತ್ಯನುಸಾರವಾಗಿ ಒಟ್ಟಿಗೆ ಉಪಯೋಗಿಸಿಕೊಂಡು ಕಾರ್ಯನಿರ್ವಹಿಸುವಂತೆ, ಯಾರಿಗೆ ಎಷ್ಟೆಷ್ಟು ಗುಣಗಳನ್ನು ಅರಿತುಕೊಳ್ಳುವುದು ಸಾಧ್ಯವೋ, ಅಷ್ಟಷ್ಟು ಗುಣಗಳನ್ನು ಉಪಸಂಹಾರ ಮಾಡತಕ್ಕದ್ದು. ಚತುರ್ಮುಖ ಬ್ರಹ್ಮನಿಗೆ ಒಟ್ಟಿಗೇ ವೇದೋಕ್ತ ಸರ್ವಗುಣೋಪಸಂಹಾರವು ಸಾಧ್ಯವು. ಇತರರಿಗೆ ಯಥಾಯೋಗ್ಯವಾಗಿ ಬಹು ಗುಣೋಪಸಂಹಾರವು. ಮನುಷ್ಯೋತ್ತಮರಿಗೆ ನಾಲ್ಕು ಗುಣ

ಗಳನ್ನಷ್ಟೇ ಉಪಸಂಹಾರ ಸಾಧ್ಯವು. ಮನುಷ್ಯೋತ್ತಮರಿಗಿಂತ ಕೆಳಮಟ್ಟದವರಿಗೆ ಕೇವಲ ಆತ್ಮತ್ವರೂಪ ಒಂದೇ ಗುಣದ ಉಪಾಸನೆಯ ಸಾಧ್ಯವು. "ಗುಣೈಃ ಸರ್ವೈಃ ಉಪಾಸ್ಯೋಽಸೌ ಬ್ರಹ್ಮಣಾ ಪರಮೇಶ್ವರಃ। ಅನ್ಯೈಃ ಯಥಾಕ್ರಮಂ ಚೈವ ಮಾನುಷ್ಯೈಃ ಕೈಶ್ಚಿದೇವ ತು ॥" ಎಂಬ ಭವಿಷ್ಯತ್ ಪರ್ವದ ವಚನವು ಇದನ್ನು ಪುಷ್ಟೀಕರಿಸುತ್ತದೆ.

## ಅಧಿಕರಣ - ೪

## ॥ ಸರ್ವಾಭೇದಾಧಿಕರಣ ॥

## ॥ ಓಂ ಸರ್ವಾಭೇದಾದನ್ಯತ್ರೇಮೇ ಓಂ ॥

ಬ್ರಹ್ಮಾದಿಗಳು ಭಗವಂತನ ಸರ್ವಗುಣಗಳನ್ನು ಅಭೇದರೂಪಾತ್ಮಕವಾಗಿ ಅರಿತು ಭಗವಂತನನ್ನು ಸರ್ವಗುಣಯುಕ್ತನೆಂದು ಉಪಾಸನೆ ಮಾಡುತ್ತಾರೆ. ಆದ್ದರಿಂದ ಅಲ್ಪಗುಣೋಪಸಂಹಾರದಿಂದ ಉಪಾಸನೆ ಮಾಡುವ ಇತರರಿಗಿಂತ ದೊರೆಯುವ ಅಲ್ಪ ಫಲಕ್ಕಿಂತ ವಿಲಕ್ಷಣವಾದ ಸಂಪೂರ್ಣಾನಂದಾತ್ಮಕವಾದ ಮೋಕ್ಷಫಲದಲ್ಲಿ ಬ್ರಹ್ಮಾದಿಗಳು ಭಾಗಿಯಾಗುತ್ತಾರೆ. ಅಲ್ಪ ಗುಣೋಪಸಂಹಾರ ದಿಂದ ಅಲ್ಪವಾದ ಆನಂದರೂಪವಾದ ಫಲ. ಸರ್ವಗುಣೋಪಸಂಹಾರದಿಂದ ಸಂಪೂರ್ಣಾನಂದರೂಪವಾದ ಮೋಕ್ಷಫಲ ಎಂದು ತಾತ್ಪರ್ಯ. "ಸಂಪೂರ್ಣೋಪಾಸನಾತ್ ಬ್ರಹ್ಮಾ ಸಂಪೂರ್ಣಾನಂದಭಾಗ್ಭವೇತ್ । ಇತರೇ ತು ಯಥಾ ಯೋಗ್ಯಂ" ಇತ್ಯಾದಿ ಪದ್ಮ ಪುರಾಣದ ವಚನವು ಸಾಧನತಾರತಮ್ಯದಿಂದ ಫಲತಾರತಮ್ಯವು ಎಂಬುದನ್ನು ಪುಷ್ಟೀಕರಿಸುತ್ತದೆ.

**ಅಣುಭಾಷ್ಯ** : "ಸರ್ವೈಃ ಯಥಾಕ್ರಮಂ ಅಖಿಲೈ ಗುಣೈಃ ಉಪಾಸ್ಯಃ"

ಇಲ್ಲಿ ಸರ್ವಶಬ್ದವು ಅಲ್ಪ ಗುಣೋಪಸಂಹಾರ ಮಾಡುವವರಿಗಿಂತ ವಿಭಿನ್ನರಾದ ಅಧಿಕಾರಿಗಳನ್ನು ಹೇಳುತ್ತದೆ. 'ಅಖಿಲ' ಶಬ್ದಕ್ಕೆ ಬಹಳ ಎಂದರ್ಥ. ಮನುಷ್ಯೋತ್ತಮರಿಗಿಂತ ಉತ್ತಮ ಮಟ್ಟದ ಅಧಿಕಾರಿಗಳಿಂದ ಅವರವರ

ಯೋಗ್ಯತಾನುಸಾರಿಯಾಗಿ ಬಹುಗುಣ ಉಪಸಂಹಾರದಿಂದ ಭಗವಂತನು ಧ್ಯೇಯನು ಎಂದರ್ಥ.

## ಅಧಿಕರಣ - ೫
## ॥ ಆನಂದಾಧಿಕರಣ ॥
### ॥ ಓಂ ಆನಂದಾದಯಃ ಪ್ರಧಾನಸ್ಯ ಓಂ ॥

ಪ್ರಧಾನ ಫಲವಾದ ಮೋಕ್ಷಕ್ಕಾಗಿ ಆನಂದಾದಿ ಗುಣಗಳು ಅಂದರೆ ಆನಂದ, ಜ್ಞಾನ, ನಿರ್ದೋಷತ್ವ ಹಾಗೂ ಸ್ವಾಮಿತ್ವ ಎಂಬ ನಾಲ್ಕು ಗುಣಗಳು ಪ್ರಾಯಶಃ ಸರ್ವರಿಂದಲೂ ಉಪಾಸನೆ ಮಾಡತಕ್ಕದ್ದು ಎಂದು ತಾತ್ಪರ್ಯ.

''ಸಚ್ಚಿದಾನಂದ ಆತ್ಮೇತಿ ಬ್ರಹ್ಮೋಪಾಸಾ ವಿನಿಶ್ಚಿತಾ ।
ಸರ್ವೇಷಾಂ ಚ ಮುಮುಕ್ಷೂಣಾಂ ಫಲಸಾಮ್ಯಾದಪೇಕ್ಷಿತಾ ॥''

ಎಂಬುದಾಗಿ ಬ್ರಹ್ಮತರ್ಕವು ಹೇಳುತ್ತದೆ.

**ಅಣುಭಾಷ್ಯ :** ''ಸಚ್ಚಿದಾನಂದ ಆತ್ಮೇತಿ''

ಸತ್ - ನಿರ್ದುಷ್ಟನು, ಚಿತ್- ಜ್ಞಾನಸ್ವರೂಪನು, ಆನಂದಃ-ಆನಂದ ಸ್ವರೂಪನು, ಆತ್ಮಾ-ಸ್ವಾಮಿ, ಈ ಪ್ರಕಾರವಾಗಿ ಎಲ್ಲ ಮುಮುಕ್ಷುಗಳಿಂದಲೂ ಭಗವಂತನು ಉಪಾಸ್ಯನು. ಮಾನುಷ್ಯೈಃ-ಮನುಷೋತ್ತಮರಿಂದ ಮಾತ್ರ ಸತ್, ಚಿತ್, ಆನಂದ, ಆತ್ಮಾ ಎಂಬುದಾಗಿ ನಾಲ್ಕು ಗುಣಗಳಿಂದಲೇ ವಿಷ್ಣುವು ಉಪಾಸ್ಯನು ಎಂದು ತಿಳಿಯತಕ್ಕದ್ದು.

## ಅಧಿಕರಣ - ೬
## ॥ ಪ್ರಿಯಶಿರಸ್ತ್ವಾಧಿಕರಣ ॥
### ॥ ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿಃ ಉಪಚಯಾಪಚಯೌ ಹಿ ಭೇದೇ ಓಂ ॥

''ತಸ್ಯ ಪ್ರಿಯಮೇವ ಶಿರಃ'' ಇತ್ಯಾದಿ ಶ್ರುತವಾದ ಪರಮಾತ್ಮನ ಪ್ರಿಯ ಶಿರಸ್ತ್ವಾದಿ ಗುಣಗಳ ಉಪಾಸನೆಯು ಎಲ್ಲರಿಂದಲೂ ಸಾಧ್ಯವಿಲ್ಲ, ಏಕೆಂದರೆ

ಮುಕ್ತಿಫಲದಲ್ಲಿ ಭೇದವು, ಅಂದರೆ ತಾರತಮ್ಯವು ನಿಯಾಮಕತ್ವವು. ಉಪಾಸನೆಯಲ್ಲಿ ವೃದ್ಧಿ-ಹ್ರಾಸಾತ್ಮಕವಾದ ತಾರತಮ್ಯವು ಇರುವುದಾಗಿ ನಿಶ್ಚಿತವು - (ಉಪಚಯ-ವೃದ್ಧಿ, ಅಪಚಯ - ಹ್ರಾಸ) ಎಂದು ತಾತ್ಪರ್ಯ.

**ಅಣುಭಾಷ್ಯ : "ಮಾನುಷ್ಯೈಸ್ತು"**

ಮನುಷ್ಯೋತ್ತಮರಿಗೆ ಪ್ರಿಯಶಿರಸ್ತ್ವಾದಿ ಗುಣೋಪಾಸನೆಯು ಹೇಳಲ್ಪಟ್ಟಿಲ್ಲ. 'ಸಚ್ಚಿದಾನಂತ ಆತ್ಮಾ' ಎಂಬುದಾಗಿ ಚತುರ್ಗುಣ ಉಪಾಸನೆಯು ಮನುಷೋತ್ತಮರಿಗೆ ನಿಶ್ಚಿತವು. ಮಾನುಷ್ಯೈಸ್ತು ಎಂಬಲ್ಲಿರುವ 'ತು' ಶಬ್ದವು ನಿಶ್ಚಿತಾರ್ಥಪರವು.

## ಅಧಿಕರಣ - ೭

## ॥ ಇತರಾಧಿಕರಣ ॥

### ॥ ಓಂ ಇತರೇ ತು ಅರ್ಥಸಾಮಾನ್ಯಾತ್ ಓಂ ॥

ವಿರಿಂಚಿಯಿಂದ ಇತರರಾದ ದೇವತೆಗಳಿಂದ ಪೂರ್ವೋಕ್ತವಾದ ಆನಂದಾದಿ ನಾಲ್ಕು ಗುಣಗಳಲ್ಲದೇ ಪರಮಾತ್ಮನ ಇನ್ನೂ ಅನೇಕ ಗುಣಗಳು ಉಪಸಂಹಾರ ಮಾಡತಕ್ಕುವೇ ಆಗಿವೆ. ಏಕೆಂದರೆ ಫಲವು ಉಪಾಸನೆಗೆ ಸಮಾನವಾದುದಾಗಿದೆ. ದೇವತೆಗಳಲ್ಲಿ ಅವರವರ ಯೋಗ್ಯತಾನುಸಾರಿಯಾದ ಫಲವು ನಿಶ್ಚಿತವಾದುದರಿಂದ ಉಪಾಸನೆಯಲ್ಲಿಯೂ ಯೋಗ್ಯತಾನುಸಾರಿ ತಾರತಮ್ಯವನ್ನು ಅಂಗೀಕರಿಸಲೇಬೇಕು ಎಂದು ತಾತ್ಪರ್ಯ.

**ಅಣುಭಾಷ್ಯ:** "ಸುರೇಶ್ವರೈಃ ಯಥಾಕ್ರಮಂ ಬಹುಗುಣೈಃ ಉಪಾಸ್ಯಃ"

'ಸುರೇಶ್ವರೈಃ' ಎಂದರೆ ವಿರಿಂಚಿಯಿಂದ ಇತರರಾದ ದೇವತೆಗಳಿಂದ ಎಂದರ್ಥ. ಬಹುಗುಣತ್ವರೂಪ ಉಪಾಸನೆಯಲ್ಲಿ ಎಲ್ಲರಿಗೂ ಏಕಪ್ರಕಾರತ್ವವು ಕಂಡಿಲ್ಲವಾದ್ದರಿಂದ (ಫಲದಲ್ಲಿ ವಿಭಿನ್ನತೆ ಕಂಡಿರುವುದರಿಂದ) ಅದನ್ನು ಸಮರ್ಥಿಸಲು 'ಯಥಾಕ್ರಮಂ' ಯೋಗ್ಯತಾ ಕ್ರಮಾನುಸಾರವಾಗಿ ಎಂಬುದಾಗಿ ಇಲ್ಲಿ ಸ್ಪಷ್ಟಪಡಿಸಲಾಗಿದೆ.

## ಅಧಿಕರಣ - ೮

## ॥ ಆಧ್ಯಾನಾಧಿಕರಣ ॥

## ॥ ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ ॥

ಚತುರ್ಗುಣೋಪಸಂಹಾರ ಮಾಡದೇ ಉಪಾಸನೆ ಮಾಡುವವರಿಗೂ ಮೋಕ್ಷ ಫಲವು ನಿಶ್ಚಿತವಿರುವಾಗ ಸರ್ವಗುಣೋಪಸಂಹಾರಕ್ಕೆ ಕರ್ತವ್ಯತಾರೂಪ ವಿಧಿಯಿರುವುದಿಲ್ಲ. ಪ್ರಯೋಜನವಿಲ್ಲದಿರುವುದರಿಂದ ಬಹುಗುಣೋಪ ಸಂಹಾರವು ವ್ಯರ್ಥವು. ಈ ವಿಷಯದಲ್ಲಿ ಪ್ರಮಾಣವೂ ಇರುವುದಿಲ್ಲ ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಬಹುಗುಣೋಪಸಂಹಾರವು ನಿಷ್ಫಲ ವಲ್ಲ. ಹೆಚ್ಚು ಹೆಚ್ಚಿನ ಗುಣಗಳನ್ನು ಉಪಸಂಹಾರ ಮಾಡುವುದರಿಂದ ಯೋಗ್ಯ ಅಧಿಕಾರಿಗಳಿಗೆ ಮುಕ್ತಿಯಲ್ಲಿ ಯೋಗ್ಯತೆಗೆ ಅನುಗುಣವಾಗಿ ಆನಂದಾತಿಶಯವು ಹೇಳಲ್ಪಟ್ಟಿದೆ.

''ಯಾವತ್ ಸೇವಾ ಪರೇ ತತ್ತ್ವೇ ತಾವತ್ ಸುಖವಿಶೇಷತಾ'' ಎಂಬುದಾಗಿ ಸ್ಕಾಂದ ಪುರಾಣದ ವಚನವು ಇದಕ್ಕೆ ಪ್ರಮಾಣವಾಗಿದೆ, ಆದ್ದರಿಂದ ಸಮ್ಯಕ್ ಸರ್ವಗುಣೋಪಸಂಹಾರ ಪೂರ್ವಕವಾಗಿ ಧ್ಯಾನ ಮಾಡಲಿಕ್ಕಾಗಿ ಅಂದರೆ ಅಂಥಹ ಉತ್ತಮ ಅಧಿಕಾರಿಗಳ ಪ್ರಯೋಜನಕ್ಕಾಗಿ ವೇದಗಳಲ್ಲಿ ಸರ್ವಗುಣಗಳೂ ಹೇಳಲ್ಪಟ್ಟಿವೆ. ವೇದೋಕ್ತ ಸರ್ವಗುಣಗಳಿಗೂ ಪ್ರಯೋಜಕತ್ವವಿದೆ ಎಂದು ತಾತ್ಪರ್ಯ.

**ಅಣುಭಾಷ್ಯ :**

ಈ ಅಧಿಕರಣದ ತಾತ್ಪರ್ಯವನ್ನು ೩ನೇ ಅಧಿಕರಣ (ಪ್ರಾಪ್ತ್ಯಧಿಕರಣ) ವನ್ನು ಸಂಗ್ರಹಿಸುವಾಗಲೇ ಹೇಳಿರುವುದರಿಂದ ಇಲ್ಲಿ ಮತ್ತೆ ಹೇಳಿರುವುದಿಲ್ಲ. ''ಯಸ್ಯ ಯಾವದ್ಗುಣಾಃ ಪ್ರತಿಭಾಸಂತಿ ಉಪಾಸನೇ'' ಇತ್ಯಾದಿ ಪ್ರಮಾಣವನ್ನು ಅಲ್ಲಿಯೇ ನೀಡಲಾಗಿದೆ.

## ಅಧಿಕರಣ - ೯

## ॥ ಆತ್ಮಗೃಹೀತ್ಯಧಿಕರಣ ॥

## ॥ ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ ॥

ಆತ್ಮಶಬ್ದದಿಂದ ಆನಂದಾದಿ ಅನೇಕ ಗುಣಗಳನ್ನು ಗ್ರಹಣ ಮಾಡುವುದು ಹೇಗೆ ಅಂಗೀಕರಿಸಲು ಸಾಧ್ಯ ಎಂದು ಕೇಳಿದರೆ ಅದಕ್ಕೆ ಉತ್ತರ - "ಇತರವತ್" ಅಂದರೆ ಸತ್ಯಜ್ಞಾನಾದಿ ವಾಕ್ಯದಲ್ಲಿರತಕ್ಕ ಸತ್ಯಾದಿ ಶಬ್ದಗಳು ಹೇಗೆ ಜೀವಕತ್ವ, ವಿನಾಶಕತ್ವ ಮೊದಲಾಗಿ ಅನೇಕ ಗುಣಗಳನ್ನು ಹೇಳುತ್ತವೆಯೋ ಹಾಗೆಯೇ ಇಲ್ಲಿಯೂ ತಿಳಿಯತಕ್ಕದ್ದು. "ಸತ್ವಂ ಜೀವನಮೇವ ಚ" "ವಿಶೀರ್ಣತಾ ಚ ಸತ್ವಂ ಸ್ಯಾತ್" ಇತ್ಯಾದಿ ವಾಕ್ಯಗಳು ಇದಕ್ಕೆ ಪ್ರಮಾಣವು. ಇದಾದರೂ ಹೇಗೆ ಒಪ್ಪಬೇಕು ಎಂದರೆ ಅದಕ್ಕೆ "ಆತ್ಮೇತ್ಯೇವೋಪಾಸಿತ" ಎಂದು ಹೇಳುವ ಬೃಹದಾರಣ್ಯಕದ ಮುಂದಿನ ವಾಕ್ಯದಲ್ಲಿ "ಅತ್ರ ಹ್ಯೇತೇ ಸರ್ವ ಏಕೀಭವಂತಿ" ಎಂದು ಆತ್ಮಶಬ್ದದಲ್ಲಿ ಎಲ್ಲ ಗುಣಗಳೂ ಸೇರಿವೆ ಎಂದು ಪ್ರತಿಪಾದಿಸಲಾಗಿದೆ.

**ಅಣುಭಾಷ್ಯ :**

ಈ ಅಧಿಕರಣದ ತಾತ್ಪರ್ಯವನ್ನು "ಆನಂದಾದಯಃ ಪ್ರಧಾನಸ್ಯ" ಎಂಬುದಾಗಿ ಪಂಚಮಾಧಿಕರಣದ ತಾತ್ಪರ್ಯವನ್ನು ಹೇಳುವಾಗಲೇ "ಸಚ್ಚಿದಾನಂದ ಆತ್ಮಾ" ಎಂಬ ವಚನದಿಂದ ಸಂಗ್ರಹಿಸಲಾಗಿದೆ.

## ಅಧಿಕರಣ - ೧೦

## ॥ ಅನ್ವಯಾಧಿಕರಣ ॥

## ॥ ಓಂ ಅನ್ವಯಾದಿತಿ ಚೇತ್‌ಸ್ಯಾತ್ ಅವಧಾರಣಾತ್ ಓಂ ॥

ಆತ್ಮ ಶಬ್ದವು ಸರ್ವಗುಣಗಳನ್ನೂ ಪ್ರತಿಪಾದಿಸುತ್ತದೆ ಎಂದು ಹೇಳುವುದಾದರೆ, ಅದು ಎಲ್ಲರಿಂದಲೂ ಉಪಾಸ್ಯವಾಗಲು ಸಾಧ್ಯವಿಲ್ಲ. ಏಕೆಂದರೆ ಒಂದು, ನಾಲ್ಕು, ಬಹುಗುಣಗಳು ಇತ್ಯಾದಿ ರೀತಿಯಲ್ಲಿ ಉಪಸಂಹಾರವು ಅಧಿಕಾರಿಯ

ಯೋಗ್ಯತಾನುಸಾರಿ ಉಪಾಸನೆಗೆ ಅರ್ಹವು ಎಂಬುದಾಗಿ ಈಗಾಗಲೇ ಪ್ರತಿಪಾದಿಸಲಾಗಿದೆ. ಆದ್ದರಿಂದ ಆತ್ಮ ಶಬ್ದದಲ್ಲಿ ಸರ್ವಗುಣಗಳ ಸಮನ್ವಯವು ಕೂಡುವುದಿಲ್ಲ ಎಂದು ಹೇಳಿದರೆ-ಅದಕ್ಕೆ ಉತ್ತರ ಆತ್ಮ ಶಬ್ದಕ್ಕೆ ಸರ್ವಗುಣವಾಚಕತ್ವವು "ಸ್ಯಾತ್" ಅಂದರೆ ಅಂಗೀಕೃತವೇ ಆಗಿದೆ. ಆತ್ಮವು ಸರ್ವಗುಣಾಭಿಧಾಯಕವೆಂದು ಒಪ್ಪಿದರೂ, ಹಾಗೆಂದೇ ಉಪಾಸನೆ ಮಾಡಬೇಕು. ಏಕೆಂದರೆ ಆ ವಾಕ್ಯದಲ್ಲಿ "ಆತ್ಮೇತ್ಯೇವ" ಎಂಬುದಾಗಿ ನಿಶ್ಚಿಯಾರ್ಥವಾದ 'ಏವ' ಶಬ್ದವಿದೆ. ಬ್ರಹ್ಮಾದಿಗಳಿಗೆ ಸರ್ವಗುಣೋಪಸಂಹಾರದಲ್ಲಿ ಅಧಿಕಾರವಿರುವುದರಿಂದ ಹೀಗೆ ವಿಧಿರೂಪದಲ್ಲಿ ಹೇಳಲಾಗಿದೆ. ಆತ್ಮಶಬ್ದವು ಅಧಿಕಾರಿಯ ಯೋಗ್ಯತಾನುಸಾರ ಅನೇಕ ಗುಣಗಳನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ಆತ್ಮಶಬ್ದದಿಂದ ಎಲ್ಲರಿಂದಲೂ ಎಲ್ಲ ಗುಣಗಳ ಉಪಸಂಹಾರವು ಸಾಧ್ಯವಿಲ್ಲ ಎಂದು ಪ್ರತಿಪಾದಿಸುವುದರಿಂದ ಅಪ್ರಮಾಣತ್ವವು ಬರುವುದಿಲ್ಲ. ಒಟ್ಟು ಅಭಿಪ್ರಾಯವೇನೆಂದರೆ - ಆತ್ಮಶಬ್ದವು ಸರ್ವಗುಣ ಬೋಧಕವಾಗಿದ್ದರೂ ಕೂಡ ಚತುರ್ಮುಖ ಬ್ರಹ್ಮನನ್ನು ಹೊರತು ಪಡಿಸಿ ಇತರರಿಗೆ ಸರ್ವಗುಣ ಬೋಧಕವಲ್ಲ ಎಂಬುದಾಗಿ ಸಿದ್ಧಾಂತವು.

**ಅಣುಭಾಷ್ಯ :** "ಸರ್ವೈರಪಿ ಯಥಾಕ್ರಮಂ ಆತ್ಮೇತ್ಯುಪಾಸ್ಯಃ"

ಎಲ್ಲ ಅಧಿಕಾರಿಗಳಿಂದಲೂ ಈ ಆತ್ಮ ಶಬ್ದವು ಯೋಗ್ಯತಾನುಸಾರವಾಗಿ ಗುಣಗಳನ್ನು ಹೇಳುತ್ತದೆ ಎಂದು ತಿಳಿದು ವಿಷ್ಣುವನ್ನು ಉಪಾಸನೆ ಮಾಡತಕ್ಕದ್ದು ಎಂದು ತಾತ್ಪರ್ಯ.

## ಅಧಿಕರಣ - ೧೧

## ॥ ಕಾರ್ಯಾಧಿಕರಣ ॥

## ॥ ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ ॥

ಆನಂದಾದಿ ಗುಣಸಮೂಹವು ಅಪೂರ್ವವು, ಅಂದರೆ ಅಲೌಕಿಕವು ಎಂಬುದಾಗಿ ತಿಳಿದು ಉಪಾಸನೆ ಮಾಡಬೇಕು. ಏಕೆಂದರೆ ಉಪಾಸನಾಸಾಧ್ಯವಾದ ಮೋಕ್ಷವು ಅಲೌಕಿಕವು ಎಂದು ಶ್ರುತಿಸ್ಮೃತಿಗಳಲ್ಲಿ ಹೇಳಲಾಗಿದೆ. "ಅಲೌಕಿಕಾಸ್ತ್ವ

ಗುಣಾ ಉಪಾಸ್ಯಾಃ, ಅಲೌಕಿಕಂ ಮುಕ್ತಿಕಾರ್ಯಂ ಯತೋಽಸ್ಯ'' ಎಂಬುದಾಗಿ ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ''ಭಗವಂತನಗುಣಗಳು ಲೋಕವಿಲಕ್ಷಣಗಳೇ ಆಗಿವೆ ಎಂದು ಉಪಾಸನೆ ಮಾಡಬೇಕು'' ಎಂದು ಈ ಅಧಿಕರಣ ತಾತ್ಪರ್ಯ.

**ಅಣುಭಾಷ್ಯ :** ''ತು ಉಪಾಸ್ಯಃ''

ಇಲ್ಲಿ 'ತು' ಶಬ್ದವು ಅಲೌಕಿಕ ಗುಣವತ್ವ ರೂಪವಾದ ವಿಶೇಷ ಅರ್ಥವನ್ನು ಸೂಚಿಸುತ್ತದೆ.

## ಅಧಿಕರಣ - ೧೨
## ॥ ಸಮಾನಾಧಿಕರಣ ॥
### ॥ ಓಂ ಸಮಾನ ಏವಂ ಚಾಭೇದಾತ್ ಓಂ ॥

ಏವಂ ಚ - ಭಗವಂತನ ಧರ್ಮಗಳ ಅಪೂರ್ವತ್ವ ವಿಷಯದಲ್ಲಿ ಉಪಸಂಹಾರ ಮಾಡುವ ಯೋಗ್ಯತೆಯಿದ್ದರೂ ಬ್ರಹ್ಮಾಣಿ ಅಂದರೆ ಸರಸ್ವತೀ ದೇವಿಗೆ ಸಮಾನೇ-ಸ್ವಯೋಗ್ಯವಾದ ಭಗವದ್ಗುಣ ವಿಷಯದಲ್ಲಿ ಮಾತ್ರ ಉಪಸಂಹಾರವು ಅಂಗೀಕರಿಸಲ್ಪಡುತ್ತದೆ. ತನ್ನ ಯೋಗ್ಯತೆಗೆ ಮೀರಿದ ಭಗವಂತನ ತ್ರಿವಿಕ್ರಮಾದಿ ಕ್ರಿಯಾ ವಿಶೇಷಗಳಲ್ಲಿ ಉಪಸಂಹಾರವು ಸಾಧ್ಯವಿಲ್ಲ. ಏಕೆಂದರೆ, ಅಭೇದಾತ್ - ಒಮ್ಮೊಮ್ಮೆ ಅಭಿವ್ಯಕ್ತವಾಗುವ ತ್ರಿವಿಕ್ರಮಾದಿ ಕ್ರಿಯಾವಿಶೇಷಗಳಾದರೂ ನಿತ್ಯವೂ ವ್ಯಕ್ತವಾಗಿರುವ ಕ್ರಿಯಾ ವಿಶೇಷಗಳಲ್ಲಿಯೇ ಅಂತರ್ಭಾವವಾಗುತ್ತವೆ. ಅಂಥಹ ಕ್ರಿಯಾವಿಶೇಷಗಳನ್ನು ಬೇರೆ ಬೇರೆಯಾಗಿ ಉಪಸಂಹಾರ ಮಾಡಿಕೊಂಡು ಉಪಾಸನೆ ಮಾಡುವ ಯೋಗ್ಯತೆ ಬ್ರಹ್ಮದೇವರಿಗೆ ಮಾತ್ರ ಇರುವುದು. ಬ್ರಹ್ಮಾಣಿಗೆ ಈ ರೀತಿಯ ಪೃಥಗುಪಾಸನೆಗೆ ಯೋಗ್ಯತೆ ಇರುವುದಿಲ್ಲ. ಏಕೆಂದರೆ ಬ್ರಹ್ಮನಿಗೂ ಬ್ರಹ್ಮಾಣಿಗೂ ಮೋಕ್ಷದಲ್ಲಿನ ಆನಂದದಲ್ಲಿ ತಾರತಮ್ಯವಿದೆ. ಉಪಾಸನೆಯು ಸ್ವಯೋಗ್ಯತಾನುಸಾರಿ ಫಲಪ್ರದವೇ ಆಗಿರುವುದು. ಬ್ರಹ್ಮಾಣಿಗಿಂತ ಬ್ರಹ್ಮದೇವರ ಯೋಗ್ಯತೆಯು ಅಧಿಕ ಫಲಪ್ರದವು ಎಂಬುದಾಗಿ ಸಿದ್ಧಾಂತ.

**ಅಣುಭಾಷ್ಯ :** ''ಯಥಾಕ್ರಮಂ''

ಸ್ವಯೋಗ್ಯತಾಕ್ರಮಾನುಸಾರವಾಗಿ ಉಪಸಂಹರಿಸಕೊಂಡು ಉಪಾಸನೆ ಮಾಡಬೇಕು. ಉಪಾಸನೆಯು ಸ್ವಯೋಗ್ಯತಾನುಸಾರಿಯಾಗಿಯೇ ಫಲಪ್ರದವು ಎಂಬುದನ್ನು 'ಯಥಾಕ್ರಮಂ' ಎಂಬ ಶಬ್ದದಿಂದ ಸಂಗ್ರಹಿಸಿದ್ದಾರೆ.

**ಅಧಿಕರಣ - ೧೩**

**॥ ನವಾಧಿಕರಣ ॥**

**॥ ಓಂ ನ ವಾ ವಿಶೇಷಾತ್ ಓಂ ॥**

ಆತ್ಮಶಬ್ದದಿಂದ ಸರ್ವಗುಣಗಳ ಉಪಸಂಹಾರವು ಎಲ್ಲರಿಗೂ ಸಾಧ್ಯವಿಲ್ಲ. ಏಕೆಂದರೆ, ಆತ್ಮಶಬ್ದಕ್ಕೆ ಆಯಾಯ ಅಧಿಕಾರಿಗಳಿಗೆ ಯೋಗ್ಯವಾದ ಗುಣಗಳನ್ನು ಬೋಧಿಸುವ ವಿಶೇಷತೆಯನ್ನು ಅಂಗೀಕರಿಸಲಾಗಿದೆ. ಭಾಲ್ಲವೇಯ ಶ್ರುತಿಯೂ ಇದನ್ನೇ ಹೇಳುತ್ತದೆ.

''ಸರ್ವಾನ್ ಗುಣಾನ್ ಆತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನ ಚೈವ''. ಆದ್ದರಿಂದ ಮೇಲೆ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧಾಂತ.

**ಅಣುಭಾಷ್ಯ :**

ಈ ಅಧಿಕರಣದ ತಾತ್ಪರ್ಯವೂ ಉಕ್ತಪ್ರಾಯವೇ ಆಗಿದೆ. ''ಅನ್ವಯಾತ್'' ಎಂಬ ಹತ್ತನೆಯ ಅಧಿಕರಣದೊಂದಿಗೆ ಇದು ಸಮಾನಾರ್ಥವುಳ್ಳದ್ದಾಗಿದೆ. ಆದ್ದರಿಂದ ಇಲ್ಲಿ ಮತ್ತೆ ಸಂಗ್ರಹಿಸಿಲ್ಲ. ಆದರೂ ಸೂತ್ರಕಾರರಿಗೆ ಪುನರುಕ್ತಿದೋಷ ವಿಲ್ಲ ಎಂಬುದನ್ನು ಅಭಿನವಚಂದ್ರಿಕಾದಿ ಗ್ರಂಥಗಳಲ್ಲಿ ತೋರಿಸಲಾಗಿದೆ.

**ಅಧಿಕರಣ - ೧೪**

**॥ ಸಂಭೃತ್ಯಧಿಕರಣ ॥**

**॥ ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ ॥**

ಪರಮಾತ್ಮನ ಗುಣಗಳನ್ನು ಚೆನ್ನಾಗಿ ಮನೋಧಾರಣೆ ಮಾಡುವುದು

ಹಾಗೂ ಪ್ರಕಾಶರೂಪದಿಂದ ವ್ಯಾಪ್ತಿಯನ್ನು ಅರಿಯುವುದು - ಇವುಗಳೂ ಕೂಡ ಎಲ್ಲರಿಂದಲೂ ಉಪಾಸ್ಯವಲ್ಲ, ದೇವತೆಗಳಿಂದ ಮಾತ್ರ ಉಪಾಸ್ಯವು. ಏಕೆಂದರೆ, ಅತಃ ಚ(ಏವ), ಅಂದರೆ ಯೋಗ್ಯತಾ ವಿಶೇಷವಿರುವುದರಿಂದಲೇ ಎಂದು ತಾತ್ಪರ್ಯ.

**ಅಣುಭಾಷ್ಯ :**

ಈ ಅಧಿಕರಣದ ತಾತ್ಪರ್ಯವೂ ಉಕ್ತಪ್ರಾಯವೇ. ಅಂದರೆ "ಮಾನುಷ್ಯೈಸ್ತು" ಎಂಬ ಶಬ್ದದಿಂದ ಆರನೆಯ ಅಧಿಕರಣದ ತಾತ್ಪರ್ಯದಲ್ಲಿಯೇ ಈ ಅಧಿಕರಣದ ತಾತ್ಪರ್ಯವೂ ಸಂಗ್ರಹಿಸಲ್ಪಟ್ಟಿದೆ.

## ಅಧಿಕರಣ - ೧೫

## ॥ ಪುರುಷಾಧಿಕರಣ ॥

## ॥ ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ ॥

ಪುರುಷಸೂಕ್ತವಿದ್ಯೆಗೆ ಸರ್ವವಿದ್ಯೆಗಳಲ್ಲಿ ಶ್ರೇಷ್ಠತ್ವವಿದ್ದರೂ, ಅದೊಂದೇ ವಿದ್ಯೆಯಿಂದಲೇ ಸರ್ವಗುಣಗಳೂ ಹೇಳಲ್ಪಟ್ಟಿಲ್ಲ. ಆದ್ದರಿಂದ ಇತರ ವೇದ ಗಳಿಂದಲೂ ಗುಣಗಳನ್ನು ತಿಳಿದುಕೊಂಡು ಸರ್ವತಃ ಗುಣೋಪಸಂಹಾರವನ್ನು ಮಾಡತಕ್ಕದ್ದೇ ಆಗಿದೆ. ಅಲ್ಲದೆ ಮಂದಾಧಿಕಾರಿಗಳ ಅಪೇಕ್ಷೆಯಿಂದ ಒಂದೇ ಕಡೆಯಲ್ಲಿ ಎಲ್ಲ ಗುಣಗಳೂ ಬೋಧಿಸಲ್ಪಟ್ಟಿರುವುದಿಲ್ಲ. ಆದ್ದರಿಂದ ವೇದವಿದ್ಯೆಯ ಬೇರೆ ಬೇರೆಯ ವಿಭಾಗಗಳಿಂದ ಹಲವಾರು ಗುಣಗಳನ್ನು ಅರಿತು ಉಪಾಸನೆ ಮಾಡತಕ್ಕದ್ದು ಎಂದು ಸಿದ್ಧಾಂತ.

## ಅಧಿಕರಣ - ೧೬

## ॥ ವೇಧಾದ್ಯಧಿಕರಣ ॥

## ॥ ಓಂ ವೇಧಾದ್ಯರ್ಥಭೇದಾತ್ ಓಂ ॥

ವೇಧಾದಿ(ಭೇದನಾದಿ) ಗುಣಗಳು ಸರ್ವರಿಂದಲೂ ಉಪಾಸ್ಯವಲ್ಲ.

ಏಕೆಂದರೆ ಅರ್ಥಭೇದವಿದೆ. ಅಂದರೆ ಫಲಭೇದವಿದೆ. ಭೇದನಾದಿ ಗುಣೋಪ ಸಂಹಾರವು ದುಷ್ಟಹಿಂಸಾರೂಪವಿಲಕ್ಷಣ ಫಲವತ್ತ್ವವನ್ನು ಹೊಂದಿದೆ. ಆದಕಾರಣ ಅಂಥಹ ಉಪಾಸನೆಯಲ್ಲಿ ಯತ್ಯಾದಿಗಳಿಗೆ ಅಧಿಕಾರವಿಲ್ಲ ಎಂದು ಸಿದ್ಧಾಂತ.

**ಅಣುಭಾಷ್ಯ :**

ಮೇಲಿನ ಎರಡು ಅಧಿಕರಣಗಳ ತಾತ್ಪರ್ಯವೂ "ಉಪಸಂಹಾರೋಽ ರ್ಥಾಭೇದಾತ್" ಎಂಬ ದ್ವಿತೀಯಾಧಿಕರಣದ ತಾತ್ಪರ್ಯವನ್ನು ಸಂಗ್ರಹಿಸು ವಾಗಲೇ ಹೇಳಲ್ಪಟ್ಟಿದೆ. ಅಲ್ಲಿ ಸರ್ವವೇದೋಕ್ತಗುಣೋಪಸಂಹಾರವು ಕರ್ತವ್ಯವು ಎಂಬುದಾಗಿ ಪ್ರತಿಪಾದಿಸಲಾಗಿದೆ.

**ಅಧಿಕರಣ - ೧೭**

**॥ ಹಾನ್ಯಧಿಕರಣ ॥**

**॥ ಓಂ ಹಾನೌ ತೂಪಾಯಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ತದುಕ್ತಮ್ ಓಂ ॥**

ಬಂಧಹಾನಿ ರೂಪ ಮುಕ್ತಿಯಲ್ಲಿ ಸ್ವೇಚ್ಛೆಯಿಂದಲೇ ಮುಕ್ತರು ಉಪಾಸನೆ ಯನ್ನು ಮಾಡುತ್ತಾರೆ, ಹೊರತು ವಿಧಿರೂಪದಿಂದಲ್ಲ. ಏಕೆಂದರೆ "ಬ್ರಹ್ಮ ವಿದಾಪ್ನೋತಿ ಪರಂ" ಎಂದು ಹೇಳುವ ಮೋಕ್ಷ ವಾಕ್ಯದಲ್ಲಿ ಜ್ಞಾನದಿಂದ ಮೋಕ್ಷ ಎಂದು ಹೇಳಿರುವುದರಿಂದ, ಮೋಕ್ಷ ಪ್ರಾಪ್ತಿಗಾಗಿ ಉಪಾಸನಾ ವಿಧಿಯು ಪ್ರವೃತ್ತ ವಾಗಿದೆ. ಮೋಕ್ಷಪ್ರಾಪ್ತಿಯಾದ ಮೇಲೆ ವಿಧಿಗಳು ಇರುವುದಿಲ್ಲ. ಹಾಗಿದ್ದರೂ ಸ್ವೇಚ್ಛೆ ಯಿಂದ ಉಪಾಸನೆಯು ಹೇಗೆ ಕೂಡುತ್ತದೆ ಎಂದರೆ - "ಕುಶಾತ್" ಇತ್ಯಾದಿ ಹೇಳಿದ್ದಾರೆ. ನಿಯತವಾದ ಬ್ರಹ್ಮಯಜ್ಞಾನಂತರವೂ ಕೂಡ ದ್ವಿಜರು ಸ್ವೇಚ್ಛೆ ಯಿಂದಲೇ ಧರ್ಭೆಯನ್ನು ಧರಿಸಿಕೊಂಡು ಮಂತ್ರಾಧ್ಯಯನವನ್ನು ಹೇಗೆ ಮಾಡು ತ್ತಾರೋ ಹಾಗೆಯೇ. ಇದಕ್ಕೆ ಪ್ರಮಾಣವೇನು ಎಂದರೆ - "ಮುಕ್ತಾ ಅಪಿ ಹಿ ಕುರ್ವಂತಿ ಸ್ವೇಚ್ಛಯೋಪಾಸನಂ ಹರೇಃ" "ಏತತ್‌ಸಾಮಗಾಯನ್ನಾಸ್ತೇ" ಇತ್ಯಾದಿ ಯಾಗಿ ಶ್ರುತಿಗಳು ಮೋಕ್ಷಾನಂತರವೂ ಸ್ವೇಚ್ಛೆಯಿಂದ ಉಪಾಸನೆಯನ್ನು ಸಮರ್ಥಿಸುತ್ತವೆ.

**ಅಣುಭಾಷ್ಯ :** "ಸರ್ವೈರಪಿ ಉಪಾಸ್ಯಃ"

ಸಂಸಾರಿಗಳಿಂದಲೂ, ಮುಕ್ತರಿಂದಲೂ ಭಗವಂತನು ಉಪಾಸ್ಯನು ಎಂದು ತಾತ್ಪರ್ಯ.

## ಅಧಿಕರಣ - ೧೮

## ॥ ಛಂದಾಧಿಕರಣ ॥

## ॥ ಓಂ ಛಂದತ ಉಭಯಾವಿರೋಧಾತ್ ಓಂ ॥

ಮುಕ್ತರು ಸ್ವೇಚ್ಛೆಯಿಂದ ಕೆಲವೊಮ್ಮೆ ಕರ್ಮಮಾಡುತ್ತಾರೆ. ಏಕೆಂದರೆ ವಿಧಿ, ನಿಷೇಧಗಳಿಂದ ವಿರೋಧವಿಲ್ಲ. ಅಂದರೆ ಅವರಿಗೆ ವಿಧಿ, ನಿಷೇಧಗಳು ಇರುವುದಿಲ್ಲ ಎಂದರ್ಥ. ವಿಷ್ಣು ಪೂಜಾತ್ಮಕವಾದ ಕರ್ಮಗಳನ್ನು ಮಾಡಲು ಶಕ್ತರಾದುದರಿಂದ ಮುಕ್ತರು ನಿಯಮೇನ ಕರ್ಮ ಮಾಡುತ್ತಾರೆ ಎಂದು ಹೇಳುವುದು ಸರಿಯಲ್ಲ. ಸರ್ವದಾ ಕರ್ಮ ಮಾಡಲು ಅವರು ಶಕ್ತರಿದ್ದರೂ ಕೆಲವೊಮ್ಮೆ ಸ್ವೇಚ್ಛೆಯಿಂದಲೇ ಕರ್ಮಮಾಡುತ್ತಾರೆ ಹಾಗೂ ಕೆಲವೊಮ್ಮೆ ಮಾಡುವುದಿಲ್ಲ. ಏಕೆಂದರೆ ಮಾಡಿಯೇ ತೀರಬೇಕೆಂಬ ನಿಯಮವಿಲ್ಲ. ಈ ವಿಷಯದಲ್ಲಿ ಪ್ರಮಾಣವಿಲ್ಲದಿಲ್ಲ.

"ಕದಾಚಿತ್ ಕರ್ಮ ಕುರ್ವಂತಿ ಕದಾಚಿನ್ನೈವ ಕುರ್ವತೇ ।
ಪ್ರತ್ಯವಾಯಸ್ಯ ಬಂಧಸ್ಯಾಪ್ಯಭಾವಾತ್ ಸ್ವೇಚ್ಛಯಾ ಭವೇತ್ ॥"

ಎಂಬ ಬ್ರಹ್ಮಾಂಡ ಪುರಾಣದ ವಾಕ್ಯವು ಈ ವಿಷಯದಲ್ಲಿ ಪ್ರಮಾಣವು.

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾತ್"

'ಜ್ಞಾನೇ' ಅಂದರೆ ಜ್ಞಾನಜನ್ಯವಾದ ಮುಕ್ತಿಯಲ್ಲಿ 'ವಿಶೇಷಃ ಸ್ಯಾತ್' ಅಂದರೆ ಸಂಸಾರಿಗಳ ಅಪೇಕ್ಷೆಯಿಂದ ಕರ್ಮದಲ್ಲಿ ವಿಶೇಷವು ಇರುವುದು. 'ತು' ಶಬ್ದವು ನಿಶ್ಚಯಾರ್ಥಕವು. ಮುಕ್ತರು ಒಮ್ಮೊಮ್ಮೆ ಕರ್ಮ ಮಾಡುತ್ತಾರೆ, ಕೆಲವೊಮ್ಮೆ ಮಾಡುವುದಿಲ್ಲ. ಸಂಸಾರಿಗಳಾದರೋ ವಿಧಿಗೆ ಒಳಪಟ್ಟಿರುವುದರಿಂಸ ಅವರಿಗೆ ಕರ್ಮ ಮಾಡಲೇಬೇಕೆಂಬ ನಿಯಮವಿದೆ.

## ಅಧಿಕರಣ - ೧೯

## ॥ ಅನಿಯಮಾಧಿಕರಣ ॥

## ॥ ಓಂ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನುಮಾನಾಭ್ಯಾಂ ಓಂ ॥

ಎಲ್ಲ ಅಪರೋಕ್ಷ ಜ್ಞಾನಿಗಳಿಗೂ ಮೋಕ್ಷವು ಇದ್ದೇ ಇರುವುದು. ಉಪಾಸನೆಯ ವಿಷಯದಲ್ಲಿ ಕೆಲವರಿಗೆ ಉಪಸಂಹಾರವು ಕೆಲವರಿಗೆ ಅನುಪ ಸಂಹಾರವು ಎಂಬುದಾಗಿ ನಿಯಮವುಂಟು. ಆದರೆ ಜ್ಞಾನಿಗಳಿಗೇ ಮೋಕ್ಷವು ಎಂಬ ವಿಷಯದಲ್ಲಿ ಅಂಥಹ ನಿಯಮವಿಲ್ಲ. ಎಲ್ಲ ಜ್ಞಾನಿಗಳಿಗೂ ಮೋಕ್ಷವು ನಿಶ್ಚಿತವು. ನಿಷೇಧ ರೂಪವಾದ ಬಾಧಕವಿರುವುದಿಲ್ಲ. ಇದಕ್ಕೆ ಏನು ಪ್ರಮಾಣವು ಎಂದರೆ - ''ಶಬ್ದಾನುಮಾನಾಭ್ಯಾಂ'' ಎಂಧು ಹೇಳಲಾಗಿದೆ. ನ ಕಶ್ಚಿತ್ ಬ್ರಹ್ಮವಿತ್ ಸ್ ಿಮನುಭವತಿ ತಸ್ಮಾದಾಹುಃ ಸ್ರತಿಹಾ'' ''ಮುಕ್ತೋ ಹ್ಯೇವ ಭವತಿ'' ಇತ್ಯಾದಿ ಶ್ರುತಿಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ. ಅಪರೋಕ್ಷ ಜ್ಞಾನಿಗಳು ಮೋಕ್ಷವಂತರು ಅವರು ಜ್ಞಾನವನ್ನು ಹೊಂದಿರುವುದರಿಂದ ಎಂಬ ಅನುಮಾನವೂ ಈ ವಿಷಯದಲ್ಲಿ ನಿಶ್ಚಾಯಕವಾಗಿದೆ.

**ಅಣುಭಾಷ್ಯ : ''ವಿಶೇಷಸ್ತು ಜ್ಞಾನೇ ಸ್ಯಾತ್''**

'ತು' ಶಬ್ದವು ನಿಶ್ಚಯಾತ್ಮಕವು. ಅಪರೋಕ್ಷ ಜ್ಞಾನವಾಗುತ್ತಿದ್ದಂತೆಯೇ (ಜ್ಞಾನೇ), ಇತರ ಎಲ್ಲರಿಂದಲೂ ವಿಶಿಷ್ಟರಾಗುತ್ತಾರೆ ''ಮೋಕ್ಷವು ನಿಶ್ಚಿತ ಎಂಬ ವಿಶೇಷವಿರುವುದರಿಂದ'' ಎಂದು ತಾತ್ಪರ್ಯ.

## ಅಧಿಕರಣ - ೨೦

## ॥ ಯಾವದಧಿಕರಣ ॥

## ॥ ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ಓಂ ॥

ಅಧಿಕಾರಯೋಗ್ಯತಾನುಸಾರಿ ಅನುಷ್ಠಾನದಲ್ಲಿ ಯಾರು ಕರ್ತವ್ಯಶೀಲರೋ ಅವರೇ ಆಧಿಕಾರಿಕ ಜೀವಿಗಳು. ಅಂಥಹ ಬ್ರಹ್ಮಾದಿಗಳಿಗೆ ಎಷ್ಟು ಅಧಿಕಾರ

ವಿದೆಯೋ ಅದಕ್ಕೆ ಅನುಗುಣವಾಗಿ ಅವರಿಗೆ ಮುಕ್ತಿಯಲ್ಲಿ ಅವಸ್ಥಿತಿಯು. ಅಂದರೆ ತಾರತಮ್ಯಕ್ಕನುಗುಣವಾಗಿ ಅವಸ್ಥಿತಿಯು ಎಂದರ್ಥ. ಮುಕ್ತಿಯಲ್ಲಿ ಆನಂದಾದಿ ತಾರತಮ್ಯವು ಅಂಗೀಕರಿಸುವುದಾದರೆ ಯೋಗ್ಯತಾ ತಾರತಮ್ಯವನ್ನು ಅಂಗೀಕರಿಸದೇ ವಿಧಿಯಿಲ್ಲ ಎಂದು ಭಾವ.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್''

'ಜ್ಞಾನೇ' ಜ್ಞಾನಜನ್ಯವಾದ ಮೋಕ್ಷದಲ್ಲಿ, 'ಉತ್ತರೋತ್ತರಂ' ಮನುಷ್ಯೋತಮರಿಂದ ಆರಂಭಿಸಿ ಚತುರ್ಮುಖ ಬ್ರಹ್ಮನ ಪರ್ಯಂತವಾಗಿ, 'ವಿಶೇಷಃ ಸ್ಯಾತ್' - ತಾರತಮ್ಯ ಇರುವುದು. ಆದ ಪ್ರಯುಕ್ತ ಉಪಾಸನೆಯಲ್ಲಿಯೂ ಯೋಗ್ಯತಾ ತಾರತಮ್ಯವನ್ನು ಒಪ್ಪಬೇಕು. ಸಾಧನೆಯಲ್ಲಿ ತಾರತಮ್ಯವಿಲ್ಲದಿದ್ದರೆ ಫಲದಲ್ಲಿ ತಾರತಮ್ಯವು ಯುಕ್ತವಾಗುವುದಿಲ್ಲ ಎಂದು ಸಿದ್ಧಾಂತ.

## ಅಧಿಕರಣ - ೨೧

## ॥ ಇಯದಾಮನನಾಧಿಕರಣ ॥

## ॥ ಓಂ ಇಯದಾಮನನಾತ್ ಓಂ ॥

ಅಧಿಕಾರಿ ಜೀವರಲ್ಲಿ ಮುಖ್ಯಪ್ರಾಣನೇ ಅಂತಿಮ. ಏಕೆಂದರೆ ಮುಖ್ಯಪ್ರಾಣನಿಗಿಂತ ಉತ್ತಮ ಅಧಿಕಾರಿಯು ಇರುವುದಿಲ್ಲ. ''ಪ್ರಾಣೋ ವಾ ವ ಸರ್ವೇಭ್ಯೋ ಭೂಯಾನ್'' ಎಂಬ ಶ್ರುತಿಯಿರುವುದರಿಂದ ಪ್ರಾಣನೇ ಸರ್ವಗುಣೋಪಾಸನೆಗೆ ಯೋಗ್ಯನು, ಆದ್ದರಿಂದ ಸರ್ವಜೀವೋತ್ತಮನು ಎಂದು ತಾತ್ಪರ್ಯ.

**ಅಣುಭಾಷ್ಯ :** ''ಬ್ರಹ್ಮಣಾ ತು ಅಖಿಲೈಃ ಗುಣೈಃ ಉಪಾಸ್ಯಃ''

'ತು' ನಿಶ್ಚಯಾರ್ಥಕವು. ಅಧಿಕಾರಿ ಜೀವರಲ್ಲಿ ಪ್ರಾಣನೇ ಶ್ರೇಷ್ಠನು ಎಂಬುದು ನಿಶ್ಚಯವು. ಪ್ರಾಣನೇ ಭಾವಿ ಬ್ರಹ್ಮನಾದ್ದರಿಂದ ಇಲ್ಲಿ ಪ್ರಾಣೇನ ಎನ್ನುವ ಬದಲು ''ಬ್ರಹ್ಮಣಾ'' ಎಂದು ಹೇಳಿದ್ದಾರೆ. ಮುಖ್ಯಪ್ರಾಣ ದೇವರು ಹಾಗೂ

ಯೋಗ್ಯತಾಸಾಮ್ಯವುಳ್ಳ ಬ್ರಹ್ಮದೇವರು, ಇವರಿಂದ ಮಾತ್ರ ಭಗವಂತನು ವೇದೋಕ್ತ ಎಲ್ಲ ಗುಣಗಳಿಂದ ಉಪಾಸ್ಯನು ಎಂದು ಸಿದ್ಧಾಂತ.

## ಅಧಿಕರಣ - ೨೨

## ॥ ವ್ಯತಿಹಾರಾಧಿಕರಣ ॥

**॥ ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ ॥**

ಮುಖ್ಯಪ್ರಾಣ ಮತ್ತು ವಿಷ್ಣು-ಇವರಿಬ್ಬರಲ್ಲಿ ಯಾರು ಉತ್ತಮರು ಎಂಬ ವಿಷಯದಲ್ಲಿ ಪ್ರಶ್ನೋತ್ತರ ರೂಪ ಸಂವಾದವು ಕೇಳಿ ಬರದಿದ್ದರೂ ಕೂಡ ಸತ್ಯಾಖ್ಯನಾದ ವಿಷ್ಣುವೇ ಪ್ರಾಣನಿಗಿಂತ ಉತ್ತಮನು ಎಂಬುದು ಯುಕ್ತವೇ ಆಗಿದೆ. ಈ ವಿಷಯದಲ್ಲಿ ಪ್ರಶ್ನೋತ್ತರ ರೂಪ ಸಂವಾದವನ್ನು ಬೇರೆ ಕಡೆಯಿಂದ ತಂದುಕೊಳ್ಳತಕ್ಕದ್ದು. ''ಹಿ'' ಏಕೆಂದರೆ - ''ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ'' ಎಂಬ ಶ್ರುತಿಯಲ್ಲಿ 'ತು' ಶಬ್ದದಿಂದ ವಾಯುವಿಗಿಂತ ಸತ್ಯಾಖ್ಯನಾದ ವಿಷ್ಣುವು ಅಧಿಕನು ಎಂಬುದಾಗಿ ಭೇದವನ್ನು ತಿಳಿಸಲಾಗಿದೆ. ಈ ವಿಷಯದಲ್ಲಿ ದೃಷ್ಟಾಂತವು ''ಇತರವತ್'' ಎಂಬುದು. ''ನ ಚಾಸ್ತಿ ಭಗವೋ ನಾಮ್ನೋ ಭೂಯಃ। ವಾಗ್‌ವಾ ವ ನಾಮ್ನೋ ಭೂಯಸೀ'' ಇತ್ಯಾದಿ ಶ್ರುತಿಯು ವಿಷ್ಣುವಿಗೆ ಪ್ರಾಣಾದಿಗಳಿಂದ ಉತ್ತಮತ್ವವನ್ನು ಪ್ರತಿಪಾದಿಸುವುದರಲ್ಲಿಯೇ ತಾತ್ಪರ್ಯವುಳ್ಳದ್ದು'

**ಅಣುಭಾಷ್ಯ :** ''ಬ್ರಹ್ಮಣಾ ವಿಷ್ಣುಃ ಉಪಾಸ್ಯಃ''

ಬ್ರಹ್ಮನಿಂದಲೂ ವಿಷ್ಣುವು ಉಪಾಸ್ಯನು. ಯಾವನು ಉತ್ತಮನೋ ಅವನನ್ನೇ ಉಪಾಸನೆ ಮಾಡತಕ್ಕದ್ದು ಎಂಬುದು ನಿಯಮ. ಬ್ರಹ್ಮನಿಗಿಂತ ವಿಷ್ಣುವೇ ಉತ್ತಮನು ಎಂಬುದನ್ನು ಇಲ್ಲಿ ''ಬ್ರಹ್ಮಣಾ'' ಇತ್ಯಾದಿ ವಚನದಿಂದ ಪ್ರತಿಪಾದಿಸಲಾಗಿದೆ.

## ಅಧಿಕರಣ - ೨೩

## ॥ ಸತ್ಯಾಧಿಕರಣ ॥

**॥ ಓಂ ಸೈವ ಹಿ ಸತ್ಯಾದಯಃ ಓಂ ॥**

''ಸತ್ಯ ಶಬ್ದವಾಚ್ಯನಾದ ವಿಷ್ಣುವೊಬ್ಬನೇ ಮಾತ್ರ ಪ್ರಾಣನಿಂದ ಉತ್ತಮನೆಂದು ಹೇಳುವ ಹಾಗಿಲ್ಲ. ಏಕೆಂದರೆ ಸತ್ಯಕ್ಕಿಂತಲೂ ಮೇಲೆ ವಿಜ್ಞಾನ, ಅತಿ ಶ್ರದ್ಧಾ ಅತಿನಿಷ್ಠಾ, ಅತಿ ಸುಖಾದಿ ಬಹುಗುಣಗಳನ್ನು ಹೇಳಲಾಗಿದೆ. ಸತ್ಯಾದಿ ಗುಣಗಳಿಗೆ ಅಭೇದವಿದೆ ಎಂದು ಹೇಳಬಾರದು'' ಈ ವಿಷಯದಲ್ಲಿ ಪ್ರಮಾಣವಿಲ್ಲ ಈ ಪ್ರಕಾರವಾಗಿ ಪೂರ್ವಪಕ್ಷಿಗಳು ವಾದಿಸುತ್ತಾರೆ. ಇದನ್ನು ನಿರಾಕರಿಸಲು ಈ ಅಧಿಕರಣವು ಹೊರಟಿದೆ.

ಪ್ರಾಣಾಧಿಕರು ಅನೇಕರಿಲ್ಲ. ವಿಷ್ಣುವೊಬ್ಬನೇ ಪ್ರಾಣಾಧಿಕನು. ಸತ್ಯಾದಿಗಳು ಪರದೇವತೆಯಾದ ವಿಷ್ಣುವನ್ನೇ ಹೇಳುತ್ತವೆ ಎಂದು ಎಲ್ಲರೂ ಅಂಗೀಕರಿಸಿದ್ದಾರೆ. ವಿಷ್ಣುವಿಗೂ ಅವನ ಗುಣಗಳಾದ ಸತ್ಯ, ಜ್ಞಾನ, ಆನಂದಾದಿಗಳಿಗೂ ಅಭೇದವು ಎಂಬ ವಿಷಯದಲ್ಲಿ ಪ್ರಮಾಣದ ಅಭಾವವಿಲ್ಲ. ''ಸತ್ಯಂ ಪೂರ್ಣಂ ವಿಜ್ಞಾನಂ ಪೂರ್ಣಂ ಕೃತಿಃ ಪೂರ್ಣಾ'' ಎಂಬ ಶ್ರುತ್ಯಂತರದಲ್ಲಿ ಸತ್ಯಾದಿ ಎಲ್ಲ ಗುಣಗಳಿಗೂ ಪೂರ್ಣತ್ವವನ್ನು ಹೇಳಲಾಗಿದೆ. ಪೂರ್ಣತ್ವವಾದರೂ ಭಗವಂತನ ಲಕ್ಷಣವು.

''ನಾಮಾದಿ ಪ್ರಾಣಪರ್ಯಂತಾದ್ಯೋ ಹಿ ಸತ್ಯಾದಿರೂಪವಾನ್ ।
ತಸ್ಮೈ ನಮೋ ಭಗವತೇ ವಿಷ್ಣುವೇ ಸರ್ವಜಿಷ್ಣವೇ ॥''

ಎಂಬ ಬ್ರಹ್ಮತರ್ಕ ವಚನವೂ ಇದಕ್ಕೆ ಸಂವಾದಿಯಾಗಿದೆ. ಆದ್ದರಿಂದ ಸತ್ಯಾದಿಗಳು ಭಗವಂತನ ಸ್ವರೂಪವಾದ್ದರಿಂದ ಪ್ರಾಣನಿಗಿಂತ ಉತ್ತಮನು ವಿಷ್ಣುವೊಬ್ಬನೇ ಅನೇಕರಲ್ಲ ಎಂಬುದೇ ಸಿದ್ಧಾಂತ.

**ಅಣುಭಾಷ್ಯ :** ''ಬ್ರಹ್ಮಣಾ ವಿಷ್ಣುಸ್ತು ಸ ಏವ (ಸತ್ಯಾದಿರೂಪೀ ವಿಷ್ಣುರೇವ) ಉಪಾಸ್ಯಃ''

ಬ್ರಹ್ಮನಿಂದ ಸತ್ಯಾದಿರೂಪನಾದ ಆ ವಿಷ್ಣುವೊಬ್ಬನೇ ಉತ್ತಮನು. ಆದ್ದರಿಂದ ಬ್ರಹ್ಮನಿಂದ ವಿಷ್ಣುವೊಬ್ಬನೇ ಉಪಾಸ್ಯನು ಎಂದು ತಾತ್ಪರ್ಯ.

## ಅಧಿಕರಣ - ೨೪

## ॥ ಕಾಮಾಧಿಕರಣ ॥

**॥ ಓಂ ಕಾಮಾದಿತರತ್ರ ತತ್ರ ಚ ಆಯತನಾದಿಭ್ಯಃ ಓಂ ॥**

ತತ್ರ - ಭಗವಂತನ ಸಮೀಪದಲ್ಲಿ ಮೂಲರೂಪದಿಂದ ಸ್ಥಿತಳಾದ ಮಹಾಲಕ್ಷ್ಮಿಯು, ಇತರತ್ರ ಚ - ಭೂಮ್ಯಾದಿಗಳಲ್ಲಿ, ಕಾಮಾತ್- ಈಶ್ವರನ ಇಚ್ಛೆಗೆ ಅನುಸಾರವಾಗಿ ಸ್ವೇಚ್ಛೆಯಿಂದಲೇ ಅವತಾರಗಳನ್ನು ಮಾಡುತ್ತಾಳೆ. ಏಕೆಂದರೆ ಲಕ್ಷ್ಮಿದೇವಿಯ ವಿಷಯದಲ್ಲಿ ಆಯತನತ್ವಾದಿಗಳನ್ನು (ಭಗವದಾಶ್ರಯತ್ವಾದಿಗಳನ್ನು) ಬೋಧಿಸುವ ಶ್ರುತಿಗಳಿವೆ. "ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ ನ ಬದ್ಧಾ। ಬಂಧಿಕಾ ಸೈಷಾ ಪ್ರಕೃತಿರವಿಕೃತಿಃ ॥" ಹೀಗೆಂದು ವತ್ಸಶ್ರುತಿಯಲ್ಲಿ ಹೇಳಲಾಗಿದೆ. ಚಿತ್ ಪ್ರಕೃತಿಯಾದ ಮಹಾಲಕ್ಷ್ಮಿಯು ಅಧಿಕಾರಿ ವರ್ಗಕ್ಕೆ ಸೇರುವುದಿಲ್ಲ, ಅಬದ್ಧಳಾದ್ದರಿಂದ, ಅವಳಿಗೆ ಇತರರಂತೆ ಜನ್ಮಾದಿಗಳಿಲ್ಲ, ಹಾಗಿಲ್ಲದಿದ್ದರೆ ಸಂಸಾರಿತ್ವವು ಪ್ರಾಪ್ತವಾಗಬೇಕಿತ್ತು. ಅವಳಿಗೆ ಅವತಾರಾದಿಗಳನ್ನು ಹೇಳಿರುವುದರಿಂದ ಜನ್ಮಾದಿ ಬಂಧಗಳಿಗೆ ಕಾರಣತ್ವವಿಲ್ಲ. ಅವತಾರ ಮಾಡಿದಾಗಲೂ ಮೂಲರೂಪದಿಂದ ಪರಮಾತ್ಮನ ಸಮೀಪದಲ್ಲಿಯೇ ಸರ್ವದಾ ಸ್ಥಿತಳಾಗಿರುವ ಪ್ರಯುಕ್ತ ಅವಳಿಗೆ ಜನ್ಮಾದಿಬದ್ಧತೆಯನ್ನು ಹೇಳುವ ಹಾಗಿಲ್ಲ ಅವಳಿಗೆ ಸ್ವೇಚ್ಛೆಯಿಂದಲೇ ಜನನವು, ಹೊರತು ಕರ್ಮನಿಮಿತ್ತದಿಂದಲ್ಲ. ಹಾಗಿದ್ದರೂ ಅವಳು ಸ್ವತಂತ್ರಳಲ್ಲ. ಏಕೆಂದರೆ ಭಗವದಿಚ್ಛಾನುಸಾರವಾಗಿಯೇ ಅವಳಿಗೆ ಸ್ವೇಚ್ಛೆಯಿಂದ ಜನನವು (ಅಂದರೆ ಅವತಾರವು). ಮಹಾಲಕ್ಷ್ಮಿಯು ನಿತ್ಯಮುಕ್ತಳು ಅಧಿಕಾರಿ ವರ್ಗದಲ್ಲಿ ಸೇರುವುದಿಲ್ಲ, ಆದ್ದರಿಂದ ಉಪಾಸನೆಯು ಕೂಡುವುದಿಲ್ಲ ಎಂದು ಹೇಳಬಾರದು. ನಿತ್ಯಮುಕ್ತಳಾಗಿದ್ದರೂ ಪರಮಾತ್ಮನಲ್ಲಿ ಅತಿಶಯವಾದ ಭಕ್ತಿಯ ನಿಮಿತ್ತವಾಗಿ ಅವಳು ಉಪಾಸನೆಯನ್ನು ಮಾಡುತ್ತಾಳೆ ಎಂದು ತಾತ್ಪರ್ಯ.

ಯಥಾ ಶ್ರೀರ್ನಿತ್ಯಮುಕ್ತಾಽಪಿ ಪ್ರಾಪ್ತಕಾಮಾಽಪಿ ಸರ್ವದಾ ।
ಉಪಾಸ್ತೇ ನಿತ್ಯಶೋ ವಿಷ್ಣುಮೇವಂ ಭಕ್ತೋ ಹರೇಃ ಭವೇತ್ ॥

ಎಂದು ಬೃಹತ್‌ತಂತ್ರದಲ್ಲಿ ಹೇಳಿದೆ.

ನಿತ್ಯಮುಕ್ತಳಾದ ಮಹಾಲಕ್ಷ್ಮಿಯು ಪ್ರಾಣನಿಗಿಂತ ಉತ್ತಮಳಾದರೂ, ಅವಳು

ಅಧಿಕಾರಿವರ್ಗದಲ್ಲಿ ಸೇರುವುದಿಲ್ಲವಾದ್ದರಿಂದ, ಮುಖ್ಯಪ್ರಾಣನ ಪರ್ಯಂತ ಮಾತ್ರ ಉಪಾಸನೆಗೆ ಅಧಿಕಾರಿಗಳು ಎನ್ನುವುದು ಯುಕ್ತವೇ ಆಗಿದೆ ಎಂಬುದೇ ಸಿದ್ಧಾಂತ.

**ಅಣುಭಾಷ್ಯ :** ''ವಿಶೇಷಸ್ತು ಸ್ಯಾತ್''

ಲಕ್ಷ್ಮೀದೇವಿಯು ನಿತ್ಯಮುಕ್ತಳಾದ್ದರಿಂದ ಅವಳಿಗೆ ಭಗವಂತನ ಉಪಾಸನೆ ಅಗತ್ಯವಿಲ್ಲವಾದೂ, ಭಕ್ತಿಯ ಅತಿಶಯತ್ವ ಎಂಬ ವಿಶೇಷದಿಂದ ಉಪಾಸನೆಯು ಕೂಡುತ್ತದೆ. ಇತರರಿಗೆ ವಿಧಿಬದ್ಧತ್ವ ಎಂಬ ವಿಶೇಷವಿದೆ. 'ತು' ಎಂಬ ಶಬ್ದವು ಅಧಿಕಾರಿ ವರ್ಗಕ್ಕೆ ಸೇರಿದ ಪ್ರಾಣಾದಿ ಜೀವರುಗಳಿಗೂ, ನಿತ್ಯಮುಕ್ತಳಾದ ರಮಾದೇವಿಗೂ ಇರುವ ಅಂತರವನ್ನು ಸೂಚಿಸುತ್ತದೆ.

## ಅಧಿಕರಣ - ೨೫

## ॥ ನಿರ್ಧಾರಣಾಧಿಕರಣ ॥

## ॥ ಓಂ ತನ್ನಿರ್ಧಾರಣಾರ್ಥನಿಯಮಃ ತದ್‌ದೃಷ್ಟೇಃ ಪೃಥಕ್‌ಧ್ಯ ಪ್ರತಿಬಂಧಃ ಫಲಮ್ ಓಂ ॥

ಶ್ರವಣಮನನಗಳಿಂದಲೇ ವೇದಾರ್ಥ ನಿರ್ಣಯವು, ಶ್ರವಣಮನನ ಫಲರೂಪವಾದುದೇ ಬ್ರಹ್ಮದರ್ಶನವು. ಹೀಗಿರುವಾಗ ಪ್ರತ್ಯೇಕವಾಗಿ ಅಪರೋಕ್ಷ ಜ್ಞಾನಕ್ಕೆ ಸಾಧನವೆಂಬುದು ಇರುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಶ್ರವಣಮನನಗಳೆರಡರಿಂದಲೇ ಅಪರೋಕ್ಷ ಜ್ಞಾನವು (ಬ್ರಹ್ಮದರ್ಶನವು) ಆಗುವುದಿಲ್ಲ. ಆದ್ದರಿಂದ ಬ್ರಹ್ಮದರ್ಶನ ಸಿದ್ಧಿಗಾಗಿ ಧ್ಯಾನವನ್ನು ಮಾಡಲೇ ಬೇಕೆಂದು ನಿಯಮ. ಹಾಗಾದರೆ ಧ್ಯಾನದಿಂದಲೇ ಮುಕ್ತಿಹೇತುವಾದ ಬ್ರಹ್ಮದರ್ಶನವು ಸಿದ್ಧಿಯಾಗುವುದಾದರೆ ಶ್ರವಣಮನನಗಳಾದರೂ ಅನವಶ್ಯಕವು ಎಂದರೆ ಅದಕ್ಕೆ ಉತ್ತರವಾಗಿ ''ಅಪ್ರತಿಬಂಧಃ ಫಲಮ್'' ಎಂದು ಹೇಳಲಾಗಿದೆ. ಅಜ್ಞಾನ, ಸಂಶಯ, ಮಿಥ್ಯಾಜ್ಞಾನ ರೂಪವಾದ ಅಪರೋಕ್ಷಜ್ಞಾನ ಪ್ರತಿಬಂಧಕಗಳ ನಿವೃತ್ತಿಗಾಗಿ ಶ್ರವಣ ಮನನಗಳು ಅತ್ಯವಶ್ಯಕವು. ಈ ವಿಷಯದಲ್ಲಿ ಪ್ರಮಾಣವೇನು ಎಂದರೆ 'ಹಿ' ಎಂಬ ಶಬ್ದದಿಂದ ಶ್ರುತಿಸ್ಮೃತಿ ಪ್ರಮಾಣವನ್ನು ಸೂಚಿಸುತ್ತಾರೆ.

ಒಟ್ಟಿನಲ್ಲಿ ಈ ಅಧಿಕರಣದ ಅಭಿಪ್ರಾಯವು ಹೀಗಿದೆ - ಶ್ರವಣಮನನ ಧ್ಯಾನರೂಪವಾದ ಸಮಸ್ತವಾದ ಉಪಾಸನೆಯು ಕರ್ತವ್ಯವೇ ಆಗಿದೆ. ಶ್ರವಣಾದಿ ಮಾತ್ರದಿಂದ ದರ್ಶನವಾಗದು. ಶ್ರವಣದ ಫಲವು ತತ್ವಜ್ಞಾನ. ಮನನದ ಫಲವು ವೇದಾರ್ಥ ನಿರ್ಣಯ. ಇವೆರಡರಿಂದ ವೇದಾರ್ಥ ನಿಶ್ಚಯ ಮಾಡಿಕೊಂಡು ಧ್ಯಾನ ಮಾಡಿದಾಗ ಭಗವಂತನ ಅನುಗ್ರಹದಿಂದ ಅಪರೋಕ್ಷಜ್ಞಾನವು. ಆದ್ದರಿಂದ ಶ್ರವಣ, ಮನನ, ಧ್ಯಾನ ರೂಪವಾದ ಉಪಾಸನೆಯು ಅವಶ್ಯ ಮಾಡತಕ್ಕದ್ದು ಎಂದು ತಾತ್ಪರ್ಯ. "ಆತ್ಮಾವಾರೇ ದ್ರಷ್ಟವ್ಯೋ, ಶ್ರೋತವ್ಯೋ, ಮಂತವ್ಯೋ, ನಿದಿಧ್ಯಾಸಿತವ್ಯಃ" ಇತ್ಯಾದಿ ಶ್ರುತಿಯೂ, "ಶ್ರುತ್ವಾ, ಮತ್ವಾ ತಥಾ ಧ್ಯಾತ್ವಾ ತದಜ್ಞಾನ ವಿಪರ್ಯಯೌ । ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಮ್॥" ಇತ್ಯಾದಿ ಸ್ಮೃತಿಯೂ ಈ ವಿಷಯದಲ್ಲಿ ಪ್ರಮಾಣವಾಗಿದೆ.

**ಅಣುಭಾಷ್ಯ :** "ಸರ್ವೈರಪಿ ಜ್ಞೇಯೋ ವಿಷ್ಣುಃ"

ಸರ್ವೈರಪಿ - ಎಲ್ಲರಿಂದಲೂ, ಸರ್ವೈರಪಿ - ಶ್ರವಣಮನನ ನಿದಿಧ್ಯಾಸನ ರೂಪವಾದ ಸಮಸ್ತೋಪಾಸನೆಯಿಂದಲೇ ವಿಷ್ಣುವು ಜ್ಞೇಯನು, ಅನ್ಯರೀತಿ ಯಿಂದಲ್ಲ ಎಂಬುದೇ ಸಿದ್ಧಾಂತವು.

## ಅಧಿರಕಣ - ೨೬

## ॥ ಪ್ರದಾನಾಧಿಕರಣ ॥

## ॥ ಓಂ ಪ್ರದಾನವದೇವ ಹಿ ತದುಕ್ತಮ್ ಓಂ ॥

ತತ್-ಶ್ರವಣಾದಿಗಳು, ಪ್ರದಾನವದೇವ-ದಾನ, ಉಪದೇಶ, ಪ್ರಸಾದ ಪೂರ್ವಕವಾದ ಗುರೂಪದೇಶದಿಂದ ಕೂಡಿಯೇ ಜ್ಞಾನಾಖ್ಯ ಫಲವತ್ವವು. ಕೇವಲ ಶ್ರವಣಾದಿ ಮಾತ್ರದಿಂದಲ್ಲ. ಹಿ-ಇದು ಪ್ರಮಾಣಸಿದ್ಧವು. ಏಕೆಂದರೆ ಶ್ರುತಿಗಳಲ್ಲಿ 'ತದುಕ್ತಮ್' ಈ ವಿಷಯವು ಹೇಳಲ್ಪಟ್ಟಿದೆ. "ಆಚಾರ್ಯವಾನ್ ಪುರುಷೋ ವೇದ" ಎಂಬ ಛಾಂದೋಗ್ಯ ಉಪನಿಷತ್ತಿನ ವಚನದಿಂದ ಹೀಗೆ ಸಿದ್ಧಾಂತವು ಮಾಡಲ್ಪಟ್ಟಿದೆ.ಆದ್ದರಿಂದ ಗುರೂಪದೇಶದಿಂದ ಯುಕ್ತವಾದ ಶ್ರವಣಾದಿಗಳೇ ಜ್ಞಾನಸಾಧನವು ಎಂದು ತಾತ್ಪರ್ಯ.

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾತ್"

ಜ್ಞಾನ ಸಾಧನವಾದ ಶ್ರವಣಾದಿಗಳಲ್ಲಿ ಗುರು ಪ್ರಸಾದಪೂರ್ವಕ ಪ್ರದಾನ ರೂಪವಾದ ವಿಶೇಷವು ಇದೆ. 'ತು' ಶಬ್ದವು ನಿಶ್ಚಯಾರ್ಥಕವು.

## ಅಧಿಕರಣ - ೨೭

## ॥ ಲಿಂಗಭೂಯಸ್ತ್ವಾಧಿಕರಣ ॥

## ॥ ಓಂ ಲಿಂಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ ॥

ತತ್-ಪ್ರಸಾದಪೂರ್ವಕವಾದ ಗುರೂಪದೇಶವು, ಬಲೀಯಃ - ಶ್ರವಣಾದಿ ಅಪೇಕ್ಷೆಯಿಂದ ಬಲಿಷ್ಠವು. ಏಕೆಂದರೆ, 'ಲಿಂಗಭೂಯಸ್ತ್ವಾತ್' ಲಿಂಗಬಾಹುಲ್ಯ ವಿರುವುದರಿಂದ. ವಿದ್ಯೆಯನ್ನು ಶ್ರವಣಮಾಡಿದ್ದರೂ ಕೂಡ, "ಭಗವಾನ್ ತ್ವಮೇವ ಕಾಮೇ ಬ್ರೂಯಾತ್" ಎಂದು ತನ್ನ ತಂದೆಯನ್ನು ತನಗೆ ಉಪದೇಶ ಮಾಡಿ ಎಂದು ಪ್ರಾರ್ಥಿಸುತ್ತಾನೆ. "ಆಚಾರ್ಯಾದ್ದೇವ ವಿದ್ಯಾವಿದಿತಾ ಸಾಧಿಷ್ಠಂ ಪ್ರಾಪಯತಿ". ಏಕೆಂದರೆ "ಆಚಾರ್ಯರಿಂದ ವಿದ್ಯೆಯನ್ನು ತಿಳಿದಾಗಲೇ ಅದು ಬಲವತ್ತ್ವವನ್ನು ಹೊಂದುತ್ತದೆ" ಎಂದು ಸತ್ಯಕಾಮನು ತನ್ನ ತಂದೆಗೆ ಹೇಳುತ್ತಾನೆ. ಆಗ ತಂದೆಯೂ ಗುರುವೂ ಆದ ಗೌತಮನು "ಇಲ್ಲಿ ನಾನು ಹೇಳುವುದೇನೂ ಇಲ್ಲ" ಎಂದು ಹೇಳಿ ಉಪಕೋಸಲನ ಬಳಿ ಕಳಿಸುತ್ತಾನೆ. ಉಪಕೋಸಲರು ಅಗ್ನ್ಯಾದಿಗಳಿಂದ ವಿದ್ಯೆಯನ್ನು ಶ್ರುತಮಾಡಿದ್ದರೂ ಕೂಡ ಗೌತಮನನ್ನು ಕೇಳುತ್ತಾರೆ. ಗೌತಮನು ಅವರ ಮುಂದೆ ತಾನು ಕಲಿತ ವಿದ್ಯೆಯನ್ನು ಒಪ್ಪಿಸುತ್ತಾನೆ. ಶ್ರವಣಾದಿಗಳಿಗಿಂತಲೂ ಪ್ರಬಲವಾದುದರಿಂದ ಗುರುವಿನಿಂದ ಶಿಷ್ಯನೂ, ಶಿಷ್ಯನಿಂದ ಗುರುವೂ ತಮಗೆ ತಿಳಿಯದ ವಿದ್ಯೆಯನ್ನು ಕುರಿತು ಉಪದೇಶ ಪಡೆಯುತ್ತಾರೆ. ಹೀಗೆ ಛಾಂದೋಗ್ಯ ಉಪನಿಷತ್ತಿನಲ್ಲಿ ವ್ಯಾಖ್ಯಾತವಾಗಿದೆ. ಹಾಗಿದ್ದರೆ ಶ್ರವಣಾದಿಗಳು ವ್ಯರ್ಥವೋ ಎಂದು ಕೇಳಬಾರದು. ಗುರುವಿನ ಬಳಿ ಶ್ರವಣಮಾಡಿ, ಅವರ ಸೇವಾದಿಗಳನ್ನು ಮಾಡುವ ಮೂಲಕ ಗುರುವನುಗ್ರಹ ಪಡೆದಾಗ ಮಾತ್ರ ಮೋಕ್ಷಫಲದಾಯಕವಾದ ಜ್ಞಾನವು ಲಭಿಸುವುದು ಎಂದು ತಾತ್ಪರ್ಯ. ಶ್ರವಣಾದಿಗಳ ಅವಶ್ಯಕತೆಯನ್ನು "ಶ್ರೋತವ್ಯೋ ಮಂತವ್ಯೋ"

ಇತ್ಯಾದಿ ಶ್ರುತಿಯು ಹೇಳಿದರೆ, ''ಗುರುಪ್ರಸಾದೋ ಬಲವಾನ್ ನ ತಸ್ಮಾದ್ ಬಲವತ್ತರಮ್ । ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ ॥'' ಇತ್ಯಾದಿ ಸ್ಮೃತಿಗಳು ಗುರುಪ್ರಸಾದದ ಬಲವತ್ವವನ್ನೂ, ಶ್ರವಣಾದಿಗಳ ಆವಶ್ಯಕತೆಯನ್ನು ಬಲವಾಗಿ ಪ್ರತಿಪಾದಿಸುತ್ತವೆ.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾತ್''

ಜ್ಞಾನವು ಹುಟ್ಟುವುದರಲ್ಲಿ ಶ್ರವಣಾದಿ ಶಿಷ್ಯ ಪ್ರಯತ್ನದ ಅಪೇಕ್ಷೆಯಿಂದ ಪ್ರಸಾದ ಪೂರ್ವಕವಾದ ಗುರೂಪದೇಶಕ್ಕೆ ಪ್ರಾಬಲ್ಯ ರೂಪ ವಿಶೇಷವಿದೆ ಎಂಬುದು ನಿಶ್ಚಿತವು ಎಂದು ತಾತ್ಪರ್ಯ.

## ಅಧಿಕರಣ – ೨೮

## ॥ ಪೂರ್ವವಿಕಲ್ಪಾಧಿಕರಣ ॥

## ॥ ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ ॥

ಒಬ್ಬ ಗುರುವಿನಿಂದ ಜ್ಞಾನವನ್ನು ಪಡೆದ ನಂತರವೂ ಮತ್ತೊಬ್ಬ ಗುರುವನ್ನು ಪ್ರಕೃಷ್ಟವಾದ ಜ್ಞಾನರೂಪವಾದ ಅನುಗ್ರಹ ಸಂಪಾದನೆಗಾಗಿ, ಸ್ವೀಕರಿಸಲು ಅಡ್ಡಿಯಿಲ್ಲ. ಈ ವಿಷಯದಲ್ಲಿ ಅಪವಾದವನ್ನು ಹೇಳುತ್ತಾರೆ – ''ಪೂರ್ವ ವಿಕಲ್ಪಃ'' ಎಂದು. ಆ ಗುರುವು ಪೂರ್ವಗುರುವಿಗೆ ಸಮನಾಗಿದ್ದರೆ ಬೇಕಾದರೆ ಸ್ವೀಕರಿಸ ಬಹುದು ಅಥವಾ ಬಿಡಬಹುದು. ಉತ್ತಮನಾಗಿದ್ದರೆ ಮಾತ್ರ ಸ್ವೀಕರಿಸಲೇ ಬೇಕೆಂದು ನಿಯಮುವಿದೆ. ಅಂಥಹ ಸಂದರ್ಭದಲ್ಲಿ ಪೂರ್ವಗುರುವಿನ ಅನುಜ್ಞೆಯನ್ನು ಪಡೆಯದೆಯೂ ಉತ್ತಮ ಗುರುವನ್ನು ಹೊಂದಬಹುದು. ಸಮನಾಗಿದ್ದರೆ ಪೂರ್ವಗುರುವಿನ ಅಪ್ಪಣೆಯನ್ನು ಪಡೆಯಲೇಬೇಕು. ಅಧಮ ನಾಗಿದ್ದರೆ ಅಂಥಹ ಗುರುವಿನ ಬಳಿಗೆ ಹೋಗಲೇಕೂಡದು. ಹೀಗೆ ವಿಕಲ್ಪವನ್ನು ಹೇಳಿದ್ದಾರೆ. ''ಮಾನಸಕ್ರಿಯಾವತ್'' – ಫಲತಃ ಸಮಾನವಾದ ಧ್ಯಾನಗಳಲ್ಲಿ ಮನಸ್ಸಿನ ಕ್ರಿಯೆಗೆ ತಕ್ಕಂತೆ ವಿಕಲ್ಪವಿರುವಂತೆ ಎಂದರ್ಥ.

"ಗುರು ಮಂತ್ರ ಪರಿತ್ಯಾಗೀ ರೌರವಂ ನರಕಂ ವ್ರಜೇತ್" ಎಂದು ಸ್ಮೃತಿಯಿರುವುದರಿಂದ ಮೊದಲು ಹೊಂದಿದ ಗುರುವನ್ನು ಎಂದಿಗೂ ತ್ಯಜಿಸ ಬಾರದು ಎಂದು ಕೆಲವರು ವಾದಿಸುತ್ತಾರೆ. ಈ ವಿಷಯದಲ್ಲಿ ಅಪವಾದವಿದೆ ಎಂದು ಹೇಳುವ ಮೂಲಕ ಈ ವಾದವನ್ನು ಈ ಅಧಿಕರಣದಲ್ಲಿ ನಿರಾಕರಿಸುತ್ತಾರೆ. ಇದಕ್ಕೆ ಬೃಹತ್‌ತಂತ್ರದ ವಚನವು ಪ್ರಮಾಣವಾಗಿದೆ –

"ಪೂರ್ವಸ್ಮಾದುತ್ತಮೋ ಲಬ್ಧಃ ಸ್ವಯಮೇವ ಗುರುರ್ಯದಿ ।
ಗೃಹ್ಣೀಯಾದವಿಚಾರೇಣ ವಿಕಲ್ಪಃ ಸಮಯೋರ್ಭವೇತ್ ॥"

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್"

ಪ್ರಥಮ ಪ್ರಾಪ್ತ ಗುರುವಿನ ಅಪೇಕ್ಷೆಯಿಂದ ಅನಂತರ ಪ್ರಾಪ್ತವಾದ ಗುರುವಿನಲ್ಲಿ ಉತ್ತಮತ್ವರೂಪವಾದ ವಿಶೇಷವಿರುವುದಾದರೆ, ವಿಶೇಷ ಜ್ಞಾನಾನುಗ್ರಹಕ್ಕಾಗಿ "ಉತ್ತರೋತ್ತರಂ" ಅಂದರೆ ಅನಂತರ ಪ್ರಾಪ್ತವಾದ ಗುರುವನ್ನು ಸ್ವೀಕಾರ ಮಾಡತಕ್ಕದ್ದು ಎಂದು ಸಿದ್ಧಾಂತ.

## ಅಧಿಕರಣ – ೨೯
## ॥ ವಿದ್ಯಾಧಿಕರಣ ॥
## ॥ ಓಂ ವಿದ್ಯೈವ ತು ನಿರ್ಧಾರಣಾತ್ ಓಂ ॥

ವಿದ್ಯೆಯೇ ಮುಕ್ತಿಸಾಧನವು, ಕರ್ಮವಲ್ಲ, ಏಕೆಂದರೆ ಹಾಗೆಂದು ಪ್ರಮಾಣಗಳಿಂದ ನಿಶ್ಚಿತವಾಗಿದೆ. "ತಮೇವಂ ವಿದಿತ್ವಾ ಅತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇ ಅಯನಾಯ" ಎಂಬುದಾಗಿ ಶ್ವೇತಾಶ್ವೇತರ ಉಪನಿಷತ್ತು ಹೇಳುತ್ತದೆ. "ಕರ್ಮಣೈವ ಹಿ ಸಂಸಿದ್ಧಿಃ" ಇತ್ಯಾದಿಗಳಿಂದ ಕರ್ಮಕ್ಕೇನೆ ಮೋಕ್ಷ ಸಾಧನತ್ವ ಎಂದು ಮೇಲ್ನೋಟಕ್ಕೆ ಅರ್ಥವಾಗುತ್ತದೆ. ಇಂಥಹ ವಾಕ್ಯಗಳಿಗೆ "ಕರ್ಮಣಾ ಜ್ಞಾನಮಾತನೋತಿ" ಇತ್ಯಾದಿ ವಾಕ್ಯಗಳನ್ನು ಕೂಡಿಸಿಕೊಂಡು ಅರ್ಥಮಾಡಬೇಕು. ಅಂದರೆ ವಿಹಿತ ಕರ್ಮ ಮಾಡುವುದರಿಂದಲೇ ಜ್ಞಾನ ಪ್ರಾಪ್ತಿಯು. ಹೀಗೆ ಪಡೆದ ಜ್ಞಾನದಿಂದಲೇ ಮೋಕ್ಷವು ಎಂದು ಅರ್ಥ ಮಾಡ

ಬೇಕು. ಕರ್ಮಾಧಿಕಾರಿಗಳು, ಜ್ಞಾನಾಧಿಕಾರಿಗಳು ಎಂಬ ವಿವಕ್ಷೆಯಿಂದ ಮೇಲಿನ ಮಾತು ಹೇಳಲ್ಪಟ್ಟಿದೆ. ಇದಕ್ಕೆ ಕರ್ಮಸಹಿತ ಜ್ಞಾನ ಹಾಗೂ ಜ್ಞಾನಸಹಿತ ಕರ್ಮ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಜ್ಞಾನೋಪಾಸನೆಯು ಎಲ್ಲರಿಗೂ ಆವಶ್ಯಕವು ಎಂಬುದೇ ಸಿದ್ಧಾಂತವು.

## ಅಧಿಕರಣ – ೩೦

## ।। ಶ್ರುತ್ಯಧಿಕರಣ ।।

### ।। ಓಂ ಶ್ರುತ್ಯಾದಿ ಬಲೀಯಸ್ತ್ವಾಚ್ಚ ನ ಬಾಧಃ ಓಂ ।।

ಮೋಕ್ಷಾಖ್ಯ ಫಲದ ವಿಷಯದಲ್ಲಿ ಕರ್ಮವನ್ನು ಕುರಿತಾದ ವಚನದಿಂದ ವಿದ್ಯೆಯನ್ನು ಕುರಿತಾದ ವಚನಕ್ಕೆ ಬಾಧವಿಲ್ಲ. ಏಕೆಂದರೆ ವಿದ್ಯೆಯಿಂದಲೇ ಮೋಕ್ಷ ಎಂಬ ವಿಷಯದಲ್ಲಿ ಪ್ರಬಲವಾದ ಶ್ರುತಿಲಿಂಗಾದಿಗಳು ಇವೆ. ಕರ್ಮದಿಂದಲೇ ಮೋಕ್ಷ ಎಂದು ಹೇಳುವ ವಾಕ್ಯಗಳು ಸಾವಕಾಶವು. ಆದರೆ ವಿದ್ಯೆಯಿಂದಲೇ ಮೋಕ್ಷವೆಂದು ಹೇಳುವ ವಾಕ್ಯಗಳು ನಿರವಕಾಶವು. ಅಂದರೆ ಅವುಗಳು ಆಬಾಧಿತವು, ಆದಕಾರಣ ಪ್ರಬಲವು.

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾತ್"

ಎಂಬ ವಾಕ್ಯದಲ್ಲಿಯೇ ಈ ಅಧಿಕರಣದ ಸಾರವೂ ಸಂಗ್ರಹಿಸಲ್ಪಟ್ಟಿದೆ. ಈ ವಾಕ್ಯಕ್ಕೆ ಹಿಂದಿನ ಅಧಿಕರಣದಂತೆಯೇ ತಾತ್ಪರ್ಯವನ್ನು ತಿಳಿಯತಕ್ಕದ್ದು.

## ಅಧಿಕರಣ – ೩೧

## ।। ಅನುಬಂಧಾಧಿಕರಣ ।।

### ।। ಓಂ ಅನುಬಂಧಾದಿಭ್ಯಃ ಓಂ ।।

ಅನುಬಂಧ ಎಂದರೆ ಭಕ್ತಿ. ಆದಿ ಪದದಿಂದ ಶಮದಮಾದಿಗಳನ್ನು ತೆಗೆದುಕೊಳ್ಳಬೇಕು. ಅಂದರೆ ಶ್ರವಣಾದಿಗಳಿಂದ ಹಾಗೂ ಗುರುಪ್ರಸಾದದಿಂದ ಮಾತ್ರ ಅಪರೋಕ್ಷ ಜ್ಞಾನಪ್ರಾಪ್ತಿ ಎಂದು ಭಾವಿಸಬಾರದು. ಭಕ್ತ್ಯಾದಿಗಳೂ

ಅತ್ಯಾವಶ್ಯಕವು ಎಂದು ಈ ಅಧಿಕರಣದ ತಾತ್ಪರ್ಯ. ಇದಕ್ಕೆ ಪ್ರಮಾಣವಿಲ್ಲದಿಲ್ಲ.

''ಭಕ್ತಿರ್ವಿಷ್ಣೌ ಗುರೌ ಚೈವ ಗುರೋರ್ನಿತ್ಯ ಪ್ರಸನ್ನತಾಮ್ ।
ದದ್ಯಾಚ್ಛಮದಮಾದೀಂಶ್ಚ ತೇನ ಚೈತೇ ಗುಣಾಃ ಪುನಃ ॥
ತೈಸ್ಸರ್ವೈಃ ದರ್ಶನಂ ವಿಷ್ಣೋಃ ಶ್ರವಣಾದಿ ಕೃತಂ ಭವೇತ್ ॥''

ಎಂಬ ನಾರಾಯಣ ತಂತ್ರ ವಚನವು ಈ ವಿಷಯದಲ್ಲಿ ಪ್ರಮಾಣವು.

**ಅಣುಭಾಷ್ಯ:** ''ವಿಶೇಷಸ್ತು ಜ್ಞಾನೇ ಸ್ಯಾತ್''

ಕೇವಲ ಜ್ಞಾನಕ್ಕಾಗಿ ಮಾತ್ರ ಗುರುಪ್ರಸಾದಾದಿಗಳು ಅಪೇಕ್ಷಿತವಲ್ಲ. ಕಿಂತು ಹರಿಭಕ್ತ್ಯಾದಿರೂಪ ವಿಶೇಷವೂ ಅಪೇಕ್ಷಿತವು ಆಗುವುದು ಎಂದು ತಾತ್ಪರ್ಯ.

## ಅಧಿಕರಣ – ೩೨

## ॥ ಪ್ರಜ್ಞಾಂತರಾಧಿಕರಣ ॥

## ॥ ಓಂ ಪ್ರಜ್ಞಾಂತರ ಪೃಥಕ್‌ತ್ವವದ್‌ದೃಷ್ಟಿಶ್ಚ ತದುಕ್ತಮ್ ಓಂ ॥

ಪ್ರಜ್ಞಾಂತರ ಅಂದರೆ ಪ್ರಜ್ಞಾವಿಶೇಷ. ಇದು ಅವಿಚ್ಛಿನ್ನವಾದ ಪರೋಕ್ಷಜ್ಞಾನ ಪೂರ್ವಕವಾದ ಧ್ಯಾನದಿಂದ ಉತ್ಪನ್ನವಾಗುವ ಅಪರೋಕ್ಷ ಜ್ಞಾನ. ಅಧಿಕಾರಿ ಯೋಗ್ಯತಾನುಸಾರ ಪ್ರಜ್ಞಾವಿಶೇಷದಲ್ಲಿ ನಾನಾ ವಿಧವಿರುವುದರಿಂದ (ಅಂದರೆ ಭೇದವಿರುವುದರಿಂದ) ಭಗವದ್ ದರ್ಶನದಲ್ಲಿಯೂ ನಾನಾವಿಧವಿರುವುದು ಎಂದರ್ಥ. ಅಪರೋಕ್ಷಜ್ಞಾನದಲ್ಲಿ ತಾರತಮ್ಯವಿದೆ ಎಂಬುದನ್ನು ''ಅಂತರ್ದೃಷ್ಟಯೋ ಬಹಿರ್ದೃಷ್ಟಯಃ'' ಇತ್ಯಾದಿಯಾಗಿ ಶ್ರುತಿಗಳಲ್ಲಿ ಹೇಳಿದೆ.

''ದೃಷ್ಟ್ವೈವ ಹ್ಯವತಾರಾಣಾಂ ಮುಚ್ಯಂತೇ ಕೇಚಿದಂಜಸಾ ।
ದರ್ಶನೇನಾಂತರೇಣಾನ್ಯೇ ದೇವಾ ಸರ್ವತ್ರ ದರ್ಶನಾತ್ ॥''

ಎಂದು ಅಧ್ಯಾತ್ಮ ಸ್ಮೃತಿಯಲ್ಲಿ ಹೇಳಿದೆ.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್''

ಮನುಷ್ಯೋತ್ತಮರಿಂದ ಪ್ರಾರಂಭಿಸಿ ಬ್ರಹ್ಮದೇವರ ಪರ್ಯಂತ ಅಪರೋಕ್ಷ ಜ್ಞಾನದಲ್ಲಿ ಅಂತರ್ದೃಷ್ಟಿತ್ವ ಬಹಿರ್ದೃಷ್ಟಿತ್ವ ಇತ್ಯಾದಿ ರೂಪವಾದ ವಿಶೇಷವು ಇರುವುದು ಎಂದು ಸಿದ್ಧಾಂತ.

## ಅಧಿಕರಣ – ೩೩

## ॥ ನ ಸಾಮಾನ್ಯಾಧಿಕರಣ ॥

**॥ ಓಂ ನ ಸಾಮಾನ್ಯಾದಪ್ಯುಪಲಬ್ಧೇಃ ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ ॥**

ಸಾಮಾನ್ಯ ರೂಪದಿಂದ ಎಲ್ಲೋ ಕೆಲವು ಭಗವದ್ ರೂಪದರ್ಶನದಿಂದ ಮುಕ್ತಿ ಉಂಟಾಗುವುದಿಲ್ಲ. ಸ್ವಯೋಗ್ಯ (ಸ್ವಬಿಂಬಭೂತ) ಭಗವದ್ ದರ್ಶನ ದಿಂದಲೇ ಮುಕ್ತಿಯು. ಮೃತ್ಯುವತ್ ಎಂಬುದು ಇದಕ್ಕೆ ದೃಷ್ಟಾಂತವು. ಮರಣ ಸಾಮಾನ್ಯ ನ್ಯಾಯದಿಂದ ಮುಕ್ತಿಯಿಲ್ಲ, ಕಿಂತು ಮರಣ ವಿಶೇಷದಿಂದಲೇ ಮುಕ್ತಿ. ಹಾಗೆಯೇ ವಿಶೇಷ ದರ್ಶನದಿಂದಲೇ ಮುಕ್ತಿಯು ಎಂದರ್ಥ. ಸಾಮಾನ್ಯದರ್ಶನ ದಿಂದ ಮುಕ್ತಿಯಿಲ್ಲದಿದ್ದರೂ ಅದರಿಂದ ವಿಶೇಷ ಲೋಕಪ್ರಾಪ್ತಿರೂಪವಾದ ಫಲವುಂಟು. ಆದ್ದರಿಂದ ಸಾಮಾನ್ಯವಾದ ಭಗವದ್ ದರ್ಶನವು ವ್ಯರ್ಥವಲ್ಲ ಎಂದು ತಾತ್ಪರ್ಯ. 'ಹಿ' ಶಬ್ದವು ಇದಕ್ಕೆ ಪ್ರಮಾಣವಿದೆ ಎಂದು ಸೂಚಿಸುತ್ತದೆ. "ಸಮೋಽಪಿ ಭಗವಾನ್ ಬಿಂಬದರ್ಶನ ಏವೈನಂ ಮೋಚಯತಿ" ಎಂಬುದಾಗಿ ಶ್ರುತಿಯಿದೆ. "ದರ್ಶನೇನ ಆತ್ಮಯೋಗೇನ ಮುಕ್ತಿಃ ನಾನ್ಯೇನ ಕೇನಚಿತ್" ಎಂಬುದಾಗಿ ಅಧ್ಯಾತ್ಮ ಸ್ಮೃತಿಯು ಹೇಳುತ್ತದೆ.

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾತ್"

ಜ್ಞಾನೇ – ಮೋಕ್ಷಸಾಧನ ಅಪರೋಕ್ಷ ಜ್ಞಾನದಲ್ಲಿ, ವಿಶೇಷಃ ಸ್ಯಾತ್– ಬಿಂಬ ವಿಷಯಕತ್ವರೂಪ ವಿಶೇಷವು ಇರುವುದು ಎಂದರ್ಥ.

## ಅಧಿಕರಣ – ೩೪

## ॥ ಪರೇಣಾಧಿಕರಣ ॥

**॥ ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ ॥**

ಪರಮಾತ್ಮನಿಂದಲೇ ಅಪರೋಕ್ಷ ಜ್ಞಾನ ಪ್ರಾಪ್ತಿಯು, ಕೇವಲ ಭಕ್ತಿ ಮಾತ್ರದಿಂದಲ್ಲ. ಏಕೆಂದರೆ ''ಏತೈರುಪಾಯೈಃ ಯತತೇ ಯಸ್ತು ವಿದ್ವಾನ್ ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ'' ಎಂಬ ಶ್ರುತಿಯು ಭಕ್ತ್ಯಾದಿ ಸಾಧನದಿಂದ ಪ್ರಸನ್ನವಾದ ಪರಮಾತ್ಮನಿಂದಲೇ ಅಪರೋಕ್ಷ ಜ್ಞಾನವು ಎಂದು ನಿರೂಪಿಸಿದೆ. ಹಾಗಾದರೆ ಭಕ್ತಿರೇವೈನಂ ದರ್ಶಯತಿ'' ಎಂಬುದಾಗಿ ಶ್ರುತಿಯಿದೆಯಲ್ಲ ಎಂದರೆ – ಸಾಧನಗಳಲ್ಲಿ ಭಕ್ತಿಯೇ ಪ್ರಧಾನವಾದುದರಿಂದ ಶ್ರುತಿಯು ಭಕ್ತಿಯಿಂದಲೇ ಭಗವದ್ದರ್ಶನ ಎಂದು ಹೇಳಿದೆ. ಆದ್ದರಿಂದ ಭಕ್ತ್ಯಾದಿ ಸಾಧನದಿಂದ ಭಗವಂತನು ಸಂತುಷ್ಟನಾದಾಗ ಅಪರೋಕ್ಷ ಜ್ಞಾನ ಹಾಗೂ ಮುಕ್ತಿ ಪ್ರಾಪ್ತಿ ಎಂಬುದೇ ಸಿದ್ಧಾಂತವು.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾತ್''

ಪ್ರವಚನಾದಿ ಸಾಧನೆಯಿಂದ ಪ್ರಸನ್ನನಾದ ವಿಷ್ಣುವೇ ''ಜ್ಞಾನೇ'' ಅಂದರೆ ಅಪರೋಕ್ಷ ಜ್ಞಾನದ ವಿಷಯದಲ್ಲಿ ಕಾರಣನಾಗುವನು. ಹಾಗಾದರೆ ಭಕ್ತಿಗೆ ಸಂಬಂಧಿಸಿದ ಶ್ರುತಿಯು ಹೇಗೆ ಕೂಡುತ್ತದೆ ಎಂದರೆ, ಅದಕ್ಕೆ ''ವಿಶೇಷಸ್ತು ಸ್ಯಾತ್'' ಎಂದು ಹೇಳಿದ್ದಾರೆ. ಸಾಧನಗಳಲ್ಲಿ ಭಕ್ತಿಗೆ ಪ್ರಧಾನತ್ವರೂಪ ವಿಶೇಷವು ಇದೆ. ಆದ್ದರಿಂದ ಭಕ್ತಿ ಸಹಿತವಾದ ಶ್ರವಣಾದಿ ಸಾಧನಗಳಿಂದಲೇ ಭಗವಂತನು ಸಂತುಷ್ಟನಾಗಿ ಮೋಕ್ಷಕಾರಕ ಜ್ಞಾನವನ್ನು ನೀಡುವನು. ಭಕ್ತಿ ರಹಿತ ಸಾಧನೆಗೆ ಮೋಕ್ಷ ರೂಪವಾದ ಪರಮಪುರುಷಾರ್ಥವಿಲ್ಲ ಎಂಬುದೇ ಸಿದ್ಧಾಂತ.

**ಅಧಿಕರಣ – ೩೫**

**॥ ಏಕಾಧಿಕರಣ ॥**

**॥ ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ ॥**

ಅಂಶ ಮತ್ತು ಅಂಶಿ ಎಂಬುದು ಒಂದೇ ಎಂಬುದಾಗಿ ವ್ಯವಹಾರವು.

ಏಕೆಂದರೆ ಅಂಶಿಯಾದ ಆತ್ಮನಿಗೆ ಅಂಶವಾದ ಸ್ವರೂಪದೇಹದಲ್ಲಿ ಅಸ್ತಿತ್ವರೂಪವಾದ ಸಂಬಂಧವಿದೆ. ಅಂಶಿಯು ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮದ ಫಲರೂಪವಾಗಿ ಯೋಗ್ಯವಾದ ಬಾಹ್ಯ ಶರೀರದ ಸಂಬಂಧವನ್ನು ಹೊಂದುತ್ತಾನೆ. ಜೀವನು ಅನಾದಿಯಾದ್ದರಿಂದ ಅವನ ಯೋಗ್ಯತೆಗೂ ಅನಾದಿತ್ವವಿರುವುದು. ಆದ್ದರಿಂದ ಆಯಾಯ ಜೀವನ ಅನಾದಿಯಾದ ಯೋಗ್ಯತೆಗೆ ಅನುಸಾರವಾಗಿಯೇ ಉಪಾಸನೆಯು, ಅನ್ಯಥಾ ಅಲ್ಲ ಎಂದು ತಾತ್ಪರ್ಯ. ಇಂದ್ರಾದಿಗಳಿಗೆ ಅರ್ಜುನಾದಿ ಶರೀರವನ್ನು ಹೊಂದಿದಾಗ, ಅಂಶಿಗತವಾದ ಜ್ಞಾನಾದಿಗಳು ಪೂರ್ಣಪ್ರಮಾಣದಲ್ಲಿ ಅನುಸಂಧಾನಕ್ಕೆ ಬರುವುದಿಲ್ಲ. ಅಂಶ – ಅಂಶಿಗೆ ಭೇದವಿರುವುದರಿಂದ ಕೂಡುವುದಿಲ್ಲ. ಆದ್ದರಿಂದ ಉಪಾಸನೆಯು ಅನಾದಿ ಯೋಗ್ಯತಾಪೇಕ್ಷೆಯು ಎನ್ನುವುದು ಅಯುಕ್ತವು ಎಂದು ಹೇಳುವುದು ಸರಿಯಲ್ಲ. ಅಂಶಿಯು ತನ್ನ ಸ್ವರೂಪದಲ್ಲಿರುವ ಎಲ್ಲ ಗುಣಗಳನ್ನೂ ಅನುಸಂಧಾನ ಮಾಡದಿದ್ದರೂ ಈಶ್ವರನ ಅಚಿಂತ್ಯಶಕ್ತಿಯಿಂದ ಅಂಶಗತ ಜ್ಞಾನಾದಿಗಳಿಗೂ ಅಂಶಿಗೂ ಅಭೇದವೇ ಸಿದ್ಧವಾಗುತ್ತದೆ. ಇದಕ್ಕೆ ಪ್ರಮಾಣವಾಗಿ ವಾಕ್ಯವಿದೆ –

"ಅಂಶಿನಸ್ತು ಪೃಥಗ್ಜಾತಾಃ ಅಂಶಾಸ್ತಸ್ಯೈವ ಕರ್ಮಣಾ ।
ಪುನರೈಕ್ಯಂ ಪ್ರಪದ್ಯಂತೇ ನಾತ್ರ ಕಾರ್ಯಾ ವಿಚಾರಣಾ ॥"

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾತ್"

'ಜ್ಞಾನೇ' ಅಂದರೆ ಜ್ಞಾನಸಾಧನವಾದ ಉಪಾಸನೆಯಲ್ಲಿ ಅನಾದಿ ಯೋಗ್ಯತಾ ಸಾಪೇಕ್ಷತ್ವ ರೂಪವಾದ ವಿಶೇಷವು ಇದೆ ಎಂದು ತಾತ್ಪರ್ಯ.

## ಅಧಿಕರಣ – ೩೬

## ॥ ಅಂಗಾವಬದ್ಧಾಧಿಕರಣ ॥

## ॥ ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದವಮ್ ಓಂ ॥

ಭಗವದಂಗಗಳನ್ನು ಆಶ್ರಯಿಸಿರುವ ಬ್ರಹ್ಮಾದಿ ದೇವತೆಗಳನ್ನೂ ಉಪಾಸನೆ ಮಾಡತಕ್ಕದ್ದೇ ಆಗಿದೆ. ಏಕೆಂದರೆ ವೇದಶಾಖೆಗಳಲ್ಲಿ ಆ ರೀತಿಯ ಉಪಾಸನೆಯ

ಫಲವನ್ನು ಹೇಳಿದೆ. 'ತು' ಶಬ್ದವು ಆ ದೇವತೆಗಳ ಉಪಾಸನೆಯ ವಿಷಯದಲ್ಲಿ 'ವಿಶೇಷ' ವನ್ನು ಸೂಚಿಸುತ್ತದೆ. ಸರ್ವವೇದಗಳ ಸರ್ವಶಾಖೆಗಳಲ್ಲಿ ಬ್ರಹ್ಮಾದಿ ಅಂಗದೇವತಾ ಸಂಬಂಧಿತ್ವದಿಂದ ಹೇಳಲ್ಪಟ್ಟ ಗುಣಗಳನ್ನು ಅಧಮರಲ್ಲಿ ಉಪಸಂಹಾರ ಮಾಡತಕ್ಕದ್ದಲ್ಲ. ಏಕೆಂದರೆ ಉತ್ತಮರಲ್ಲಿ ಹೇಳಲ್ಪಟ್ಟ ಗುಣ ವಿಶೇಷಗಳು ಅಧಮರಲ್ಲಿ ಇರುವುದಿಲ್ಲ. ಆದರೆ ಅಧಮರಿಗೆ ಸಂಬಂಧಿಸಿದಂತೆ ಹೇಳಲ್ಪಟ್ಟ ಎಲ್ಲ ಗುಣಗಳೂ ಉತ್ತಮರಲ್ಲಿಯೂ ಇರುತ್ತವೆಯಾದ್ದರಿಂದ ಅವರ ಗುಣಗಳನ್ನು ಉತ್ತಮರಲ್ಲಿ ಉಪಸಂಹಾರ ಮಾಡಬಹುದು. ಈ ವಿಷಯದಲ್ಲಿ ಯಾವುದೇ ವಿರೋಧವಿಲ್ಲವೆಂಬುದನ್ನು 'ಹಿ' ಎಂಬ ಶಬ್ದವು ಸೂಚಿಸುತ್ತದೆ. ಹಾಗಾದರೆ ''ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ'' ಇತ್ಯಾದಿ ಶ್ರುತಿಯೂ, ''ಪೂಜಯೇತ್ ನ ಅನ್ಯದೇವತಾ'' ಇತ್ಯಾದಿ ಸ್ಮೃತಿಯೂ ಅಂಗಾವಬದ್ಧ ಬ್ರಹ್ಮಾದಿ ದೇವತೆಗಳ ಉಪಾಸನೆಯನ್ನು ನಿಷೇಧಿಸುತ್ತದೆಯಲ್ಲ ಎಂದು ಕೇಳಿದರೆ ಅದು ಸರಿಯಲ್ಲ. ಅನ್ಯದೇವತೆಗಳನ್ನು ಕುರಿತಾದ ಉಪಾಸನೆ ಯನ್ನು ಶ್ರುತಿ, ಸ್ಮೃತಿಗಳು ನಿಷೇಧಿಸಿದ್ದರೆ ಅದು ಕೇವಲ ಪ್ರಾಧಾನ್ಯತಾ ವಿವಕ್ಷೆಯಿಂದ ಮಾತ್ರ. ಪರಿವಾರತ್ವ ರೂಪದಿಂದ ಅನ್ಯದೇವತೆಗಳ ಉಪಾಸನೆಯನ್ನು ಯಾವುದೇ ಶ್ರುತಿಯಾಗಲೀ ಸ್ಮೃತಿಯಾಗಲೀ ವಿರೋಧಿಸುವುದಿಲ್ಲ.

**ಅಣುಭಾಷ್ಯ :** ''ಸುರೇಶ್ವರೈಃ ಸಹೈವ ಉಪಾಸ್ಯೋ ವಿಷ್ಣುಃ''

ಸ್ವ ಅಂಗಾಶ್ರಿತರಾದ ಇತರ ದೇವತೆಗಳಿಂದ ಸಹಿತನಾಗಿಯೇ ವಿಷ್ಣುವನ್ನು ಉಪಾಸನೆ ಮಾಡಬೇಕು. ಅಂದರೆ ಭಗವಂತನ ಅಂಗಾಶ್ರಿತರೆಂಬುದಾಗಿಯೇ ದೇವತೆಗಳ ಉಪಾಸನೆ ಮಾಡಬೇಕು, ಪ್ರಾಧಾನ್ಯದಿಂದಲ್ಲ ಎಂದು ಸಿದ್ಧಾಂತ.

**ಅಧಿಕರಣ – ೩೭**

**|| ಭೂಮಾಧಿಕರಣ ||**

**|| ಓಂ ಭೂಮ್ನಃ ಕ್ರತುವತ್ ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ ||**

ವಿಷ್ಣುವಿನ ಭೂಮಗುಣವು (ಅಂದರೆ ಗುಣಪೂರ್ಣತ್ವ) ಸರ್ವರಿಂದಲೂ

ಉಪಾಸ್ಯವು. ಏಕೆಂದರೆ ಎಲ್ಲ ಗುಣಗಳಿಂದಲೂ ಅದು ಶ್ರೇಷ್ಠವು. ಹೇಗೆ ದೀಕ್ಷಾದ್ಯಾತ್ಮಕವಾದ ಯಜ್ಞವು ಎಲ್ಲ ಕರ್ಮಗಳಿಂದಲೂ ಉತ್ತಮವೋ ಹಾಗೆ ಎಂದು ದೃಷ್ಟಾಂತ. ಗೌಪವನ ಶ್ರುತಿಯು ಇದಕ್ಕೆ ಪ್ರಮಾಣವಾಗಿದೆ —

''ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯೋ
ನೈವಾಭೂಮಾ ಫಲಮೇಷಾಂ ವಿಧತ್ತೇ ।
ತಸ್ಮಾದ್ ಭೂಮಾ ಗುಣತೋ ವೈ ವಿಶಿಷ್ಟೋ
ಯಥಾ ಕ್ರತುಃ ಕರ್ಮಮಧ್ಯೇ ವಿಶಿಷ್ಟಃ ॥''

ಅಂದರೆ ಭೂಮಗುಣವೊಂದನ್ನೇ ಉಪಾಸನೆ ಮಾಡಬೇಕು ಎಂದು ಅರ್ಥವಲ್ಲ. ಭಗವಂತನ ಆನಂದಾದಿ ಎಲ್ಲವೂ ಪೂರ್ಣವೇ ಎಂಬುದಾಗಿ ಭೂಮತ್ವೇನ ಉಪಾಸನೆ ಮಾಡಬೇಕು ಎಂದು ಸಿದ್ಧಾಂತ.

## ಅಧಿಕರಣ – ೩೮

## ॥ ನಾನಾಶಬ್ದಾಧಿಕರಣ ॥

## ॥ ಓಂ ನಾನಾಶಬ್ದಾದಿಭೇದಾತ್ ಓಂ ॥

ಭೂಮತ್ವ ಉಪಾಸನೆಯಲ್ಲಿ ಅಧಿಕಾರಿಗಳಲ್ಲಿ ನಾನಾ ಪ್ರಕಾರವಿದ್ದಾರೆಂದು ಕಂಡುಬರುತ್ತದೆ. ಶಬ್ದಾದಿ ಪ್ರಮಾಣಗಳು ಅಧಿಕಾರಿಗಳಲ್ಲಿ ಯೋಗ್ಯತಾಭೇದದಿಂದ ಅನೇಕ ವಿಧವಿದೆಯೆಂದು ಹೇಳುತ್ತವೆ.

ಶಬ್ದೋಽನುಮಾ ತಥೈವಾಕ್ಷೋ ಯೋಗ್ಯತಾಭೇದತಃ ಸದಾ ।
ಬ್ರಹ್ಮಾದೀ ನಾಮೇಕಮರ್ಥಂ ಬಹುಧಾ ದರ್ಶಯಂತಿ ಹಿ ॥
ಅತಃ ಪೂರ್ಣತ್ವಮೀಶಸ್ಯ ನಾನ್ಯೈವೇಷಾಂ ಪ್ರದೃಶ್ಯತೇ ॥''

ಎಂಬ ಬ್ರಹ್ಮತರ್ಕ ವಚನವೇ ಇದಕ್ಕೆ ಪ್ರಮಾಣವು.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಂ''

ಅಧಿಕಾರಿಗಳ ಉತ್ತರೋತ್ತರ ಜ್ಞಾನದಲ್ಲಿ ಭೂಮತ್ವ ಪ್ರತೀತಿಯಲ್ಲಿ ''ವಿಶೇಷ'' ಅಂದರೆ ತಾರತಮ್ಯವಿದೆ ಎಂದರ್ಥ.

## ಅಧಿಕರಣ – ೩೯
## ॥ ವಿಕಲ್ಪಾಧಿಕರಣ ॥
## ॥ ಓಂ ವಿಕಲ್ಪೋ ವಿಶಿಷ್ಟಫಲತ್ವಾತ್ ॥

ಸ್ವಯೋಗ್ಯ ಉಪಾಸನಾನಂತರ ನೃಸಿಂಹಾದಿ ಇತರ ರೂಪಗಳ ಉಪಾಸನವು ಕರ್ತವ್ಯವೋ ಅಲ್ಲವೋ ಎಂದು ವಿಕಲ್ಪವು. ಅದು ಕರ್ತವ್ಯವೇ ಎಂಬುದಾಗಿ ನಿಯಮವಿಲ್ಲ. ಏಕೆಂದರೆ ವಿಶಿಷ್ಟ ಫಲವತ್ತ್ವವಿರುವುದರಿಂದ. ದುರಿತಾದಿ ನಿವೃತ್ತಿರೂಪ ಫಲ ವಿಶೇಷ ಕಾರಣದಿಂದ ಯಾರಿಗೆ ಯಾವ ಅಪೇಕ್ಷೆ ಹುಟ್ಟುತ್ತದೋ ಅವರಿಂದ ಆಯಾ ರೂಪದ ಉಪಾಸನೆಯು ಕಾರ್ಯವು. ಇತರರಿಗೆ ಅದು ಕಾರ್ಯವಲ್ಲ ಎಂದು ತಾತ್ಪರ್ಯ.

**ಅಣುಭಾಷ್ಯ : "ವಿಶೇಷಸ್ತು ಜ್ಞಾನೇ ಸ್ಯಾತ್"**

'ಜ್ಞಾನೇ' ನೃಸಿಂಹಾದಿ ಉಪಾಸನಾ ವಿಷಯಕವಾದ ಜ್ಞಾನದಲ್ಲಿ ವಿಕಲ್ಪರೂಪವಾದ ವಿಶೇಷವು ಇರುವುದು. ಯಾರಿಗೆ ಎಂಥಹ ವಿಶಿಷ್ಟ ಫಲದ ಅಪೇಕ್ಷೆಯಿದೆಯೋ ಅವರು ಅದಕ್ಕೆ ಅನುರೂಪವಾದ ಭಗವದ್ ರೂಪವನ್ನು ಉಪಾಸನೆ ಮಾಡಬೇಕು. ಯಾರಿಗೆ ಅಂಥಹ ವಿಶೇಷ ಅಪೇಕ್ಷೆಯಿಲ್ಲವೋ ಅವರಿಗೆ ರೂಪ ವಿಶೇಷದ ಉಪಾಸನೆಯು ಕರ್ತವ್ಯವಲ್ಲ ಎಂದು ಸಿದ್ಧಾಂತ.

## ಅಧಿಕರಣ – ೪೦
## ॥ ಕಾಮ್ಯಾಧಿಕರಣ ॥
## ॥ ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನ ವಾ ಪೂರ್ವಹೇತ್ವಭಾವಾತ್ ಓಂ ॥

ಕಾಮಸಾಧನವಾದ ಭಗವಂತನ ಗುಣಗಳನ್ನು ಕಾಮಾಪೇಕ್ಷಿಗಳು ಯಥಾಕ್ರಮವಾಗಿ (ಅಂದರೆ ಸಂಪತ್ತು ಇತ್ಯಾದಿ ಕಾಮಾನುಸಾರವಾಗಿ) ಉಪಾಸನೆ ಮಾಡಬೇಕೋ ಅಥವಾ ಬೇಡವೋ ಎಂಬುದು ವ್ಯವಸ್ಥಿತವಾದ ವಿಕಲ್ಪ. ಅಮುಮುಕ್ಷಿಗಳಿಂದ ಉಪಾಸ್ಯವು, ಮುಮುಕ್ಷುಗಳಿಂದ ಉಪಾಸ್ಯವಲ್ಲ ಎಂದು

ಸಿದ್ಧಾಂತ. ಏಕೆಂದರೆ ಮುಮುಕ್ಷುಗಳಿಗೆ ವಿತ್ತಾದಿ ಕಾಮನೆಗಳೇ ಇರುವುದಿಲ್ಲ. ಆದ್ದರಿಂದ ಈ ರೀತಿಯ ಲೌಕಿಕ ಕಾಮನೆಗಳಿಗಾಗಿ ಅವರು ಅಂಥಹ ಗುಣಗಳನ್ನು ಉಪಾಸನೆ ಮಾಡಬೇಕಿಲ್ಲ. ಆದರೆ ಪರಮಾತ್ಮನ ಅನುಗ್ರಹಕ್ಕಾಗಿ ಉಪಾಸನೆ ಮಾಡಬೇಕು ಎಂದು ತಾತ್ಪರ್ಯ.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾತ್''

''ಜ್ಞಾನೇ'' ಅಂದರೆ ಕಾಮಸಾಧನ ಭಗವದ್ ರೂಪದ ಉಪಾಸನೆ ವಿಷಯದಲ್ಲಿ ''ವಿಶೇಷಃ'' ಅಂದರೆ ವಿಕಲ್ಪವು (ಅಮುಮಕ್ಷಿಗಳಿಗೆ ಕಾರ್ಯವು, ಮುಮುಕ್ಷಿಗಳಿಗೆ ಅಲ್ಲ ಎಂಬ ರೀತಿಯ ವಿಕಲ್ಪ) ಇರುವುದು. ಅಥವಾ ಮುಮುಕ್ಷು ಗಳಿಂದ ಫಲದ ಉದ್ದೇಶದಿಂದ ಅಂಥಹ ಉಪಾಸನೆಯು ಕಾರ್ಯವಲ್ಲ, ಭಗವಂತನ ಪ್ರಸಾದಕ್ಕಾಗಿ ಮಾತ್ರ ಕಾರ್ಯವು ಎಂಬ ರೀತಿಯ ವಿಕಲ್ಪರೂಪವಾದ ವಿಶೇಷವು ಇರುವುದು ಎಂದು ತಾತ್ಪರ್ಯ.

## ಅಧಿಕರಣ – ೪೧

## ॥ ಅಂಗಾಧಿಕರಣ ॥

## ॥ ಓಂ ಅಂಗೇಷು ಯಥಾಽಽಶ್ರಯಭಾವಃ ಓಂ ॥

ಶ್ರುತಿಗಳಲ್ಲಿ ಸೂರ್ಯಾದಿ ಅಂಗದೇವತೆಗಳಿಗೆ ಯಾವ ಪ್ರಕಾರದ ಭಗವಂತನ ಅಂಗಾಶ್ರಯತ್ವವನ್ನು ಹೇಳಲಾಗಿದೆಯೋ ಅದೇ ರೀತಿಯಲ್ಲಿಯೇ ಆ ದೇವತೆಗಳು ಉಪಾಸನೆಯನ್ನು ಅವರವರ ಯೋಗ್ಯತಾನುಸಾರ ಮಾಡಬೇಕು ಎಂದು ತಾತ್ಪರ್ಯ. ಈ ವಿಷಯದಲ್ಲಿ ಪ್ರಮಾಣವೇನೆಂದರೆ ಪೌತ್ರಾಯಣ ಶ್ರುತಿಯಲ್ಲಿ ಹಾಗೆ ಹೇಳಲಾಗಿದೆ. ''ಯಸ್ಮಿನ್ ಯಸ್ಮಿನ್ ಯೋ ಹಿ ಚಾಂಗೇ ನಿವಿಷ್ಟಃ ಪರಸ್ಯ ಚಿಂತ್ಯಃ ಸ ತಥೈವ''.

**ಅಣುಭಾಷ್ಯ :** ''ಸುರೇಶ್ವರೈರುಪಾಸ್ಯೋ ವಿಷ್ಣುಃ''

ದೇವತೆಗಳಿಂದ ವಿಷ್ಣುವು ಉಪಾಸ್ಯನು. ಇಲ್ಲಿ ''ಭಗವದಂಗಾಶ್ರಿತತ್ವೇನ''

ಎಂದು ಸೇರಿಸಿಕೊಳ್ಳಬೇಕು. ಅಂದರೆ ಅಣುಭಾಷ್ಯದಲ್ಲಿಯೇ ಬೇರೆಕಡೆಯಲ್ಲಿ ಹೇಳಿರುವುದನ್ನು ಇಲ್ಲಿ ತಂದುಕೊಂಡು ಅರ್ಥ ಮಾಡಬೇಕು.

## ಅಧಿಕರಣ – ೪೨

## ॥ ನವಾಧಿಕರಣ ॥

## ॥ ಓಂ ನವಾ ತತ್ ಸಹಭಾವಶ್ರುತೇಃ ಓಂ ॥

ಇಲ್ಲಿ ದೇವತೆಗಳಿಂದ ಅನ್ಯರನ್ನು ಕುರಿತು 'ವಾ' ಶಬ್ದವನ್ನು ಪ್ರಯೋಗಿಸಲಾಗಿದೆ. ಎಲ್ಲ ಶಾಖೆಗಳಲ್ಲಿಯೂ ವಿಷ್ಣುವು ಸೂರ್ಯಾಶ್ರಿತವಾದ ಚಕ್ಷುಸ್ಸುಳ್ಳವನು ಇತ್ಯಾದಿ ರೂಪದಿಂದ ಉಪಾಸನೆಯ ವಿಷಯವು ಹೇಳಿಲ್ಲ. ಆದ್ದರಿಂದ ದೇವತೆಗಳಿಂದ ವ್ಯತಿರಿಕ್ತವಾದ ಎಲ್ಲರಿಂದಲೂ ಆ ರೀತಿಯ ಉಪಾಸನೆ ಮಾಡಬೇಕಿಲ್ಲ. ಆದರೆ ಕೆಲವು ಶಾಖೆಗಳಲ್ಲಿ ಹೇಳಿರುವುದರಿಂದ ದೇವತೆಗಳಿಂದ ಆ ರೀತಿಯ ಉಪಾಸನೆಯು ಪ್ರಮಾಣವಾಗಿ ''ಸರ್ವೈಃ ಗುಣೈಃ ದೇವಗಣಾ ಉಪಾಸತೇ'' ಎಂಬುದಾಗಿ ಶ್ರುತಿಯಲ್ಲಿ ಹೇಳಿದೆ.

**ಅಣುಭಾಷ್ಯ :** ''ವಿಶೇಷಸ್ತು ಸ್ಯಾತ್''

ದೇವತಾಶ್ರಯ ಅಂಗತ್ವೇನ ಭಗವದುಪಾಸನೆಯಲ್ಲಿ ವಿಶೇಷವು ಇದೆ. ಅಂದರೆ ದೇವ ದೇವವ್ಯತಿರಿಕ್ತರಿಗೆ ಕರ್ತವ್ಯತ್ವ – ಅಕರ್ತವ್ಯತ್ವ ರೂಪವಾದ ವಿಶೇಷವಿದೆ ಎಂದು ತಾತ್ಪರ್ಯ.

**ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಮೂರನೆಯ ಅಧ್ಯಾಯದ ಮೂರನೆಯ ಪಾದವು ಮುಕ್ತಾಯವಾಯಿತು.**



# ಮೂರನೆಯ ಅಧ್ಯಾಯದ ನಾಲ್ಕನೆಯ ಪಾದ

ಸರ್ವೇಽಪಿ ಪುರುಷಾರ್ಥಾಸ್ಸ್ಯುಃ ಜ್ಞಾನಾದೇವ ನ ಸಂಶಯಃ ।
ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್ ॥೬॥

ಗುಣದೋಷೈಃ ಸುಖಸ್ಯಾಪಿ ವೃದ್ಧಿಹ್ರಾಸೌ ವಿಮುಕ್ತಿಗೌ ।
ನೃಣಾಂ ಸುರಾಣಾಂ ಮುಕ್ತೌ ತು ಸುಖಂ ಕ್ಲೃಪ್ತ ಯಥಾಕ್ರಮಮ್ ॥೭॥

ಹಿಂದಿನ ಪಾದದಲ್ಲಿ ಉಪಾಸನೆಯ ವಿಷಯವನ್ನು ಶ್ರೀಬಾದರಾಯಣರ ಅಭಿಪ್ರಾಯಕ್ಕೆ ಅನುಗುಣವಾಗಿ ನಿರೂಪಿಸಿದ ಶ್ರೀಮದಾಚಾರ್ಯರು ಈಗ ಉಪಾಸನೆಯಿಂದ ಸಾಧ್ಯವಾದ ಜ್ಞಾನದ ಸಾಮರ್ಥ್ಯವನ್ನು ಈ ಪಾದದಲ್ಲಿ ನಿರೂಪಿಸುತ್ತಾರೆ.

## ಅಧಿಕರಣ – ೧

## ॥ ಪುರುಷಾರ್ಥಾಧಿಕರಣ ॥

## ॥ ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ ॥

ಅಪರೋಕ್ಷ ಜ್ಞಾನದಿಂದ ಮಾತ್ರ ಅಶೇಷ ಪುರುಷಾರ್ಥವು ಉಂಟಾಗುತ್ತದೆ ಎಂಬುದಾಗಿ ಬಾದರಾಯಣರು ತಿಳಿಯುತ್ತಾರೆ. ಏಕೆಂದರೆ ಹಾಗೆಂದು ಶ್ರುತಿಯು ಹೇಳುತ್ತದೆ. ''ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ವಃ ಕಾಮಯತೇ ಯಾಂಶ್ಚ ಕಾಮಾನ್ । ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್ ತಸ್ಮಾದಾತ್ಮಜ್ಞಂ ಹಿ ಅರ್ಚಯೇದ್ ಭೂತಿಕಾಮಃ'' ಎಂದು ಮುಂಡಕೋಪನಿಷತ್ ಹೇಳುತ್ತದೆ. ''ಜ್ಞಾನಾದೇವ ಸ್ವರ್ಗಃ, ಜ್ಞಾನಾದೇವಾಪವರ್ಗಃ, ಜ್ಞಾನಾದೇವ ಸರ್ವೇ ಕಾಮಾಃ ಸಂಪದ್ಯಂತೇ'' ಎಂದು ಕೌಂಠರವ್ಯ ಶ್ರುತಿಯೂ ಈ ವಿಷಯದಲ್ಲಿ ಪ್ರಮಾಣವಾಗಿದೆ.

ಆದ್ದರಿಂದ ಅಪರೋಕ್ಷಜ್ಞಾನದಿಂದ ಎಲ್ಲ ಪುರುಷಾರ್ಥಗಳೂ ಲಭಿಸಿಯೇ ಲಭಿಸುತ್ತವೆ; ಕೇವಲ ಮೋಕ್ಷ ಮಾತ್ರವಲ್ಲ ಎಂದು ಸಿದ್ಧಾಂತ.

**ಅಣುಭಾಷ್ಯ :** ''ಸರ್ವೇಽಪಿ ಪುರುಷಾರ್ಥಾಃ ಸ್ಯುಃ ಜ್ಞಾನಾದೇವ ನ ಸಂಶಯಃ''

''ವಿದ್ಯೈವ ತು ನಿರ್ಧಾರಣಾತ್'' ಎಂಬ ಪೂರ್ವಪಾದೋಕ್ತ ೨೯ ನೇ ವಿದ್ಯಾಧಿಕರಣದಲ್ಲಿ ವಿದ್ಯೆಯೇ ಅಂದರೆ ಜ್ಞಾನವೇ ಮೋಕ್ಷಕ್ಕೆ ಸಾಧನವು ಎಂದು ಸಮರ್ಥಿಸಲಾಗಿದೆ. ಜ್ಞಾನದಿಂದಲೇ ಮೋಕ್ಷ ಎಂದು ಹೇಳಿದ್ದರೂ ಮೋಕ್ಷ

ವೊಂದೇ ಎಂದು ಹೇಳಿಲ್ಲ. ಮೋಕ್ಷವು ನಿಶ್ಚಿತ. ಆದರೆ ಬೇರೆ ಎಲ್ಲ ಪುರುಷಾರ್ಥಗಳೂ ಜ್ಞಾನದಿಂದ ಲಭ್ಯವಾಗುತ್ತವೆ ಎಂಬುದನ್ನು ಈ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಈ ವಿಷಯವನ್ನೇ "ಸರ್ವೇಽಪಿ" ಇತ್ಯಾದಿಯಾಗಿ ಇಲ್ಲಿ ಸಮರ್ಥಿಸಲಾಗಿದೆ. ಪುರುಷರು ಅಪೇಕ್ಷೆಪಡುವ ಎಲ್ಲವೂ ಜ್ಞಾನದಿಂದಲೇ ಲಭಿಸುತ್ತವೆ. ಈ ವಿಷಯದಲ್ಲಿ ಯಾವುದೇ ಸಂಶಯವಿಲ್ಲ. ಅಂದರೆ ಶ್ರುತಿಗಳಿಂದ ನಿರ್ಧರಿಸಲಾಗಿದೆ ಎಂದು ತಾತ್ಪರ್ಯ.

## ಅಧಿಕರಣ – ೨
## ॥ ಅಸಾರ್ವತ್ರಿಕಾಧಿಕರಣ ॥
## ॥ ಓಂ ಅಸಾರ್ವತ್ರಿಕೀ ಓಂ ॥

ಜ್ಞಾನಾಧಿಕಾರಿತ್ವವು ಸಾರ್ವತ್ರಿಕವಲ್ಲ. ಅಂದರೆ ಸರ್ವಜನನಿಷ್ಠವಲ್ಲ. ಕೇವಲ ಮುಕ್ತಿಯೋಗ್ಯನಿಷ್ಠವೇ ಆಗಿರುವುದು ಎಂದರ್ಥ.

ಎಲ್ಲರಿಗೂ ಶ್ರವಣಕ್ಕೆ ಅಧಿಕಾರವಿರುವುದರಿಂದ, ಅದರಿಂದ ಲಭ್ಯವಾಗುವ ಜ್ಞಾನಕ್ಕೂ ಅಧಿಕಾರವಿದೆ. ಆದ್ದರಿಂದ ಎಲ್ಲರಿಗೂ ಜ್ಞಾಲಫಲವಾದ ಮೋಕ್ಷಕ್ಕೆ ಅಪೇಕ್ಷೆಯು ಕೂಡುತ್ತದೆ. ಹೀಗೆ ಕೆಲವರು ಹೇಳುತ್ತಾರೆ. ಎಲ್ಲರಿಗೂ ಜ್ಞಾನಾಧಿಕಾರವಿಲ್ಲ ಎಂದು ನಿಶ್ಚಿತವಾಗಿ ಹೇಳುವ ಈ ಅಧಿಕರಣವು ಮೇಲಿನ ವಾದವನ್ನು ಸ್ಪಷ್ಟವಾಗಿ ನಿರಾಕರಿಸುತ್ತದೆ. ಹೇಗೆಂದರೆ ನವಕೋಟಿ ದೇವತೆಗಳಲ್ಲಿ ಎಲ್ಲರಿಗೂ ದೇವತ್ವ ಸಾಮ್ಯವು ಇದ್ದರೂ ಕೂಡ, ಎಲ್ಲರಿಗೂ ಸೋಮಪಾನಕ್ಕೆ ಅಧಿಕಾರವಿಲ್ಲ. ಕೇವಲ ನೂರು ದೇವತೆಗಳು ಮಾತ್ರ ಸೋಮಪಾನಕ್ಕೆ ಅರ್ಹರು ಎಂದು ಹೇಳಲಾಗಿದೆ. ಆದ್ದರಿಂದ ಎಲ್ಲರಿಗೂ ಪುರುಷಾರ್ಥ ಅಪೇಕ್ಷಾರೂಪ ಸಾಮ್ಯವಿದ್ದರೂ, ಎಲ್ಲರಿಗೂ ಜ್ಞಾನಕ್ಕೆ ಅಧಿಕಾರವಿಲ್ಲ. ಕೇವಲ ಹರಿ–ಗುರು ಭಕ್ತ್ಯಾದಿ ಪೂರ್ವಕ ಅಧ್ಯಯನವುಳ್ಳವರಿಗೆ ಮಾತ್ರ ಜ್ಞಾನಾಧಿಕರವು ಎಂದು ಸಿದ್ಧಾಂತ.

**ಅಣುಭಾಷ್ಯ :**

ಪೂರ್ವೋಕ್ತವಾದ "ವಿಶೇಷಸ್ತು ಜ್ಞಾನೇ ಸ್ಯಾತ್" ಎಂಬುದನ್ನು ಇಲ್ಲಿಯೂ

ಅನ್ವಯಿಸಿಕೊಳ್ಳಬೇಕು. ಅಪರೋಕ್ಷ ಜ್ಞಾನದಲ್ಲಿ ಸರ್ವಾಧಿಕಾರಿತ್ವ ಅಭಾವರೂಪವಾದ ವಿಶೇಷವು ಇದೆ ಎಂದು ತಾತ್ಪರ್ಯ.

## ಅಧಿಕರಣ – ೩

## ॥ ಅವಿಶೇಷಾಧಿಕರಣ ॥

## ॥ ಓಂ ನಾವಿಶೇಷಾತ್ ಓಂ ॥

ಜ್ಞಾನಕ್ಕೆ ಅಧಿಕಾರವುಳ್ಳ ಎಲ್ಲರಿಗೂ (ದೇವತೆಗಳಿಗೂ ಕೂಡ) ಅಧಿಕಾರ ಸಾಮ್ಯವಿಲ್ಲ. ಏಕೆಂದರೆ 'ಅವಿಶೇಷಾತ್' ಅಂದರೆ ಜ್ಞಾನಕ್ಕೂ ಕೂಡ ಅವಿಶೇಷತ್ವ ಪ್ರಸಂಗವು ಬರುವುದರಿಂದ (ಜ್ಞಾನದಲ್ಲಿಯೂ ವಿಶೇಷತ್ವವನ್ನು ಅಂಗೀಕರಿಸಲಾಗಿದೆ), ಅಧಿಕಾರ ತಾರತಮ್ಯಕ್ಕೆ ಅನುಸಾರವಾಗಿ ಜ್ಞಾನದಲ್ಲಿಯೂ ತಾರತಮ್ಯರೂಪವಾದ ವಿಶೇಷವನ್ನು ಒಪ್ಪಬೇಕು ಎಂದು ತಾತ್ಪರ್ಯ. ಹೀಗೆ ಒಪ್ಪದಿದ್ದರೆ ಸಾಧನಾ ತಾರತಮ್ಯವೇ ಕೂಡುವುದಿಲ್ಲ ಎಂದು ಭಾವ.

**ಅಣುಭಾಷ್ಯ :**

ಹಿಂದಿನ ಪಾದದಲ್ಲಿ ಹೇಳಲ್ಪಟ್ಟ "ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಮ್" ಎಂಬ ವಾಕ್ಯದಿಂದಲೇ ಈ ಅಧಿಕರಣದ ತಾತ್ಪರ್ಯವೂ ಹೇಳಲ್ಪಡುತ್ತದೆ. ಅಪರೋಕ್ಷ ಜ್ಞಾನದಲ್ಲಿ ಉತ್ತರೋತ್ತರ ರೂಪವಾದ "ವಿಶೇಷ" ಅಂದರೆ ತಾರತಮ್ಯವು ಇರುವುದರಿಂದ, ಜ್ಞಾನಾಧಿಕಾರದಲ್ಲಿಯೂ ತಾರತಮ್ಯರೂಪವಾದ ವಿಶೇಷವು ಇದ್ದೇ ಇರುವುದು. ಇಲ್ಲದಿದ್ದರೆ ಜ್ಞಾನಸಾಮ್ಯತ್ವ ಪ್ರಸಂಗವು ಬರುವುದು. ಮೋಕ್ಷದಲ್ಲಿಯೂ ತಾರತಮ್ಯವುಂಟು ಎಂದು ಸಿದ್ಧಾಂತ.

## ಅಧಿಕರಣ – ೪

## ॥ ಸ್ತುತ್ಯಧಿಕರಣ ॥

## ॥ ಓಂ ಸ್ತುತಯೇಽನುಮತಿರ್ವಾ ಓಂ ॥

"ಕೇನ ಸ್ಯಾತ್ ಯೇನ ಸ್ಯಾತ್, ತೇನ ಈದೃಶ ಏವ" ಎಂಬುದಾಗಿ

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಜ್ಞಾನಿಗಳಿಗೆ ಯಥೇಷ್ಟವಾದ ಪ್ರವೃತ್ತಿಯನ್ನು ಹೇಳಲಾಗಿದೆ. ಆದ್ದರಿಂದ ಸದಸತ್ ಪ್ರವೃತ್ತಿಗಳ ವಿಷಯದಲ್ಲಿ ವಿಶೇಷವೇನೂ ಇರುವುದಿಲ್ಲ ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಸದಸತ್ ಪ್ರವೃತ್ತಿಗಳಲ್ಲಿ ಜ್ಞಾನಿಗಳಿಗೆ ವಿಶೇಷವು ಇದ್ದೇ ಇರುತ್ತದೆ. ಮೇಲೆ ಉದಾಹರಿಸಿದ ಶ್ರುತಿಯ ಪ್ರಕಾರ ಜ್ಞಾನಿಗಳಿಗೆ ಯಥೇಷ್ಟ ಆಚಾರವನ್ನು ವಿಧಿಪೂರ್ವಕವಾಗಿ ಹೇಳಿರುವುದಿಲ್ಲ. ಕೇವಲ ಸ್ತುತ್ಯರ್ಥವಾಗಿ ಅಥವಾ ಅನುಜ್ಞಾಮಾತ್ರದಿಂದ ಹೇಳಲಾಗಿದೆ. ರಾಜನು ಭೃತ್ಯನನ್ನು ಕುರಿತು ನಿನಗಿಷ್ಟ ಬಂದಂತೆ ಮಾಡು ಎಂದು ಹೇಳುವಂತೆ ಎಂದರ್ಥ. ರಾಜನು ಹಾಗೆ ಹೇಳಿದರೂ ಭೃತ್ಯನು ರಾಜನಿಗೆ ಅಸಂತುಷ್ಟಕರವಾದುದನ್ನು ಮಾಡುವುದಿಲ್ಲ. ಅದೇ ರೀತಿ ಜ್ಞಾನಿಗಳು ಭಗವಂತನ ಇಚ್ಛೆಗೆ ವಿರುದ್ಧವಾದುದನ್ನು ಮಾಡುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಭಗವಂತನ ಇಚ್ಛೆಗೆ ಅನುಗುಣವಾಗಿ ಜ್ಞಾನಿಗಳು ಪಾಪಕರ್ಮವನ್ನು ಮಾಡಿದರೂ, ಅಪರೋಕ್ಷಜ್ಞಾನವಾದ ಮೇಲೆ ಮಾಡುವ ಪಾಪಗಳಿಂದ ಅವರಿಗೆ ಲೇಪವಾಗುವುದಿಲ್ಲ ಎಂದು ತಾತ್ಪರ್ಯ.

**ಅಣುಭಾಷ್ಯ :**

''ನ ಲಿಪ್ಯತೇ'' ಇತ್ಯಾದಿ ಒಂದೂವರೆ ಶ್ಲೋಕದಿಂದ ಈ ಅಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ.

ನ ಲಿಪ್ಯತೇ ಜ್ಞಾನವಾಂಶ್ಚ ಸರ್ವದೋಷೈರಪಿ ಕ್ವಚಿತ್ ॥
ಗುಣದೋಷೈಃ ಸುಖಸ್ಯಾಪಿ ವೃದ್ಧಿ ಹ್ರಾಸೌ ವಿಮುಕ್ತಿಗೌ ।
ನೃಣಾಂ ಸುರಾಣಾಂ ಮುಕ್ತೌತು ಸುಖಂ ಕ್ಲೃಪ್ತಂ ಯಥಾಕ್ರಮ್ ॥

'ಚ' ಶಬ್ದವನ್ನು ಅವಧಾರಣಾರ್ಥದಲ್ಲಿ ಪ್ರಯೋಗಿಸಿದ್ದಾರೆ. ಅಂದರೆ 'ನೈವ' ಎಂದು ಅರ್ಥ. ಅಪರೋಕ್ಷಜ್ಞಾನಿಯು ಜ್ಞಾನೋತ್ತರ ಕೃತ ಪಾಪಗಳಿಂದ ಲೇಪಿಸಲ್ಪಡುವುದಿಲ್ಲ. 'ಅಪಿ' ಶಬ್ದವನ್ನು ''ಗುಣೈರಪಿ'' ''ಕ್ವಚಿದಪಿ'' ಎಂದು ಸೇರಿಸಿಕೊಂಡು ಅರ್ಥಮಾಡಬೇಕು. ''ಕ್ವಚಿದಪಿ'' ಅಂದರೆ ಮುಕ್ತಿಗೆ ಪೂರ್ವದಲ್ಲಿ ಹಾಗೂ ಮುಕ್ತ್ಯನಂತರವೂ ಕೂಡ ಗುಣಗಳಿಂದಾಗಲೀ ದೋಷಗಳಿಂದಾಗಲೀ

ಲೇಪಿತನಾಗುವುದಿಲ್ಲ ಎಂದರ್ಥ. ಇದಕ್ಕೆ ಅಪವಾದವನ್ನು ಹೇಳುತ್ತಾರೆ – 'ಗುಣದೋಷೈಃ' ಎಂದು. ಮನುಷ್ಯೋತ್ತಮರಿಗೆ ಜ್ಞಾನೋತ್ತರ ಕೃತ ಮಹಾಪುಣ್ಯ ಪಾಪಗಳಿಂದಾಗಿ ಸುಖ ಹಾಗೂ ಜ್ಞಾನಾದಿಗಳಲ್ಲಿಯೂ ಕೂಡ ಮುಕ್ತಿಯಲ್ಲಿ ವೃದ್ಧಿಹ್ರಾಸಗಳು ಉಂಟಾಗುತ್ತವೆ ಎಂದು ತಾತ್ಪರ್ಯ. ಇದನ್ನೇ ''ಹ್ರಾಸೋಽಪಿ ಮಾನುಷಾದೀನಾಂ ಆನಂದಸ್ಯ ವಿಕರ್ಮಣಾ'' ಎಂಬುದಾಗಿ ಅನುವ್ಯಾಖ್ಯಾನ ಸುಧಾದಲ್ಲಿ ಹೇಳಲಾಗಿದೆ. ಆನಂದದೊಂದಿಗೆ ಉಪಲಕ್ಷಣವಾಗಿ ಜ್ಞಾನವನ್ನು ತೆಗೆದುಕೊಳ್ಳಬೇಕು. ದೇವತೆಗಳಿಗಾದರೋ ಮುಕ್ತಿಯಲ್ಲಿ ಕ್ಲೃಪ್ತವಾಗಿರುತ್ತದೆ. ಅಂದರೆ ಪುಣ್ಯಪಾಪಗಳಿಂದ ವೃದ್ಧಿಹ್ರಾಸಗಳಿಗೆ ಒಳಗಾಗದೇ ಒಂದೇ ಮಟ್ಟದಲ್ಲಿರುತ್ತದೆ ಎಂದರ್ಥ.

ಇದರ ಅಭಿಪ್ರಾಯವು ಹೀಗಿದೆ – ಜ್ಞಾನೋತ್ತರ ಪಾಪದಲ್ಲಿ ಅಲ್ಪ ಮತ್ತು ಮಹತ್ ಎಂದು ಎರಡು ವಿಧ. ಇವುಗಳಲ್ಲಿ ಜ್ಞಾನಿಗಳಿಗೆ (ದೇವಾದಿಗಳಾಗಲೀ, ಮನುಷ್ಯರಾಗಲೀ) ಅಲ್ಪ ಪಾಪದಿಂದ ಲೇಪವು ಇರುವುದೇ ಇಲ್ಲ. ಮಹತ್ತಾದ ಪಾಪದಿಂದ ಮನುಷ್ಯರಿಗೆ ಸ್ವಯೋಗ್ಯತಾಪೇಕ್ಷೆಯಿಂದ ಕ್ಲೃಪ್ತವಾದ ಆನಂದಕ್ಕೇನೆ ಹ್ರಾಸವಾಗುತ್ತದೆ. ದೇವತೆಗಳಿಗೆ ಮಹಾಪಾಪದಿಂದ ಲೇಪವಿಲ್ಲ. ಆದರೆ ತಮ್ಮ ಯೋಗ್ಯತೆಯನ್ನು ಮೀರಿದ ಅಧಿಕವಾದ ಸಾಧನೆಯಿಂದ ಪ್ರಾಪ್ತವಾಗಿದ್ದ ಆನಂದಕ್ಕೆ ಹಾನಿಯು ಉಂಟಾಗುತ್ತದೆ, ಕ್ಲೃಪ್ತವಾದುದಕ್ಕಲ್ಲ.

ಇದನ್ನೇ ಬ್ರಹ್ಮಾಂಡ ಪುರಾಣದಲ್ಲಿ ಹೀಗೆ ಹೇಳಿದ್ದಾರೆ –

ಜ್ಞಾನಾತ್ ಮೋಕ್ಷೋ ಭವತ್ಯೇವ ಸರ್ವಕಾರ್ಯಕೃತೋಽಪಿ ತು ।
ಆನಂದೋ ಹ್ರಸತೇಽಕಾರ್ಯಾತ್ ಶುಭಂ ಕೃತ್ವಾ ತು ವರ್ಧತೇ ॥

## ಅಧಿರಕಣ – ೫

## ॥ ಉಭಯಲಿಂಗಾಧಿಕರಣ ॥

## ॥ ಓಂ ಸರ್ವಥಾಪಿ ತು ತ ಏವೋಭಯಲಿಂಗಾತ್ ಓಂ ॥

ಗುರುಗಳ ಉಪಸತ್ತಿ ಇತ್ಯಾದಿ ಅನೇಕ ಪ್ರಯತ್ನಗಳಿದ್ದರೂ ಕೂಡ ಜ್ಞಾನಕ್ಕೆ

ಯೋಗ್ಯರಾದವರಿಗೆ ಮಾತ್ರ ಜ್ಞಾನಪ್ರಾಪ್ತಿಯು, ಅಯೋಗ್ಯರಿಗಲ್ಲ. ಅಯೋಗ್ಯರಿಗೆ ಯಥಾರ್ಥಜ್ಞಾನಕ್ಕೆ ಬದಲು ವಿಪರೀತಜ್ಞಾನವೇ ಉಂಟಾಗುತ್ತದೆ ಎಂಬುದನ್ನು 'ತು' ಶಬ್ದವು ಸೂಚಿಸುತ್ತದೆ. ಏಕೆಂದರೆ ಈ ವಿಷಯದಲ್ಲಿ ಉಭಯಲಿಂಗವಿದೆ. ಅಂದರೆ ಒಬ್ಬನೇ ಗುರುವಿನಿಂದ ಏಕಕಾಲಕ್ಕೆ ಒಂದೇ ರೀತಿಯ ಉಪದೇಶ ಪಡೆದರೂ, ಯೋಗ್ಯರಿಗೆ ಯಥಾರ್ಥ ಜ್ಞಾನವು, ಅಯೋಗ್ಯರಿಗೆ ಮಿಥ್ಯಾಜ್ಞಾನವು ಎಂಬುದಕ್ಕೆ ಇಂದ್ರ, ವಿರೋಚನರ ದೃಷ್ಟಾಂತವಿದೆ. ''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ, ಏಷ ಆತ್ಮಾ ಇತಿ ಹೋವಾಚ'' ಎಂದು ಚತುರ್ಮುಖ ಬ್ರಹ್ಮದೇವರು ಇಂದ್ರ – ವಿರೇಚನರಿಗೆ ಏಕಕಾಲದಲ್ಲಿ ಒಟ್ಟಿಗೇ ಉಪದೇಶ ಮಾಡಿದರೂ ಇಂದ್ರನಿಗೆ ಮಾತ್ರ ಯಥಾರ್ಥ ಜ್ಞಾನದ ಪ್ರಾಪ್ತಿಯಾಯಿತು. (ಛಾಂದೋಗ್ಯ ಉಪನಿಷತ್) ಆದ್ದರಿಂದ ಅಧಿಕಾರವಿಲ್ಲದಿದ್ದರೆ ಎಂಥಹ ಮಹಾಪ್ರಯತ್ನ ಮಾಡಿದರೂ ಜ್ಞಾನವು ಸಿದ್ಧಿಸದು ಎಂದು ತಾತ್ಪರ್ಯ.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾತ್''

ಅಪರೋಕ್ಷ ಜ್ಞಾನದಲ್ಲಿ ಯೋಗ್ಯತಾ ಮಾತ್ರ ಪ್ರಾಪ್ಯತ್ವ ರೂಪ ವಿಶೇಷವಿದೆ ಎಂದು ತಾತ್ಪರ್ಯ.

## ಅಧಿಕರಣ – ೬

## ॥ ಆಧಿಕಾರಿಕಾಧಿಕರಣ ॥

## ॥ ಓಂ ನ ಚಾಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ ಓಂ ॥

ಆಧಿಕಾರಿಕರಾಗಿದ್ದರೂ ಕೂಡ ದೇವತಾಪದಯೋಗ್ಯರಿಂದಲೇ ಆಯಾಯ ಪದವಿಯನ್ನು ಹೊಂದಲು ಸಾಧ್ಯ. ಯಾವುದೇ ಪದವಿಗೆ ಯೋಗ್ಯರಲ್ಲದವರು, ಅವರು ಎಷ್ಟೇ ಜ್ಞಾನೈಶ್ವರ್ಯವಂತರೇ ಆಗಿದ್ದರೂ ತಮಗೆ ಯೋಗ್ಯವಲ್ಲದ ಪದವಿಗೆ ಆಕಾಂಕ್ಷೆಯನ್ನು ಮಾಡಬಾರದು. ಹಾಗೆ ಅಪೇಕ್ಷೆಪಟ್ಟವರು ಪತನವಾಗುತ್ತಾರೆ. ದೇವತಾಪದವು ಅನ್ಯರಿಂದ ಪ್ರಾಪ್ಯವಲ್ಲ. ಏಕೆಂದರೆ ಪದಾಕಾಂಕ್ಷೆ ಮಾತ್ರ

ದಿಂದಲೇ ಪತನಕ್ಕೆ ಕಾರಣವಾಗುವುದರಿಂದ ಆ ಪದವಿಯನ್ನು ಹೊಂದುವುದು ಅಸಾಧ್ಯವೆಂದು ಹೇಳಬೇಕೇನು? ಬ್ರಹ್ಮಾದಿ ಪದವಿಯು ಯೋಗ್ಯರಿಂದ ಮಾತ್ರ ಲಭ್ಯವಾದುದರಿಂದ, ಜ್ಞಾನವೂ ಕೂಡ ತಮಗೆ ಯೋಗ್ಯವಲ್ಲದ ದೇವಾದಿ ಪದಾಕಾಂಕ್ಷಾವನ್ನು ಹೊಂದಿಲ್ಲದ ಯೋಗ್ಯರಿಂದಲೇ ಪ್ರಾಪ್ಯವು ಎಂದು ಸಿದ್ಧಾಂತ.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾತ್''

ಜ್ಞಾನಕ್ಕಾಗಿ ಅಯೋಗ್ಯದೇವಾದಿ ಪದಾಕಾಂಕ್ಷಾಶೂನ್ಯವೆಂಬ ವಿಶೇಷವುಳ್ಳ ಅಧಿಕಾರಿಗಳಿಂದ ಅಪೇಕ್ಷಿತವು ಎಂದು ತಾತ್ಪರ್ಯ.

## ಅಧಿಕರಣ – ೭

## ॥ ಫಲಶ್ರುತ್ಯಧಿಕರಣ ॥

## ॥ ಓಂ ಸ್ವಾಮಿನಃ ಫಲಶ್ರುತೇಃ ಇತ್ಯಾತ್ರೇಯಃ ಓಂ ॥

ಸ್ವಾಮಿನಃ ಅಂದರೆ ಒಡೆಯರಾದ ದೇವತೆಗಳಿಗೇ ಮುಖ್ಯವಾದ ಜ್ಞಾನ ಫಲವು. ಏಕೆಂದರೆ ''ಯದು ಕಿಂಚೇಮಾಃ ಪ್ರಜಾಃ ಶುಭಮಾಚರಂತಿ ದೇವಾಏವ ತದಾಚರಂತಿ। ಯದು ಕಿಂಚೇಮಾಃ ಪ್ರಜಾಃ ವಿಜಾನತೇ। ದೇವಾ ಏವ ತದ್ವಿಜಾನತೇ। ದೇವಾನಾಂ ಹ್ಯೇತದ್ಭವತಿ, ಸ್ವಾಮೀ ಹಿ ಫಲಮಶ್ನುತೇ। ನಾಸ್ವಾಮೀ ಕರ್ಮ ಕುರ್ವಾಣಾ'' ಎಂಬುದಾಗಿ ಮಾಧ್ಯಂದಿನ ಶ್ರುತಿಯು ಹೇಳುತ್ತದೆ. ಇಲ್ಲಿ 'ಸ್ವಾಮೀ ಹಿ ಫಲಮಶ್ನುತೇ' ಎಂದರೆ ಸ್ವಾಮಿಗಳಿಗೆ (ದೇವತೆಗಳಿಗೆ) ಮಾತ್ರ ಮುಖ್ಯ ಫಲವು ಎಂದರ್ಥ. ''ನ ಅಸ್ವಾಮೀ ಫಲಮಶ್ನುತೇ'' ಎಂದರೆ ಸ್ವಾಮಿಯಲ್ಲದವರಿಗೆ ಪ್ರಜೆಗಳಿಗೆ ಎಷ್ಟೇ ಕರ್ಮಮಾಡಿದರೂ ಫಲವಿಲ್ಲ ಎಂದರ್ಥವಲ್ಲ. (ಪ್ರಜೆಗಳಿಗೆ) ಅಲ್ಪ ಫಲವು ಎಂದು ಶ್ರುತಿಯ ಅಭಿಪ್ರಾಯ. ಮಹಾಫಲಕ್ಕೆ ಹೋಲಿಸಿದರೆ ಅಲ್ಪಫಲವನ್ನು ನಿಷ್ಫಲ ಎಂದೇ ಹೇಳುವುದು ರೂಢಿ.

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇಸ್ಯಾತ್''

ಸ್ವಾಮಿನಾಂ ಎಂದು ಸೇರಿಸಿಕೊಳ್ಳಬೇಕು. ಅಭಿಪ್ರಾಯವೇನೆಂದರೆ, ಜ್ಞಾನ

ಫಲದಲ್ಲಿ ದೇವತೆಗಳಿಗೆ ಅತಿಶಯ ಎಂಬ ವಿಶೇಷವಿದೆ. ಪ್ರಜೆಗಳಿಗಾದರೋ ಅಲ್ಪ ಫಲವು ಎಂದರ್ಥ.

## ಅಧಿಕರಣ – ೮
## ಕೃತ್ಸ್ನಭಾವಾಧಿಕರಣ
### ।। ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ ।।

ಗೃಹಸ್ಥನಿಗೆ ಯಜ್ಞಾದಿ ಸರ್ವ ಸತ್ಕರ್ಮಗಳಿಗೆ ಅಧಿಕಾರವಿರುವ ನಿಮಿತ್ತ ಗೃಹಸ್ಥನೇ ಮುಕ್ತಿಯಲ್ಲಿ ಉತ್ತಮ ಅಧಿಕಾರಿಯು. ಬೇರೆ ಆಶ್ರಮಿಗಳಿಗೆ ಯಜ್ಞಾದಿಗಳಲ್ಲಿ ಅಧಿಕಾರವಿಲ್ಲ. ಏಕೆಂದರೆ ''ಸ ಖಲು ಏವಂ ವರ್ತಯನ್ ಯಾವದಾಯುಷಂ ಬ್ರಹ್ಮ ಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ'' ಎಂಬುದಾಗಿ ಛಾಂದೋಗ್ಯ ಉಪನಿಷತ್ತಿನಲ್ಲಿ ಗೃಹಸ್ಥನಿಗೇನೇ ಮೋಕ್ಷವನ್ನು ಹೇಳಿ ಉಪಸಂಹಾರವು ಮಾಡಲ್ಪಟ್ಟಿದೆ. ಇದರಿಂದ ಮುಕ್ತಿಯಲ್ಲಿ ಗೃಹಸ್ಥನಿಗೇ ಆಧಿಕ್ಯವು ಎಂದು ತಿಳಿಯಲ್ಪಡುತ್ತದೆ. ಉಪಸಂಹಾರಕ್ಕೇ ಪ್ರಾಬಲ್ಯವಿರುವುದರಿಂದ ಹೀಗೆಯೇ ತಿಳಿಯತಕ್ಕದ್ದು ಎಂದು ಕೆಲವರು ಹೇಳುತ್ತಾರೆ. ಹೀಗೆ ಅರ್ಥಮಾಡುವುದು ಸರಿಯಲ್ಲ.

ಸರ್ವಾಶ್ರಮಿಗಳಲ್ಲಿ ಯತ್ಯಾಶ್ರಮಿಯೇ ಉತ್ತಮನು, ಗೃಹಸ್ಥನಲ್ಲ. ಯತಿಗಳು ಗೃಹಸ್ಥರಿಗಿಂತ ಅಧಿಕಕಾಲ ಸಾಧನೆಯಿಂದ ಮೋಕ್ಷವನ್ನು ಪಡೆಯುತ್ತಾರೆ. ಅಲ್ಪ ಕಾಲೀನ ಸಾಧ್ಯ ಮೋಕ್ಷಕ್ಕಿಂತ ಚಿರಕಾಲೀನ ಸಾಧ್ಯ ಮೋಕ್ಷಕ್ಕೇ ಆಧಿಕ್ಯವು. ಗೃಹಸ್ಥರಿಗೆ ಬಹುಕರ್ಮ ಮಾಡುವ ಅಧಿಕಾರವಿದ್ದರೂ, ಅವೆಲ್ಲವನ್ನೂ ಮಾಡಲೇಬೇಕೆಂದು ನಿಯಮವಿಲ್ಲ. ಕೆಲವು ಕರ್ಮಗಳನ್ನು ಸರಿಯಾಗಿ ಮಾಡುವುದರಿಂದಲೇ ಅವರವರ ಯೋಗ್ಯತಾನುಸಾರ ಗೃಹಸ್ಥರಿಗೆ ಅಪರೋಕ್ಷ ಜ್ಞಾನವು ಸಿದ್ಧಿಸುತ್ತದೆ. ಮೇಲಿನ ಉಪನಿಷತ್ತಿನ ವಾಕ್ಯದಲ್ಲಿ ಉಪಸಂಹಾರವು ಮುಖ್ಯವಾಗಿ ದೇವತಾ ವಿಷಯವಾಗಿದೆ. ಜೊತೆಗೆ ಗೃಹಸ್ಥರಿಗೂ ಅನ್ವಯಿಸುತ್ತದೆ. ದೇವತೆಗಳಿಗೆ ಯತಿ, ಗೃಹಸ್ಥ ಇತ್ಯಾದಿ ಎಲ್ಲ ಆಶ್ರಮಿಗಳಿಗಿಂತಲೂ ಉತ್ತಮತ್ವನ್ನು ಅಂಗೀಕರಿಸಲಾಗಿದೆ. ಏಕೆಂದರೆ ದೇವತೆಗಳಿಗೆ ''ಕೃತ್ಸ್ನಭಾವಾತ್ತು'' ಸರ್ವಾಶ್ರಮಧರ್ಮವೂ ಕೂಡುತ್ತದೆ.

ಗೃಹಸ್ಥರಿಗೆ ಕರ್ಮಾಚರಣೆಯಲ್ಲಿ ಹೆಚ್ಚಿನ ಅಧಿಕಾರವಿದ್ದರೆ, ಯತಿಗಳಿಗೆ ಮುಖ್ಯವಾಗಿ ಜ್ಞಾನದಲ್ಲಿ ಅಧಿಕಾರವು. ಆದ್ದರಿಂದ ಯತಿಗಳಿಗೆ ಗೃಹಸ್ಥರಿಗಿಂತ ಅತಿಶಯವಾದ ಜ್ಞಾನಪ್ರಾಪ್ಯತ್ವವು. ಅಂದಮೇಲೆ ಜ್ಞಾನ ಸಾಧ್ಯವಾದ ಮೋಕ್ಷದಲ್ಲಿಯೂ ಅತಿಶಯವು ಎಂದು ತಾತ್ಪರ್ಯ.

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾತ್"

"ಜ್ಞಾನೇ" ಅಂದರೆ ಜ್ಞಾನಾಧಿಕಾರಿಗಳಾದ ಯತಿಗಳಲ್ಲಿ "ವಿಶೇಷಃ" ಅಂದರೆ ಸರ್ವಾಶ್ರಮಿಗಳಲ್ಲಿ ಉತ್ತಮತ್ವರೂಪ ವಿಶೇಷವು ಇರುವುದು ಎಂದು ಸಿದ್ಧಾಂತ.

## ಅಧಿಕರಣ – ೯

## ॥ ಅನ್ವಯಾಧಿಕರಣ ॥

## ॥ ಓಂ ಅನಾವಿಷ್ಕುರ್ವನ್ ಅನ್ವಯಾತ್ ಓಂ ॥

ಆವಿಷ್ಕಾರವಿಲ್ಲದೇ ಉಪದೇಶ ಮಾಡಬೇಕು. ಏಕೆಂದರೆ "ಅನ್ವಯಾತ್" ಆವಿಷ್ಕಾರ ಮಾಡಿ ಉಪದೇಶ ಮಾಡಿದ ಸಂದರ್ಭದಲ್ಲಿ ಅಯೋಗ್ಯರಿಗೂ ಜ್ಞಾನವುಂಟಾಗುವ ಸಂಭವವಿದೆ. ಆದ್ದರಿಂದ ಜ್ಞಾನೋಪದೇಶವನ್ನು ಗೋಪ್ಯವಾಗಿಯೇ ಮಾಡಬೇಕು. ಸಭಾಸದನಗಳಲ್ಲಂತೂ ವಿಶೇಷವಾಗಿ ಉಪದೇಶ ಮಾಡಬಾರದು ಎಂದು ಸಿದ್ಧಾಂತ. "ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾಂ ಶೇವಧಿಷ್ಟೇऽಹಮಸ್ಮಿ" ಇತ್ಯಾದಿ ಶ್ರುತಿಯಲ್ಲಿ ಅದನ್ನು ನಿಷೇಧಿಸಲಾಗಿದೆ.

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾತ್"

ಅಪರೋಕ್ಷ ಜ್ಞಾನದ ವಿಷಯದಲ್ಲಿ ಅನಾವಿಷ್ಕಾರದಿಂದ ಉಪದೇಶಿಸಬೇಕೆಂಬ ವಿಶೇಷವು ಇದೆ ಎಂದರ್ಥ.

## ಅಧಿಕರಣ – ೧೦

## ॥ ಐಹಿಕಾಧಿಕರಣ ॥

**॥ ಓಂ ಐಹಿಕಮಪ್ರಸ್ತುತ ಪ್ರತಿಬಂಧೇ ತದ್ದರ್ಶನಾತ್ ಓಂ॥**

ಪ್ರಾರಬ್ಧ ಪ್ರತಿಬಂಧವಿಲ್ಲದಿದ್ದಲ್ಲಿ ಅಪರೋಕ್ಷ ಜ್ಞಾನವು ಆ ಜನ್ಮದಲ್ಲಿಯೇ ಉಂಟಾಗುತ್ತದೆ. ಪ್ರಾರಬ್ಧ ಪ್ರತಿಬಂಧವಿದ್ದರೆ ಜನ್ಮಾಂತರದಲ್ಲಿ ಆಗುತ್ತದೆ, ಹಾಗೆಂದು ಶ್ರುತಿಯು ಹೇಳುತ್ತದೆ.

"ಶ್ರುತ್ವಾಽಽತ್ಮಾನಂ ಮತಿಪೂರ್ವಂ ಹಿ ಉಪಾಸ್ಯೇಹೈವ ದೃಷ್ಟಿಂ ಪರಮಸ್ಯ ವಿಂದೇತ್ । ಯದ್ಯಾರಬ್ಧಂ ಕರ್ಮ ನಿಬಂಧಕಂ ಸ್ಯಾತ್ ಪ್ರೇತ್ಯೈವ ಪಶ್ಯೇತ್" ಎಂಬ ಸೌಪರ್ಣ ಶ್ರುತಿಯು ವಾಕ್ಯವು ಇದಕ್ಕೆ ಪ್ರಮಾಣವಾಗಿದೆ.

**ಅಣುಭಾಷ್ಯ :** "ವಿಶೇಷಸ್ತು ಜ್ಞಾನೇ ಸ್ಯಾತ್"

'ತು' ಶಬ್ದವು ಪ್ರತಿಬಂಧಾಭಾವ ಸೂಚಕವು. ಪ್ರಾರಂಬ್ಧ ಪ್ರತಿಬಂಧ ವಿಲ್ಲದಿದ್ದರೆ ಅಪರೋಕ್ಷ ಜ್ಞಾನದಲ್ಲಿ "ಶ್ರವಣಾದಿ ಸಂಪೂರ್ತಿಯಾದ ಜನ್ಮದಲ್ಲಿಯೇ ಜ್ಞಾನೋತ್ಪತ್ತಿರೂಪ" ವಿಶೇಷವು ಇರುವುದು. ಪ್ರತಿಬಂಧವಿದ್ದರೆ ಜನ್ಮಾಂತರದಲ್ಲಿ ಜ್ಞಾನೋತ್ಪತ್ತಿರೂಪ ವಿಶೇಷವು ಇರುವುದು ಎಂದರ್ಥ.

## ಅಧಿಕರಣ – ೧೧

## ॥ ಮುಕ್ತಿಫಲಾಧಿಕರಣ ॥

**॥ ಓಂ ಏವಂ ಮುಕ್ತಿಫಲಾನಿಯಮಃ ತದವಸ್ಥಾವಧೃತೇಃ ತದವಸ್ಥಾವಧೃತೇಃ ಓಂ॥**

ಹೇಗೆ ಜ್ಞಾನದಲ್ಲಿ ನಿಯಮವಿಲ್ಲವೋ ಹಾಗೆಯೇ ಮುಕ್ತಿಫಲದಲ್ಲಿಯೂ ನಿಯಮವಿಲ್ಲ. ಅಂದರೆ ಯಾವ ಶರೀರದಲ್ಲಿ ಜ್ಞಾನೋತ್ಪತ್ತಿಯಾಗುವುದೋ ಆ ಶರೀರದ ಪಾತಾನಂತರವೇ ಮೋಕ್ಷವು ಎಂಬುದಾಗಿ ನಿಯಮವಿಲ್ಲ. ಪ್ರತಿಬಂಧ ಕಲ್ಪನೆಯಾದರೂ ಏಕೆ ಎಂದರೆ "ತದವಸ್ಥಾವಧೃತೇಃ" ಎಂದು ಹೇಳಲಾಗಿದೆ. ಯಾರು ಬ್ರಹ್ಮನಲ್ಲಿಯೇ ಮನಸ್ಸನ್ನು ಸ್ಥಾಪಿಸಿರುತ್ತಾರೋ ಅವರಿಗೆ ಬ್ರಹ್ಮನಲ್ಲಿ ಅವಸ್ಥಿತಿಯು (ಅಂದರೆ ಮೋಕ್ಷವು) ನಿಶ್ಚಯವು ಎಂದು ಶ್ರುತಿಗಳಲ್ಲಿ ಹೇಳಲಾಗಿದೆ.

ಆದ್ದರಿಂದ ಅಪರೋಕ್ಷಜ್ಞಾನ ಪ್ರಾಪ್ತಿಯಾದ ಜನ್ಮದಲ್ಲಿಯೇ ಮೋಕ್ಷವಾಗಲಿಲ್ಲ ವೆಂದರೆ, ಪ್ರಾರಬ್ಧ ಪ್ರತಿಬಂಧವಿರುವುದಾಗಿ ತಿಳಿಯಬೇಕು ಎಂದರ್ಥ. ಏಕೆಂದರೆ ಅದಿಲ್ಲದಿದ್ದರೆ ಅವರಿಗೆ ಹಿಂದೆಯೇ ಉಕ್ತವಾಗಿದೆಯಾದರೂ ಈಗ ಅವಧಾರಣಾರ್ಥವಾಗಿ ದ್ವಿರುಕ್ತಿಯು. ಅಂದರೆ ಎರಡು ಸಲ ಹೇಳಿರುವುದು ನಿಶ್ಚಯವೆಂದು ತಿಳಿಸಲಿಕ್ಕಾಗಿ. ಜ್ಞಾನ ಮತ್ತು ಮೋಕ್ಷದ ನಡುವೆ ಪ್ರಾರಬ್ಧ ಕರ್ಮವೆಂಬ ಪ್ರತಿಬಂಧವನ್ನು ಕಲ್ಪಿಸಲು ಕೆಳಕಂಡ ಸ್ಮೃತಿಯೂ ಸಹಾಯಕ ವಾಗಿದೆ —

> ''ಅವಸನ್ನಂ ಯದಾರಬ್ಧಂ ಕರ್ಮ ತತ್ರೈವ ಗಚ್ಛತಿ ।
> ನ ಚೇದ್ಬಹೂನಿ ಜನ್ಮಾನಿ ಪ್ರಾಪ್ಯೈವಾಂತೇ ನ ಸಂಶಯಃ ॥''

**ಅಣುಭಾಷ್ಯ :** ''ವಿಶೇಷಸ್ತು ಜ್ಞಾನೇ ಸ್ಯಾದುತ್ತರೋತ್ತರಂ''

ಅಪರೋಕ್ಷ ಜ್ಞಾನದಲ್ಲಿ ಪ್ರಾರಬ್ಧ ಪ್ರತಿಬಂಧಾಭಾವ ಎಂಬ ವಿಶೇಷವಿದ್ದರೆ ಆ ಜನ್ಮದ ದೇಹಪಾತಾನಂತರವೇ ಮೋಕ್ಷವು ಆಗುವುದು. ಪ್ರತಿಬಂಧವೆಂಬ ವಿಶೇಷವಿದ್ದರೆ ಉತ್ತರೋತ್ತರ ಜನ್ಮದಲ್ಲಿ ಪ್ರತಿಬಂಧ ಕಳೆದ ನಂತರ ಮೋಕ್ಷವು ಆಗುವುದು ಎಂದು ಸಿದ್ಧಾಂತ.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದವು ಮುಗಿದುದು ॥**

**॥ ಮೂರನೆಯ ಅಧ್ಯಾಯವು ಸಮಾಪ್ತವಾಯಿತು ॥**



# ನಾಲ್ಕನೆಯ ಅಧ್ಯಾಯ

ಹಿಂದಿನ ಅಧ್ಯಾಯದಲ್ಲಿ ಹೇಳಿದ ಪ್ರಕಾರವಾಗಿ ವೈರಾಗ್ಯಾದಿ ಸಾಧನಗಳಿಂದ ಸಂತುಷ್ಟನಾದ ಪರಮೇಶ್ವರನು ಯಾವ ರೀತಿಯ ಫಲವನ್ನು ನೀಡುತ್ತಾನೆ ಎಂಬ ಪ್ರಶ್ನೆ ಬರುವುದು ಸಹಜ. ಅದಕ್ಕೆ ಉತ್ತರ ರೂಪವಾಗಿ ಈ ನಾಲ್ಕನೆಯ ಅಧ್ಯಾಯವು (ಫಲಾಧ್ಯಾಯ) ಹೊರಟಿದೆ. ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗಗಳೆಂಬ ನಾಲ್ಕು ರೀತಿಯ ಫಲವನ್ನು ಕ್ರಮವಾಗಿ ನಾಲ್ಕು ಪಾದಗಳಲ್ಲಿ ನಿರೂಪಿಸಲಾಗಿದೆ.

## ಮೊದಲನೆಯ ಪಾದ

ಮೊದಲನೆಯ ಪಾದದಲ್ಲಿ ಕರ್ಮಕ್ಷಯವೆಂಬ ಫಲವನ್ನು ನಿರೂಪಿಸುತ್ತಾರೆ. ಆದರಲ್ಲಿಯೂ ಅತ್ಯವಶ್ಯಕವಾದ ಅಂತರಂಗ ಸಾಧನವನ್ನು ಮೊದಲು ನಿರೂಪಿಸುತ್ತಾರೆ.

### ಅಧಿಕರಣ - ೧

### ॥ ಆವೃತ್ತ್ಯಧಿಕರಣ ॥

### ॥ ಓಂ ಆವೃತ್ತಿರಸಕೃದುಪದೇಶಾತ್ ಓಂ ॥

ಶ್ರವಣಾದಿಗಳನ್ನು ಮತ್ತೆ ಮತ್ತೆ ಮಾಡತಕ್ಕದ್ದು. ಒಮ್ಮೆ ಮಾತ್ರ ಮಾಡಿದ ಅನುಷ್ಠಾನವು ಫಲಕಾರಿಯಾಗುವುದಿಲ್ಲ. ಈ ಕಾರಣದಿಂದಲೇ ಉದ್ದಾಲಕರು ತಮ್ಮ ಮಗ ಶ್ವೇತಕೇತುವಿಗೆ ಅಪರೋಕ್ಷ ಜ್ಞಾನಸಿದ್ಧಿಗಾಗಿ ''ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ'' ಎಂಬುದಾಗಿ ಒಂಬತ್ತು ಸಲ ದೃಷ್ಟಾಂತ ಸಹಿತ ಉಪದೇಶ ಮಾಡಿದ್ದಾರೆ.(ಛಾಂದೋಗ್ಯ ಉಪನಿಷತ್ತು). ತೈತ್ತಿರೀಯೋಪನಿಷತ್ತಿನಲ್ಲಿ ''ಸ ತಪೋಽತಪ್ಯತ । ಪುನರೇವ ವರುಣಂ ಪಿತರಮುಪಸಸಾರ'' ''ಭೃಗುವು ವಿದ್ಯೆಯನ್ನು ಶ್ರವಣ ಮಾಡಿದ್ದರೂ ಮತ್ತೆ ಮತ್ತೆ ಶ್ರವಣ ಮಾಡಲು ವರುಣನನ್ನು ಕುರಿತು ಬಂದನು'' ಎಂಬುದಾಗಿ ಆವೃತ್ತಿ ಲಿಂಗವು ಹೇಳಲ್ಪಟ್ಟಿದೆ.

''ನಿತ್ಯಶಃ ಶ್ರವಣಂ ಚೈವ ಮನನಂ ಧ್ಯಾನಮೇವ ಚ । ಕರ್ತವ್ಯಮೇವ

ಪುರುಷೈಃ ಬ್ರಹ್ಮದರ್ಶನಮಿಚ್ಛುಭಿಃ ॥'' ಎಂಬುದಾಗಿ ಬೃಹತ್ ತಂತ್ರದ ವಾಕ್ಯವು ಇದನ್ನೇ ಸಮರ್ಥಿಸುತ್ತದೆ. ಆದರಿಂದ ಆವೃತ್ತಿ ಮಾಡುವುದರಿಂದ ನಿಯಮೇನ ಫಲವು ಲಭಿಸುವುದರಿಂದ ಶ್ರವಣಾದಿಗಳು ಜ್ಞಾನಸಾಧನವು ಎಂದು ಸಿದ್ಧಾಂತ.

**ಅಣುಭಾಷ್ಯ :** ''ನಿತ್ಯಮುಪಾಸನಂ ಕಾರ್ಯಂ''

ಸರ್ವದಾ ಅಂದರೆ ಅನೇಕ ಸಲ ಶಾಸ್ತ್ರಾಭ್ಯಾಸಾದಿ ರೂಪ ಶ್ರವಣಾದಿಗಳನ್ನು ಮಾಡತಕ್ಕದ್ದು ಎಂದು ತಾತ್ಪರ್ಯ.

''ಉಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸರೂಪಿಣೀ । ಧ್ಯಾನರೂಪಾ ಪರಾ ಚೇತಿ ॥'' - ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದೆ.

## ಅಧಿಕರಣ - ೨

## ॥ ಆತ್ಮಾಧಿಕರಣ ॥

## ॥ ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ ॥

ವಿಷ್ಣುವು ನನ್ನ ಸ್ವಾಮಿ(ಆತ್ಮಾ) ಎಂದು ಮೋಕ್ಷಾಪೇಕ್ಷಿಗಳು ಸರ್ವದಾ ಎಲ್ಲ ರೀತಿಯಿಂದಲೂ ಉಪಾಸನೆಯನ್ನು ಮಾಡಬೇಕಾದ್ದು ಕರ್ತವ್ಯವೇ ಆಗಿದೆ. ಏಕೆಂದರೆ ಮಹಾಜ್ಞಾನಿಗಳು ಅದೇ ರೀತಿ ಉಪಾಸನೆಯನ್ನು ಮಾಡುತ್ತಾರೆ ಹಾಗೂ ಶಿಷ್ಯರನ್ನು ಕುರಿತು ಹಾಗೆಯೇ ಉಪದೇಶ ಮಾಡುತ್ತಾರೆ.

''ಆತ್ಮೇತ್ಯುಪಾಸನಂ ಕಾರ್ಯಂ ಸರ್ವಥೈವ ಮುಮುಕ್ಷುಭಿಃ ।
ನಾನಾಕ್ಲೇಶಸಮಾಯುಕ್ತೋಪ್ಯೇತಾವನ್ನೈವ ವಿಸ್ಮರೇತ್ ॥''

ಎಂಬುದಾಗಿ ಭವಿಷತ್ ಪರ್ವದಲ್ಲಿ ಹೇಳಿದೆ.

ಅದೇ ಪ್ರಕಾರವಾಗಿ ಉಪದೇಶವೂ ಕರ್ತವ್ಯವೇ ಆಗಿದೆ ಎಂಬುದನ್ನು ಕೆಳಗಿನ ಬ್ರಾಹ್ಮಪುರಾಣದ ವಾಕ್ಯವು ಸಮರ್ಥಿಸುತ್ತದೆ -

''ಆತ್ಮಾ ವಿಷ್ಣುರಿತಿ ಧ್ಯಾನಂ ವಿಶೇಷೇಣ ವಿಶೇಷ್ಯತಃ ।

ಸರ್ವೇಷಾಂ ಚ ಮುಮುಕ್ಷೂಣಾಂ ಉಪದೇಶಶ್ಚ ತಾದೃಶಃ ||
ಕರ್ತವ್ಯೋ ನಾಸ್ಯ ಹಾನೇನ ಕಸ್ಯಚಿತ್ ಮೋಕ್ಷ ಇಷ್ಯತೇ ||''

**ಅಣುಭಾಷ್ಯ :** ''ವಿಷ್ಣುರಾದಾತಾ ಇತ್ಯೇವಂ ನಿತ್ಯಮುಪಾಸನಂ ಕಾರ್ಯಂ''

ಆದಾತಾ ಮೋಕ್ಷಸ್ಯ ಎಂದು ತಿಳಿಯಬೇಕು. ಅಂದರೆ ವಿಷ್ಣುವು ಮೋಕ್ಷಕ್ಕೆ ಸ್ವಾಮೀ ಎಂದರ್ಥ. ''ವಿಷ್ಣುರ್ಹಿದಾತಾ ಮೋಕ್ಷಸ್ಯ'' ಎಂದು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೇಳಲಾಗಿದೆ. ವಿಷ್ಣುವು ತನ್ನ ಭಕ್ತರನ್ನು ಮೋಕ್ಷಕ್ಕೆ ಕರೆದೊಯ್ಯುವನು ಅಥವಾ ವಿಶೇಷ ರೀತಿಯಲ್ಲಿ ಮೋಕ್ಷವನ್ನು ಕೊಡುವನು. ಏಕೆಂದರೆ ಮೋಕ್ಷಕ್ಕೆ ಅವನೇ ಅಧಿಪತಿ. ಈ ಅರ್ಥದಲ್ಲಿ ಇಲ್ಲಿ ''ಆತ್ಮಾ'' ಎನ್ನುವ ಬದಲು ವಿಶೇಷಾರ್ಥಕವಾದ ''ಆದಾತಾ'' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಇದನ್ನೇ ಅನುವ್ಯಾಖ್ಯಾನಲ್ಲಿ ''ಆದಾನಾರ್ಥತ್ವತಶ್ಚಾಯಂ ಆತ್ಮ ಶಬ್ದಃ ಪತಿಂ ವದೇತ್'' ಎಂದು ಹೇಳಿದ್ದಾರೆ.

## ಅಧಿಕರಣ - ೩

## || ನ ಪ್ರತೀಕಾಧಿಕರಣ ||

## || ಓಂ ನ ಪ್ರತೀಕೇ ನ ಹಿ ಸಃ ಓಂ ||

''ನಾಮ ಬ್ರಹ್ಮೇತ್ಯುಪಾಸೀತ'' (ಛಾಂದೋಗ್ಯ ಉಪನಿಷತ್ತು) ಇತ್ಯಾದಿ ಶ್ರುತಿಯಲ್ಲಿ ಹೇಳಿರುವ ಪ್ರಯುಕ್ತ ನಾಮಾದಿ ಪ್ರತೀಕಗಳನ್ನು ಬ್ರಹ್ಮತ್ವೇನ ಉಪಾಸನೆ ಮಾಡತಕ್ಕದ್ದು ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ, ಏಕೆಂದರೆ ಬ್ರಹ್ಮನು (ಅಂದರೆ ವಿಷ್ಣುವು) ಪ್ರತೀಕನಾಗುವುದಿಲ್ಲ. ಆದ್ದರಿಂದ ಪ್ರತೀಕ (ಪ್ರತಿಮೆ, ಚಿತ್ರಪಟ ಇತ್ಯಾದಿ)ವನ್ನೇ ವಿಷ್ಣುವೆಂದು ತಿಳಿಯತಕ್ಕದ್ದಲ್ಲ ಎಂದು ತಾತ್ಪರ್ಯ. ಪ್ರತೀಕವನ್ನೇ ವಿಷ್ಣುವೆಂದು ಉಪಾಸನೆ ಮಾಡುವುದು ಅನರ್ಥಕ್ಕೆ ಕಾರಣವಾಗುವ ಮಿಥ್ಯೋಪಾಸನೆ. ಹಾಗಾದರೆ ಯಾವ ರೀತಿಯಲ್ಲಿ ಉಪಾಸನೆ ಮಾಡಬೇಕು ಎಂದು ಕೇಳಿದರೆ ಅದಕ್ಕೆ ಹೇಳುತ್ತಾರೆ.

ನಾಮಾದಿ ಪ್ರತೀಕಗಳಲ್ಲಿ ಅಂತಸ್ಥನಾಗಿದ್ದು ಅವುಗಳಿಗೆ ಅಸ್ತಿತ್ವ, ಪ್ರಸಿದ್ಧಿ ಇತ್ಯಾದಿಗಳನ್ನು ನೀಡುವವನು ವಿಷ್ಣು ಎಂದು ತಿಳಿದು ಉಪಾಸನೆ ಮಾಡಬೇಕು. ಪ್ರತಿಮೆಯೇ ದೇವರಲ್ಲ ಪ್ರತಿಮೆಯಲ್ಲಿ ದೇವರ ಸನ್ನಿಧಾನವಿದೆ ಎಂದು ತಿಳಿಯ ತಕ್ಕದ್ದು ಎಂದು ತಾತ್ಪರ್ಯ. ''ನಾಮ ಬ್ರಹ್ಮೇತ್ಯುಪಾಸೀತ'' ಇತ್ಯಾದಿ ಶ್ರುತಿಗಳಿಗೆ ''ಸಪ್ತಸು ಪ್ರಥಮಾ'' ಎಂಬ ವ್ಯಾಕರಣ ಸೂತ್ರದ ಪ್ರಕಾರ ಅರ್ಥ ಮಾಡಬೇಕು.

**ಅಣುಭಾಷ್ಯ:** ''ಏವಂ ತಥಾ ನಿತ್ಯಮುಪಾಸನಂ ಕಾರ್ಯಮ್''

ಇಲ್ಲಿ ''ತಥಾ'' ಶಬ್ದವು ಅವಧಾರಣಾರ್ಥಕವು. ಅವ್ಯಯಗಳಿಗೆ ಅನೇಕ ಅರ್ಥಗಳುಂಟು. ''ಏವಂ ತಥಾ'' ಅಂದರೆ ''ಏವಮೇವ''. ''ಸ್ವಾಮಿತ್ವೇನೈವ'', ಸ್ವಾಮಿ ಎಂಬುದಾಗಿಯೇ ನಿತ್ಯವೂ ಉಪಾಸನೆ ಮಾಡತಕ್ಕದ್ದು ಹೊರತು ಪ್ರತೀಕಕ್ಕೂ ಬ್ರಹ್ಮಕ್ಕೂ ಐಕ್ಯವೆಂಬುದಾಗಿ ತಿಳಿಯತಕ್ಕದಲ್ಲ ಎಂದು ಸಿದ್ಧಾಂತ.

## ಅಧಿಕರಣ - ೪

## ॥ ಬ್ರಹ್ಮಾಧಿಕರಣ ॥

## ॥ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ॥

ಆತ್ಮನಲ್ಲಿ ಬ್ರಹ್ಮತ್ವ ಉಪಾಸನೆಯನ್ನು ಸರ್ವದಾ ಮಾಡತಕ್ಕದ್ದೇ ಆಗಿದೆ, ಆತ್ಮನೇ ಬ್ರಹ್ಮ ಎಂದಲ್ಲ, ಇಲ್ಲಿ ಬ್ರಹ್ಮತ್ವ ಎಂದರೆ ಸರ್ವೋತ್ಕೃಷ್ಟತ್ವ ಎಂದರ್ಥ. ಬೇರೆ ಎಲ್ಲ ರೀತಿಯ ಉಪಾಸನೆಗಿಂತ ಸರ್ವೋತ್ಕೃಷ್ಟತ್ವ ಉಪಾಸನೆಯು ಭಗವಂತನ ಅತಿಶಯವಾದ ಅನುಗ್ರಹಕ್ಕೆ ಕಾರಣವು. ಆದ್ದರಿಂದ ಬ್ರಹ್ಮನನ್ನು ಸರ್ವೋತ್ಕೃಷ್ಟ ಎಂದು ತಿಳಿದು ಉಪಾಸನೆ ಮಾಡಬೇಕು ಎಂದು ತಾತ್ಪರ್ಯ.

**ಅಣುಭಾಷ್ಯ :** ''ವಿಷ್ಣುರ್ಬ್ರಹ್ಮ ಇತ್ಯೇವಂ ನಿತ್ಯಮುಪಾಸನಮ್ ಕಾರ್ಯಮ್''

ವಿಷ್ಣುವು 'ಬ್ರಹ್ಮ' ಅಂದರೆ ಸರ್ವೋತ್ತಮ ಎಂದೇ ಸರ್ವದಾ ಉಪಾಸನೆ ಮಾಡತಕ್ಕದ್ದು.

''ಆದಿವ್ಯಾಧಿ ನಿಮಿತ್ತೇನ ವಿಕ್ಷಿಪ್ತಮನಸೋಽಪಿ ತು ।

ಗುಣಾನಾಂ ಸ್ಮರಣಾSಶಕ್ತೌ ವಿಷ್ಣೋರ್ಬ್ರಹ್ಮತ್ವಮೇವ ತು ॥
ಸ್ಮರ್ತವ್ಯಂ ಸತತಂ ತತ್ತು ನ ಕದಾಚಿತ್ ಪರಿತ್ಯಜೇತ್ ॥''
ಎಂಬುದಾಗಿ ನಾರಾಯಣ ತಂತ್ರದ ವಾಕ್ಯವು ಇದನ್ನು ಸಮರ್ಥಿಸುತ್ತದೆ.

## ಅಧಿಕರಣ - ೫

## ॥ ಆದಿತ್ಯಾಧಿಕರಣ ॥

## ॥ ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ ॥

ಆದಿತ್ಯಾದಿ ದೇವತೆಗಳು ತಾವು ಭಗವಂತನ ಯಾವಾವ ಅಂಗಗಳಲ್ಲಿ ಆಶ್ರಿತರು ಎಂಬುದನ್ನು ತಿಳಿದು ಅದರಂತೆಯೇ ಸದಾ ಉಪಾಸನೆ ಮಾಡಬೇಕು. ಏಕೆಂದರೆ ಮುಕ್ತಿಯಲ್ಲಿ ಆವಾವ ಅಂಗಗಳಲ್ಲಿ ಪ್ರವೇಶವು ಅವರಿಗೆ ಅಪೇಕ್ಷಿತವು ಹಾಗೂ ಅವಶ್ಯಕವು. ''ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಃ ಚಿಂತ್ಯಂ ಸದೈವತು'' ಎಂಬ ನಾರಾಯಣ ತಂತ್ರದ ವಾಕ್ಯವು ಇದನ್ನೇ ಸಮರ್ಥಿಸುತ್ತದೆ.

**ಅಣುಭಾಷ್ಯ :** ''ತಥಾ ನಿತ್ಯಮುಪಾಸನಂ ಕಾರ್ಯಂ''

ಯಾವ ಪ್ರಕಾರದಲ್ಲಿ ಭಗವಂತನ ಅಂಗಗಳಲ್ಲಿ ಆಶ್ರಿತರೋ ಆ ಪ್ರಕಾರದಲ್ಲಿ ದೇವತೆಗಳಿಂದ ನಿತ್ಯವೂ ಉಪಾಸನೆಯು ಮಾಡತಕ್ಕದ್ದು ಎಂದು ತಾತ್ಪರ್ಯ.

## ಅಧಿಕರಣ - ೬

## ॥ ಆಸೀನಾಧಿಕರಣ ॥

## ॥ ಓಂ ಆಸೀನಃ ಸಂಭವಾತ್ ಓಂ ॥

ಸೂಕ್ತವಾದ ಆಸನದಲ್ಲಿ ಕುಳಿತು ಧ್ಯಾನವನ್ನು ಮಾಡಬೇಕು. ಹಾಗೆ ಮಾಡಿದಾಗ ಮಾತ್ರ ಸಮರ್ಪಕವಾದ ಉಪಾಸನೆಯು ಸಾಧ್ಯ. ಆಸನದಲ್ಲಿ ಉಪವಿಷ್ಟನಾಗದಿದ್ದರೆ ಸರಿಯಾದ ಉಪಾಸನೆಯು ಅಸಂಭವ ಎಂದು ತಾತ್ಪರ್ಯ.

''ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್''

ಎಂಬುದಾಗಿ ನಿರ್ಣಯಾದಿ ಗ್ರಂಥಗಳಲ್ಲಿ ಹೇಳಲಾಗಿದೆ. ಇದರ ಪ್ರಕಾರ ಸಂತತ ಸ್ಮರಣೆಗೇ ಪ್ರಾಧಾನ್ಯತೆಯು. ಸದಾ ಆಸನದಲ್ಲಿ ಕುಳಿತುಕೊಂಡೇ ಉಪಾಸನೆ ಸಾಧ್ಯವಿಲ್ಲ. ಆದ್ದರಿಂದ ಆಸನವು ಕಡ್ಡಾಯವಲ್ಲ ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಸ್ಮರಣೆಯು ಉಪಾಸನೆಯ ಒಂದು ಪ್ರಕಾರ. ಧ್ಯಾನವು ಮತ್ತೊಂದು ಪ್ರಕಾರ.

ಇವುಗಳಲ್ಲಿ ಭಗವದ್ದರ್ಶನಕ್ಕೆ ಧ್ಯಾನರೂಪವಾದ ಉಪಾಸನೆಯೇ ಮುಖ್ಯವಾದುದು. ಧ್ಯಾನೋಪಾಸನೆಗೆ ಸೂಕ್ತವಾದ ಆಸನವು ಅತ್ಯವಶ್ಯಕ ಎಂದು ಈ ಅಧಿಕರಣದ ಸಾರಾಂಶ.

''ಸ್ಮರಣೋಪಾಸನಂ ಚೈವ ಧ್ಯಾನಾತ್ಮಕಮಿತಿ ದ್ವಿಧಾ ।
ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋಪಾಸನಮಾಸನೇ ॥''

ಎಂಬುದಾಗಿ ನಾರಾಯಣ ತಂತ್ರದಲ್ಲಿ ಹೇಳಿದೆ.

**ಅಣುಭಾಷ್ಯ :** ''ತಥಾ ಉಪಾಸನಂ ಕಾರ್ಯಂ''

''ಉಪವಿಶ್ಯಾಸನೇ ಯುಂಜಾದ್ಯೋಗಮಾತ್ಮವಿಶುದ್ಧಯೇ'' ಎಂಬುದಾಗಿ ಭಗವದ್ಗೀತೆಯಲ್ಲಿ (6-12) ಹೇಳಿದೆ. ಆದ್ದರಿಂದ ಅಲ್ಲಿ ಹೇಳಿರುವಂತೆಯೇ ಅಂದರೆ ಆಸನದಲ್ಲಿ ಉಪವಿಷ್ಟನಾಗಿಯೇ ಧ್ಯಾನರೂಪವಾದ ಉಪಾಸನೆಯನ್ನು ಮಾಡ ತಕ್ಕದ್ದು ಎಂದು ಸಿದ್ಧಾಂತ.

## ಅಧಿಕರಣ - ೭

## ॥ ಆ ಪ್ರಾಯಣಾಧಿಕರಣ ॥

### ॥ ಓಂ ಆ ಪ್ರಾಯಣಾತ್ ತತ್ರಾಪಿ ಹಿ ದೃಷ್ಟವ್ ಓಂ ॥

''ಆ ಪ್ರಾಯಣಂ'' ಅಂದರೆ ಮೋಕ್ಷಪರ್ಯಂತವಾಗಿ ಧ್ಯಾನವನ್ನು ಮಾಡ ತಕ್ಕದ್ದು. ಏಕೆಂದರೆ ''ಪ್ರಾಯಣಾಂತಮೋಂಕಾರಮಭಿಧ್ಯಾಯೀತ'' ಎಂಬುದಾಗಿ ಶ್ರುತಿಯಲ್ಲಿ ದೃಷ್ಟವಾಗಿದೆ.

ಇಲ್ಲಿ ಓಂಕಾರ ಎಂದರೆ ಶ್ರೀಹರಿ ಎಂದರ್ಥ. "ಆವಿಮುಕ್ತೇಃ ವಿಧಿರ್ನಿತ್ಯಂ ಸ್ವತ ಏವ ತತಃ ಪರಮ್" ಎಂದು ಸ್ಮೃತಿಯೂ ವಿಧಿಯನ್ನು ಹೇಳುತ್ತದೆ. "ಮುಕ್ತಾವಪಿ ಹ್ಯೇನಮುಪಾಸತೇ" ಎಂದು ಶ್ರುತಿಯಿರುವುದರಿಂದ, ಮುಕ್ತಿಯಲ್ಲಿಯೂ ಉಪಾಸನೆಯು ಕೂಡುತ್ತದೆ. ಒಟ್ಟಿನಲ್ಲಿ ಈ ಅಧಿಕರಣದ ಅಭಿಪ್ರಾಯವೇನೆಂದರೆ - ಮುಮುಕ್ಷುಗಳು ಅಪರೋಕ್ಷ ಜ್ಞಾನವನ್ನು ಹೊಂದುವವರೆಗೆ ಮಾತ್ರ ಉಪಾಸನೆ ಮಾಡಬೇಕು, ಅನಂತರ ಅದರ ಅವಶ್ಯಕತೆಯಿಲ್ಲ ಎಂದು ಹೇಳಕೂಡದು. ಜ್ಞಾನ ಬಂದ ಮೇಲೂ ಮೋಕ್ಷವಾಗುವವರೆಗೂ ಉಪಾಸನೆಯನ್ನು ಮಾಡಬೇಕು. ಮೋಕ್ಷದಲ್ಲಿಯೂ ಆನಂದಾತಿಶಯಕ್ಕಾಗಿ ಉಪಾಸನೆಯನ್ನು ಮಾಡಬೇಕು.

**ಅಣುಭಾಷ್ಯ :** "ಆಪದ್ಯಪಿ ಬ್ರಹ್ಮ ಉಪಾಸನಂ ಕಾರ್ಯಂ"

ಲಿಂಗಭಂಗರೂಪವಾದ ಆಪತ್ತಿನಲ್ಲಿಯೂ ಅಂದರೆ ಮುಕ್ತಿಯಲ್ಲಿಯೂ ಉಪಾಸನೆಯನ್ನು ಮಾಡಬೇಕು. ಈ ಪ್ರಕಾರವಾಗಿ ಉಪಾಸನೆಯನ್ನು ಅವಶ್ಯಕವಾಗಿ ಅನುಷ್ಠಾನ ಮಾಡಬೇಕು ಎಂಬುದನ್ನು ನಿರೂಪಿಸಿ, ಈಗ ಉಪಾಸನೆಯನ್ನು ಫಲವನ್ನು ಹೇಳುತ್ತಾರೆ -

"ತೇನ ಯಾತ್ಯಪರೋಕ್ಷತಾಮ್"

"ತೇನ" ಅಂದರೆ ಧ್ಯಾನರೂಪ ಉಪಾಸನೆಯಿಂದ ಅಧಿಕಾರಿಗಳು ಅಪರೋಕ್ಷ ಜ್ಞಾನವನ್ನು ಹೊಂದುತ್ತಾರೆ. "ಅಪರೋಕ್ಷ್ಯ ತಾಂ ಯಾತಿ" ಎಂದರೆ ಮೋಕ್ಷವನ್ನು ಹೊಂದುತ್ತಾರೆ ಎಂದರ್ಥ.

## ಅಧಿಕರಣ - ೮

## ॥ ತದಧಿಗಮಾಧಿಕರಣ ॥

**॥ ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ॥**

ಅಪರೋಕ್ಷ ಜ್ಞಾನ ಬಂದ ಮೇಲೆ ಮೋಕ್ಷವು ನಿಶ್ಚಿತವಾಗಿ ಆಗಿಯೇ ಆಗುತ್ತದೆ. ಜ್ಞಾನವಾಗುತ್ತಿದ್ದಂತೆಯೇ ಹಿಂದೆ ಮಾಡಿದ್ದ ಪಾಪಗಳೆಲ್ಲವೂ ಅಶೇಷವಾಗಿ ನಾಶ ಹೊಂದುತ್ತವೆ. ಅನಂತರ ಏನಾದರೂ ಪಾಪಾಕರ್ಮ ಮಾಡಿದರೂ ಆದರಿಂದ ಲೇಪವುಂಟಾಗುವುದಿಲ್ಲ, ಈ ಪ್ರಕಾರವಾಗಿ ಅಪರೋಕ್ಷ ಜ್ಞಾನದಿಂದ ಕರ್ಮಕ್ಷಯವಾಗುವುದರಿಂದ ಮೋಕ್ಷವು ನಿಶ್ಚಿತ ಎಂದು ಹೇಳಲಾಗಿದೆ. ಈ ವಿಷಯವನ್ನು ''ತದ್ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ ಏವಂ ವಿದಿ ಪಾಪಂ ಕರ್ಮ ನ ಶ್ಲಿಷ್ಯತೇ'' (ಛಾಂದೋಗ್ಯ)

''ತದ್ಯಥಾ ಈಷಿಕಾ ತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹ್ಯೆವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ'' (ಛಾಂದೋಗ್ಯ) ಇತ್ಯಾದಿ ಶ್ರುತಿಯಲ್ಲಿ ಪ್ರತಿಪಾದಿಸಲಾಗಿದೆ. ಇದರ ಅಭಿಪ್ರಾಯವಿಷ್ಟು, ತಾವರೆಯ ಎಲೆಯ ಮೇಲೆ ಹೇಗೆ ನೀರು ಅಂಟುವುದಿಲ್ಲವೋ ಹಾಗೆಯೇ ಜ್ಞಾನಾನಂತರ ಮಾಡಿದ ಕರ್ಮಗಳು ಜ್ಞಾನಿಗೆ ಲೇಪವಾಗುವುದಿಲ್ಲ. ಹೇಗೆ ಹತ್ತಿಯ ರಾಶಿಯು ಅಗ್ನಿಯಲ್ಲಿ ಸುಟ್ಟು ಬೂದಿಯಾಗುವುದೋ ಹಾಗೆಯೇ ಜ್ಞಾನಪ್ರಾಪ್ತಿಗೆ ಪೂರ್ವದಲ್ಲಿ ಮಾಡಿದ ಕರ್ಮಗಳು ವಿನಾಶಹೊಂದುತ್ತವೆ. ಜ್ಞಾನೋದಯಾನಂತರ ಮೋಕ್ಷ ಪ್ರಾಪ್ತಿಯು ನಿಶ್ಚಯವೆಂದಾಗಿದ್ದರೂ, ಆ ಜನ್ಮದ ದೇಹಾಪಾತಾ ನಂತರವೇ ಆಗಬೇಕೆಂಬ ನಿಯಮವಿಲ್ಲ. ಪ್ರಾರಬ್ಧ ಕರ್ಮದಿಂದ ವಿಮುಕ್ತರಾದ ಜ್ಞಾನಿಗಳಿಗೆ ಜ್ಞಾನ ಬಂದ ಜನ್ಮದಲ್ಲಿಯೇ ಮೋಕ್ಷವು. ಪ್ರಾರಬ್ಧ ಶೇಷವಿದ್ದರೆ, ಅದರ ಭೋಗಾನಂತರವೇ ಮೋಕ್ಷವು ಎಂದು ತಾತ್ಪರ್ಯ.

**ಅಣುಭಾಷ್ಯ:**

''ಪ್ರಾರಬ್ಧಕರ್ಮಣೋಽನ್ಯಸ್ಯ ಜ್ಞಾನಾದೇವ ಪರಿಕ್ಷಯಃ ।
ಅನಿಷ್ಟಸ್ಯೋಭಯಸ್ಯಾಪಿ ಸರ್ವಸ್ಯಾನ್ಯಸ್ಯ ಭೋಗತಃ ॥''

ಯಾವ ಕರ್ಮದ ಫಲ ಭೋಗವು ಆರಂಭವಾಗಿದೆಯೋ ಅದು ''ಪ್ರಾರಬ್ಧ''. ಫಲಭೋಗವು ಇನ್ನೂ ಆರಂಭವಾಗದೇ ಇದ್ದರೆ ಅದು

''ಸಂಚಿತ''ಕರ್ಮ. ಜ್ಞಾನೋತ್ತರ ಮಾಡಿದ ಕರ್ಮವು ''ಆಗಾಮೀ'' ಎಂದು ತಿಳಿಯತಕ್ಕದ್ದು. ಅವುಗಳಲ್ಲಿ ಪ್ರಾರಬ್ಧಕರ್ಮಕ್ಕಿಂತ ಇತರವಾದ ಅಂದರೆ ಸಂಚಿತ ಮತ್ತು ಆಗಾಮೀ ಕರ್ಮಗಳ ಅನಿಷ್ಟವಾದ ಎಲ್ಲ ಪುಣ್ಯ ಕರ್ಮಗಳಿಗೂ ಹಾಗೂ ಎಲ್ಲ ಪಾಪಕರ್ಮಕ್ಕೂ ಅಪರೋಕ್ಷ ಜ್ಞಾನದಿಂದಲೇ ಅಶೇಷ ವಿನಾಶವು ಸಂಭವಿಸುತ್ತದೆ. ಮೇಲೆ ಹೇಳಿದ್ದಕ್ಕಿಂತ ಇತರವಾದ ಅಂದರೆ ಸಮಗ್ರವಾದ ಪ್ರಾರಬ್ಧ ಪುಣ್ಯ ಹಾಗೂ ಪ್ರಾಬ್ಧ ಪಾಪ ಫಲಕ್ಕೂ ಭೋಗದಿಂದಲೇ ಸಂಪೂರ್ಣ ನಾಶವು ಎಂಬುದಾಗಿ ಸಿದ್ಧಾಂತವು.

**ವಿವರಣೆ :**

ಜ್ಞಾನಿಗಳ ಕರ್ಮದಲ್ಲಿ ಮೂರು ವಿಧ- ಸಂಚಿತ, ಪ್ರಾರಬ್ಧ ಮತ್ತು ಆಗಾಮೀ ಎಂದು.

ಸಂಚಿತ ಕರ್ಮದಲ್ಲಿ ಪುಣ್ಯ ಹಾಗೂ ಪಾಪ ಎಂದು ಎರಡು ವಿಧ. ಪುಣ್ಯಕರ್ಮಗಳಲ್ಲಿ ಅಕಾಮ್ಯ ಮತ್ತು ಕಾಮ್ಯ ಎಂದು ಮತ್ತೆ ಎರಡು ವಿಧ. ಕಾಮ್ಯ ಕರ್ಮದಲ್ಲಿ ಇಷ್ಟ ಹಾಗೂ ಅನಿಷ್ಟ ಎಂದು ಎರಡು ವಿಧ. ಇವುಗಳಲ್ಲಿ ಅಕಾಮ್ಯ ಪುಣ್ಯಕರ್ಮವು ಅಪರೋಕ್ಷ ಜ್ಞಾನೋತ್ಪತ್ತಿಗೆ ಕಾರಣವು. ಕಾಮ್ಯ ಇಷ್ಟ ಪುಣ್ಯಕ್ಕೆ ಜ್ಞಾನದಿಂದ ನಾಶವಿಲ್ಲ, ಪ್ರಾರಬ್ಧದಂತೆ ಭೋಗದಿಂದಲೇ ನಾಶ. ಸಂಚಿತ ಕರ್ಮದಲ್ಲಿ ಅನಿಷ್ಟ ಕಾಮ್ಯ ಪುಣ್ಯ ಕರ್ಮ ಹಾಗೂ ಎಲ್ಲ ಪಾಪ ಕರ್ಮವೂ ಜ್ಞಾನದಿಂದಲೇ ನಾಶವಾಗುತ್ತವೆ.

ಪುಣ್ಯ ಮತ್ತು ಪಾಪ ಎಂಬ ಎರಡು ವಿಧದ ಎಲ್ಲ ಪ್ರಾರಬ್ಧ ಕರ್ಮಗಳೂ ಭೋಗದಿಂದಲೇ ನಾಶವಾಗುತ್ತವೆ.

ಆಗಾಮೀ ಕರ್ಮದಲ್ಲಿಯೂ ಪುಣ್ಯ, ಪಾಪ ಎಂದು ಎರಡು ವಿಧ. ಪುಣ್ಯ ಕರ್ಮದಲ್ಲಿ ಅಕಾಮ್ಯ, ಕಾಮ್ಯ ಎಂದು ಎರಡು ವಿಧ. ಕಾಮ್ಯದಲ್ಲಿ ಇಷ್ಟ ಅನಿಷ್ಟ ಎಂದು ಎರಡು ವಿಧ. ಇದರಲ್ಲಿ ಅಕಾಮ್ಯವಾದ ಪುಣ್ಯಕರ್ಮವು ಮೋಕ್ಷದಲ್ಲಿ

ಆನಂದಾತಿಶಯಕ್ಕೆ ಕಾರಣವಾಗುತ್ತದೆ. ಕಾಮ್ಯ ಇಷ್ಟ ಪುಣ್ಯವು ಜ್ಞಾನಿಯಿಂದ ಭೋಗಿಸಲ್ಪಡುತ್ತದೆ. ಅನಿಷ್ಟ ಪುಣ್ಯವನ್ನು ಯೋಗ್ಯರಿಗೆ ಹಂಚುತ್ತಾರೆ. (ಉದಾಹರಣೆಗೆ ಮಂತ್ರಾಲಯದ ಶ್ರೀ ರಾಘವೇಂದ್ರ ತೀರ್ಥರು ಮೊದಲಾದ ಮಹಾಜ್ಞಾನಿಗಳು ತಮ್ಮ ಅನಿಷ್ಟವಾದ ಪುಣ್ಯಕರ್ಮಗಳ ಫಲವನ್ನು ತಮ್ಮನ್ನು ಭಕ್ತಿಯಿಂದ ನಂಬಿದವರಿಗೆ ಹಂಚುತ್ತಿದ್ದಾರೆ). ಪಾಪ ಕರ್ಮದಲ್ಲಿಯೂ ಅಲ್ಪ ಮತ್ತು ಮಹತ್ ಎಂದು ಎರಡು ವಿಧ. ಅದರಲ್ಲಿ ದೇವತೆಗಳಿಗೂ, ಮನುಷ್ಯೋತ್ತಮರಿಗೂ ಅಲ್ಪವಾದ ಪಾಪಕ್ಕೆ ಸಂಪೂರ್ಣನಾಶವು. ಅದರ ಫಲವನ್ನು ದ್ವೇಷಿಗಳು ಭೋಗಿಸುತ್ತಾರೆ. ಮನುಷ್ಯೋತ್ತಮರು ಮಾಡುವ ಮಹತ್ತಾದ ಪಾಪದಿಂದ ಅವರವರ ಯೋಗ್ಯತಾನುಸಾರವಾಗಿ ಕ್ಲೃಪ್ತವಾದ ಆನಂದಕ್ಕೇನೆ ಹ್ರಾಸವುಂಟಾಗುತ್ತದೆ. ದೇವತೆಗಳಿಗಾದರೋ ಮಹಾಪಾಪದಿಂದಲೂ ಅವರಿಗೆ ಕ್ಲೃಪ್ತವಾದ ಆನಂದಕ್ಕೆ ಹ್ರಾಸವಿಲ್ಲ. ಆದರೆ ಸ್ವಯೋಗ್ಯತೆಗಿಂತ ಅಧಿಕವಾದ ಸಾಧನೆಯಿಂದ ಯಾವ ಆನಂದಾದಿಗಳನ್ನು ಮೋಕ್ಷದಲ್ಲಿ ಅನುಭವಿಸಬೇಕಾಗುವುದೋ, ಅದು ಕೇವಲ ಕ್ಲೃಪ್ತವಾದ ಆನಾಂದಿಗಳಿಗೇನೆ ಸಮುದ್ರ ತೆರೆಯಂತೆ ತಾತ್ಕಾಲಿಕ ಉನ್ನಾಹ ಕಂಡು ಬಂದು, ಶ್ರೀಘ್ರದಲ್ಲಿಯೇ ಆನಂದದ ಉನ್ನಾಹವು ಹೋಗಿ ಬಿಡುತ್ತದೆ. ಕೊನೆಯಲ್ಲಿ ಅವರಿಗೆ ಕ್ಲೃಪ್ತವಾದ ಆನಂದವಷ್ಟೇ ಭೋಗಿಸಲ್ಪಡುತ್ತದೆ.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ನಾಲ್ಕನೆಯ ಅಧ್ಯಾಯದ ಮೊದಲನೆಯ ಪಾದವು ಮುಕ್ತಾಯವಾಯಿತು ॥**



## ನಾಲ್ಕನೆಯ ಅಧ್ಯಾಯದ ಎರಡನೆಯ ಪಾದ

ಉತ್ತರೇಷೂತ್ತರೇಷು ಏವಂ ಯಾವದ್ವಾಯುಂ ವಿಮುಕ್ತಿಗಾಃ ।
ಪ್ರವಿಶ್ಯ ಭುಂಜತೇ ಭೋಗಾನ್ ತದಂತರ್ಬಹಿರೇವ ವಾ ॥೩॥
ವಾಯುರ್ವಿಷ್ಣುಂ ಪ್ರವಿಶ್ಯೈವ ಭೋಗಾನ್ ಚೈವೋತ್ತರೋತ್ತರಮ್ ।
ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ ದೇಹಕ್ಷಯಾತ್ ಸುರಾಃ ॥೪॥

ದೇವತೆಗಳಿಗೆ ಸ್ವೋತ್ತಮ ಪ್ರವೇಶ ದ್ವಾರಾ ಲಯವು. ಇತರರಿಗೆ ಉತ್ಕ್ರಮಣ ರೂಪವಾದ ದೇಹಕ್ಷಯಾಖ್ಯ ಲಯವು ಎಂಬ ಫಲವನ್ನು ಈ ಪಾದದಲ್ಲಿ ನಿರೂಪಿಸುತ್ತಾರೆ. ಇದರಲ್ಲಿ ಮೊದಲಿಗೆ ದೇವತೆಗಳ ಲಯದ ವಿಷಯದಲ್ಲಿರುವ ವಿವಾದವನ್ನು ಪರಿಹರಿಸುತ್ತಾರೆ.

## ಅಧಿಕರಣ - ೧

## ॥ ಓಂ ವಾಙ್ಮನಸಾಧಿಕರಣ ॥

## ॥ ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ ॥

ವಾಗಿಂದ್ರಿಯವು ಮನಸ್ಸಿನಲ್ಲಿ ಲೀನವಾಗುತ್ತದೆ. ಏಕೆಂದರೆ ಮಾತಿಗೆ ಮನೋ ವಶತ್ವವು ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ. ಇಲ್ಲಿ ವಾಕ್ ಶಬ್ದದಿಂದ ತದಭಿಮಾನಿ ದೇವತೆ ಉಮಾ ದೇವಿಯೂ ಮನಸ್ ಶಬ್ದದಿಂದ ತದಭಿಮಾನಿ ದೇವತೆ ರುದ್ರದೇವರೂ ಹೇಳಲ್ಪಟ್ಟಿದ್ದಾರೆ. ಅಂದರೆ ವಾಗಭಿಮಾನಿನಿ ಉಮಾದೇವಿಗೆ ಮನೋಭಿಮಾನಿ ರುದ್ರದೇವರಲ್ಲಿ ಲಯವು ಎಂದು ತಾತ್ಪರ್ಯ.

"ಮನಸಾ ವಾಽಗ್ರೇ ಸಂಕಲ್ಪಯತಿ ಅಥ ವಾಚಾವ್ಯವಹರತಿ"

"ಯಾವನ್ನ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣ" ಇತ್ಯಾದಿ ಶ್ರುತಿಗಳು ವಾಗಿಂದ್ರಯವು ಮನಸ್ಸಿನಲ್ಲಿ ಲೀನವಾಗುತ್ತದೆ ಎಂಬುದಕ್ಕೆ ಪ್ರಮಾಣವಾಗಿವೆ.

"ಉಮಾ ವೈ ವಾಕ್ ಸಮುದ್ದಿಷ್ಟಾ ಮನೋ ರುದ್ರ ಉದಾಹೃತಃ ।
ತದೇತನ್ಮಿಥುನಂ ಜ್ಞಾತ್ವಾ ನ ದಾಂಪತ್ಯಾದ್ವಿಹೀಯತೇ ॥"

ಎಂಬ ಸ್ಕಾಂದ ಪುರಾಣದ ವಚನವು ಅಭಿಮಾನಿ ದೇವತೆಗಳ ವಿಷಯದಲ್ಲಿ ಪ್ರಮಾಣವಾಗಿದೆ.

## ಅಧಿಕರಣ - ೨

## ॥ ಮನಃ ಪ್ರಾಣಾಧಿಕರಣ ॥

## ॥ ಓಂ ತನ್ಮನಃ ಪ್ರಾಣ ಉತ್ತರಾತ್ ಓಂ ॥

ಪೂರ್ವೋಕ್ತವಾದ ಮನಸ್ಸು (ಅಂದರೆ ರುದ್ರದೇವರು) ಪ್ರಾಣ ಅಂದರೆ ಚತುರ್ಮುಖನಲ್ಲಿ (ತತ್ಸಮಾನ ವಾಯುದೇವರಲ್ಲಿ) ವಿಲೀನವಾಗುತ್ತದೆ. ಏಕೆಂದರೆ "ವಾಙ್ಮನಸಿ ಸಂಪದ್ಯತೇ" ಎಂಬ ಶ್ರುತಿಯ ಉತ್ತರವಾಕ್ಯದಲ್ಲಿ "ಮನಃ ಪ್ರಾಣೇ" ಎಂದು ಶ್ರುತವಾಗಿದೆ. ಯಾರಿಗೆ ಯಾರಿಂದ ಉತ್ಪತ್ತಿಯೋ ಅವರಲ್ಲಿಯೇ ಲಯವು. "ವಾಯುವಿನಿಂದ ರುದ್ರನ ಉತ್ಪತ್ತಿ" ಎಂಬುದಾಗಿ "ವಾಯೋರ್ವಾವ ರುದ್ರ ಉದೇತಿ" ಎಂಬ ಶ್ರುತಿಯಿಂದ ತಿಳಿದು ಬರುತ್ತದೆ. ಆದ್ದರಿಂದ ಮನೋಭಿಮಾನ ರುದ್ರನಿಗೆ ಪ್ರಾಣಾಭಿಮಾನಿ ವಾಯುವಿನಲ್ಲಿ ಲಯವು ಎಂದು ಸಿದ್ಧಾಂತ.

## ಅಧಿಕರಣ - ೩

## ॥ ಅಧ್ಯಕ್ಷಾಧಿಕರಣ ॥

## ॥ ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ ॥

ಆ ಪ್ರಾಣನಾದರೂ ಸರ್ವೋತ್ತಮನಾದ ಪರಮಾತ್ಮನಲ್ಲಿ ಲೀನಗೊಳ್ಳುತ್ತಾನೆ. ಏಕೆಂದರೆ ಪ್ರಾಣದೇವರಿಗೆ - ಪರಮಾತ್ಮನಿಂದ ಉತ್ಪತ್ತಿಯು ಹೇಳಲ್ಪಟ್ಟಿದೆ. 'ಆದಿ' ಶಬ್ದದಿಂದ ಅಧೀನತ್ವವನ್ನು ಗ್ರಹಿಸಬೇಕು. "ಪ್ರಾಣಃ ಪರಮುಪಗಚ್ಛತಿ । ಪ್ರಾಣಃ ಪರಮನುಪ್ರಾಣಿತಿ ॥" (ಬೃಹದಾರಣ್ಯಕ ಉಪನಿಷತ್ತು) ಎಂಬ ಶ್ರುತಿಯು ಪ್ರಾಣನಿಗೆ ಪರಮಾತ್ಮನಲ್ಲಿ ಲಯವು ಎಂಬುದಕ್ಕೆ ಪ್ರಮಾಣವಾಗಿದೆ. "ಅಗ್ನಿರಿಂದ್ರಂ ತಥೇಂದ್ರಶ್ಚ ವಾಯುಮಾವಿಶ್ಯ ಸೋಽಪಿತು । ಆವಿಶ್ಯ ಪರಮಾತ್ಮಾನಂ ಭುಂಕ್ತೇ ಭೋಗಾಂಸ್ತು ಬಾಹ್ಯಕಾನ್ ॥" ಇತ್ಯಾದಿ ಸ್ಮೃತಿಯೂ ಇದಕ್ಕೆ ಪ್ರಮಾಣವು.

## ಅಧಿಕರಣ - ೪

## ॥ ಭೂತಾಧಿಕರಣ ॥

## ॥ ಓಂ ಭೂತೇಷು ತತ್ ಶ್ರುತೇಃ ಓಂ ॥

ಎಲ್ಲ ದೇವತೆಗಳಿಗೂ ಅಗ್ನಿಯಲ್ಲಿಯೇ ಲಯವೆಂಬುದು ಇಲ್ಲ. ಕೆಲವು ವಿಶೇಷ ದೇವತೆಗಳನ್ನು ಹೊರತುಪಡಿಸಿ ಇತರ ದೇವತೆಗಳೆಲ್ಲರೂ ಪಂಚಭೂತ

ಗಳಲ್ಲಿ ವಿಲೀನಗೊಳ್ಳುತ್ತಾರೆ.''ಭೂತೇಷು ದೇವಾ ವಿಲೀಯಂತೇ'' ಎಂಬುದಾಗಿ ಬೃಹತ್ ಶ್ರುತಿಯು ಹೇಳುತ್ತದೆ. ಹೀಗೆ ಹೇಳುವುದರಿಂದ ''ಅಗ್ನೌ ಸರ್ವೇ ದೇವಾ ವಿಲೀಯಂತೇ'' ಎಂಬ ಗೌಪವನ ಶ್ರುತಿಯ ವಾಕ್ಯಕ್ಕೆ ವಿರೋಧ ಬರುವುದಿಲ್ಲ. ಭೂತೇಷು ಎಂಬುದಾಗಿ ನಿರವಕಾಶ ಬಹುವಚನ ಶ್ರವಣ ಬಲದಿಂದ ಪೂರ್ವೋಕ್ತ ''ಸರ್ವೇ ದೇವಾಃ'' ಎಂಬ ಶ್ರುತಿಯಲ್ಲಿ ''ಸರ್ವೇ'' ಎಂಬುದಕ್ಕೆ ''ಯೇ ವಿಶಿಷ್ಟೋಕ್ತೇಭ್ಯೋಽನ್ಯೇ ದೇವಾಃ ತೇ ಸರ್ವೇ'' ಎಂಬುದಾಗಿ ಅರ್ಥ ಮಾಡಬೇಕಾಗುತ್ತದೆ.

## ಅಧಿಕರಣ - ೫

## ॥ ನೈಕಸ್ಮಿನ್ನಧಿಕರಣ ॥

## ॥ ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ॥

ಒಬ್ಬನೇ ಅಗ್ನಿಯಲ್ಲಿಯೇ ಎಲ್ಲ ದೇವತೆಗಳೂ ವಿಲೀನರಾಗುವುದಿಲ್ಲ. ಏಕೆಂದರೆ ಮಹೋಪನಿಷತ್ತಿನಲ್ಲಿ ಹಾಗೂ ಚತುರ್ವೇದ ಶಿಖೆಯಲ್ಲಿ ಹೀಗೆ ಹೇಳಲ್ಪಟ್ಟಿದೆ.

''ಪೃಥಿವ್ಯಾಂ ಋಭವೋ ವಿಲೀಯಂತೇ, ವರುಣೇ ಅಶ್ವಿನಾವಗ್ನಾವಗ್ನಯೋ, ವಾಯಾವಿಂದ್ರಃ'' ಎಂದು ಮಹೋಪನಿಷತ್ತಿನಲ್ಲಿಯೂ, ''ಮೃತ್ಯವಃ ಪೃಥಿವ್ಯಾಂ, ವರುಣೇ ಆಪೋ, ಅಗ್ನಯಸ್ತೇಜಸಿ, ಮರುತೋ ಮಾರುತೇ, ಆಕಾಶೇ ವಿನಾಯಕಾ ವಿಲೀಯಂತೇ'' ಎಂದು ಚತುರ್ವೇದ ಶಿಖೆಯಲ್ಲಿಯೂ ಪ್ರತ್ಯೇಕವಾಗಿ ಭೂತಗಳಲ್ಲಿ ದೇವತಾಲಯವು ಹೇಳಲ್ಪಟ್ಟಿದೆ. ಆದ್ದರಿಂದ ಯಾರಿಗೆ ಎಲ್ಲೆಲ್ಲಿ ಲಯವು ನಿರ್ದಿಷ್ಟವಾಗಿ ಹೇಳಲ್ಪಟ್ಟಿದೆಯೋ ಅವರಿಗೆ ಅಲ್ಲಲ್ಲಿ ಲಯವು ಹಾಗೇ ನಿರ್ದಿಷ್ಟವಾಗಿಲ್ಲದ ಉಳಿದ ಎಲ್ಲ ದೇವತೆಗಳಿಗೂ ಅಗ್ನಿಯಲ್ಲಿ ಲಯವು ಎಂದು ಸಿದ್ಧಾಂತ.

**ಅಣುಭಾಷ್ಯ :**

''ಉತ್ತರೇಷೂತ್ತರೇಷು ಏವಂ ಯಾವದ್ವಾಯುಂ ವಿಮುಕ್ತಿಗಾಃ ।

ಪ್ರವಿಶ್ಯ ಭುಂಜತೇ ಭೋಗಾನ್ ತದಂತರ್ಬಹಿರೇವ ವಾ ॥
ವಾಯುರ್ವಿಷ್ಣುಂ ಪ್ರವಿಶ್ಯೈವ ಭೋಗಾಂಶ್ಚೈವೋತ್ತರೋತ್ತರಮ್ ।''

ಮೇಲಿನ ಒಂದು ಮತ್ತು ಅರ್ಧ ಶ್ಲೋಕದಿಂದ ಈ ಪಾದದ ಮೊದಲ ಐದು ಅಧಿಕರಣಗಳ ಸಾರವನ್ನು ಸಂಗ್ರಹಿಸಲಾಗಿದೆ. ಮುಂದೆ ಹೇಳಲಿರುವ ''ಮುಕ್ತಿಂ ಯಾಂತಿ'' ಎಂಬುದನ್ನು ಇದರೊಂದಿಗೆ ಸೇರಿಸಿಕೊಳ್ಳಬೇಕು.

'ವಿಮುಕ್ತಿಗಾಃ'' ಅಂದರೆ ಮುಕ್ತಿಯನ್ನು ಪಡೆಯುವ ಅಧಮ ದೇವತೆಗಳು, ಸ್ವೋತ್ತಮ ದೇವತೆಗಳಲ್ಲಿ ಯಾವ ಪ್ರಕಾರವಾಗಿ ಶ್ರುತಿಗಳಲ್ಲಿ ನಿರ್ದೇಶಿತ ವಾಗಿದೆಯೋ ಅದರಂತೆಯೇ, ತಾರತಮ್ಯಾನಸಾರ ವಾಯುವಿನ ಪರ್ಯಂತ ಪ್ರವೇಶಿಸಿ ದೇಹಲಯವನ್ನು ಹೊಂದಿ ಆವಾವ ದೇವತೆಗಳ ದೇಹದಲ್ಲಿಯೇ ಇರುತ್ತ ಅಥವಾ ದೇಹದಿಂದ ಹೊರಗೆ ಬಂದು ಸುಖಭೋಗಗಳನ್ನು ಭುಂಜಿಸುತ್ತಾರೆ, ಕ್ಲೇಶಗಳನ್ನಲ್ಲ ಎಂದರ್ಥ.

ಇದರಿಂದ ''ವಾಙ್ಮನಸಿ ದರ್ಶನಾತ್ ಶಬ್ದಾಚ್ಚ'' ''ತನ್ಮನಃ ಪ್ರಾಣ ಉತ್ತರಾತ್'', ''ಭೂತೇಷು ತತ್‌ಶ್ರುತೇಃ'', ''ನೈಕಸ್ಮಿನ್ ದರ್ಶಯತೋ ಹಿ'' ಎಂಬ ನಾಲ್ಕು ಅಧಿಕರಣಗಳ ತಾತ್ಪರ್ಯವನ್ನು ಹೇಳಿದಂತಾಯಿತು. ''ವಾಯುಃ ವಿಷ್ಣುಂ ಪ್ರವಿಶ್ಯ'' ಎಂಬುವಲ್ಲಿ ವಾಯು ಶಬ್ದದಿಂದ ಚತುರ್ಮುಖ ಬ್ರಹ್ಮನೆಂದು ತಿಳಿಯತಕ್ಕದ್ದು. ಅಂದರೆ ಚತುರ್ಮುಖ ಬ್ರಹ್ಮದೇವರು ವಿಷ್ಣುವನ್ನು ಪ್ರವೇಶಿಸಿಯೇ ಅವನ ಒಳಗಿದ್ದು ಅಥವಾ ಹೊರಗೆ ಬಂದು ಭೋಗಗಳನ್ನು ಅನುಭವಿಸುತ್ತಾರೆ ಎಂದು ತಾತ್ಪರ್ಯ. ''ವಾಯುಃ ವಿಷ್ಣುಂ ಪ್ರವಿಶ್ಯೈವ'' ಎಂಬುದರಿಂದ ''ಸೋಽಧ್ಯಕ್ಷೇ ತದುಪಗಮಾದಿಭ್ಯಃ'' ಎಂಬ ಅಧಿಕರಣದ ತಾತ್ಪರ್ಯವು ಹೇಳಲ್ಪಟ್ಟಿದೆ ಎಂದು ತಿಳಿಯತಕ್ಕದ್ದು. ಉತ್ಕ್ರಾಂತಿ ಹೊಂದಿದ ಜ್ಞಾನಿ ಸಮೂಹಕ್ಕೂ ಕೂಡ ತತ್ಕಾಲದಲ್ಲಿ ಅರ್ಚಿರಾದಿ ಮಾರ್ಗದಲ್ಲಿ ಮೇಲೆ ಹೇಳಿದ ಪ್ರಕಾರವಾಗಿಯೇ ದಿವ್ಯವಾದ ವಿಷಯ ಭೋಗವುಂಟು ಎಂಬುದಾಗಿಯೂ ತಿಳಿಯತಕ್ಕದ್ದು.

## ಅಧಿಕರಣ - ೬

## ॥ ಸಮನಾಧಿಕರಣ ॥

## ॥ ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ॥

ರಮಾದೇವಿಗೆ ಪರಮಾತ್ಮನಲ್ಲಿ ಲಯವಿಲ್ಲ. ಏಕೆಂದರೆ ಅವಳು ನಿತ್ಯಮುಕ್ತಳು. ಸರ್ವದಾ ಪರಮಾತ್ಮನ ಉಪಾಸನೆಯಲ್ಲಿಯೇ ನಿರತಳು. ಅವಳಿಗೆ ಯಾವ ಕಾಲಕ್ಕೂ ಸಂಸಾರದಲ್ಲಿ ಪ್ರವೇಶವೆಂಬುದು ಇಲ್ಲ. ಏಕೆಂದರೆ ಅವಳು ಪರಮಾತ್ಮನಂತೆ ನಿತ್ಯತ್ವ ಹಾಗೂ ಸರ್ವಗತತ್ವವುಳ್ಳವಳು, ಲಕ್ಷ್ಮೀದೇವಿಯು ಪರಮಾತ್ಮನಂತೆಯೇ ದೇಶತಃ, ಕಾಲತಃ, ಸಮಾನವಾದ ವ್ಯಾಪ್ತಿಯನ್ನು ಹೊಂದಿರುವಳು. ಆದ್ದರಿಂದ ಅವಳಿಗೆ 'ಸಮನಾ' ಎಂದು ಹೆಸರು. ಆದರೂ ಅವಳಿಗೆ ಪರಮಾತ್ಮನಂತೆ ಗುಣಗಳಿಂದ ವ್ಯಾಪ್ತತ್ವವಿಲ್ಲದಿರುವುದರಿಂದ ''ಸಮಾನಃ'' ಅಂದರೆ ಪರಮಾತ್ಮನಿಗೆ ಸಮಳಲ್ಲ. ಲಕ್ಷ್ಮೀದೇವಿಗೆ ಪರಮಾತ್ಮನಲ್ಲಿ ಲಯವಿಲ್ಲ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ''ತೇಜಃ ಪರಸ್ಯಾಂ ದೇವತಾಯಾಂ'' ಎಂಬ ಶ್ರುತಿಯು ಲಕ್ಷ್ಮೀದೇವಿಗೆ ಪರಮಾತ್ಮನಲ್ಲಿ ಲಯವನ್ನು ಪ್ರತಿಪಾದಿಸುತ್ತದೆ. ಹೀಗೆಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ''ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ'' ಎಂಬ ಭಾಗವತ ತಾತ್ಪರ್ಯದ ಏಕಾದಶ ಸ್ಕಂಧದಲ್ಲಿ ಲಕ್ಷ್ಮೀದೇವಿಗೆ ಲಯವೆಂದರೆ ''ಪರಮಾತ್ಮನಿಗೆ ಅತ್ಯಂತ ಸಾಮಿಪ್ಯದಲ್ಲಿರುವುದೆಂದೇ ಅರ್ಥ'' ಎಂದು ವಿವರಣೆ ನೀಡಲಾಗಿದೆ. ಆದ್ದರಿಂದ ಮೇಲೆ ಉದಾಹರಿಸಿದ ಶ್ರುತಿಗೆ ವಿರೋಧ ಬರುವುದಿಲ್ಲ. ಆ ಶ್ರುತಿಯಲ್ಲಿ ಅತಿಸಾಮೀಪ್ಯತೆಯನ್ನೇ ಲಯವೆಂಬ ಅರ್ಥದಲ್ಲಿ ಹೇಳಲಾಗಿದೆ.

**ಅಣುಭಾಷ್ಯ :** ''ವಾಯುಃ ವಿಷ್ಣುಮೇವ ಪ್ರವಿಶ್ಯ''

ಚತುರ್ಮುಖನು ವಿಷ್ಣುವನ್ನೇ ಪ್ರವೇಶಿಸಿ ಮುಕ್ತಿಯನ್ನು ಹೊಂದುತ್ತಾನೆ ಎಂದರ್ಥ. ಲಕ್ಷ್ಮೀದೇವಿಯನಲ್ಲ ಎಂದು ನಿಶ್ಚಿಯವಾಗಿ ಹೇಳಲು ಏವಕಾರವನ್ನು ಪ್ರಯೋಗಿಸಲಾಗಿದೆ. ಲಕ್ಷ್ಮೀದೇವಿಗೆ ಪರಮಾತ್ಮನಲ್ಲಿ ಲಯವಿದ್ದಿದ್ದರೆ ''ವಾಯುಃ

ಪ್ರಕೃತಿಂ ಪ್ರವಿಶ್ಯ'' ಎಂದು ಹೇಳಬೇಕಿತ್ತು. ಪರಮಾತ್ಮನಲ್ಲಿ ಲಯ ಹೊಂದುವುದೇ ಮುಕ್ತಿಗೆ ಹೇತುವು. ಪ್ರಕೃತಿ ವಿಲಯಕ್ಕೆ ಮುಕ್ತಿಹೇತುತ್ವವಿಲ್ಲ. ಏಕೆಂದರೆ ಶ್ರುತಿಯು ಇದನ್ನೇ ಪ್ರತಿಪಾದಿಸುತ್ತದೆ. ಸೌಪರ್ಣ ಶ್ರುತಿಯ ವಾಕ್ಯವು ಹೀಗಿದೆ-

''ವಿಲೀನೋ ಹಿ ಪ್ರಕೃತೌ ಸಂಸಾರಮೇತಿ। ವಿಲೀನೇ ಪರಮೇ ಹಿ ಅಮೃತತ್ವಮೇತಿ ॥'' ಆದ್ದರಿಂದ ಪ್ರಕೃತ್ಯಭಿಮಾನಿನಿಯಾದ ಮಹಾಲಕ್ಷ್ಮಿಗೆ ಲಯವೆಂಬುದಿಲ್ಲ ಎಂದು ಸಿದ್ಧಾಂತ.

## ಅಧಿಕರಣ - ೭

## ॥ ಪರಾಧಿಕರಣ ॥

## ॥ ಓಂ ತಾನಿ ಪರೇ ತಥಾಹ್ಯಾಹ ಓಂ ॥

''ತಾನಿ'' ಅಂದರೆ ''ತಾನಿ ಸರ್ವಾಣಿ ದೈವತಾನಿ'' ಎಂದರ್ಥ. ಎಲ್ಲ ದೇವತೆಗಳೂ ಪ್ರಾಣದ್ವಾರಾ ಪರಮಾತ್ಮನಲ್ಲಿ ಲಯ ಹೊಂದುತ್ತಾರೆ. ''ತಥಾ ಹಿ'' ಲಯ ಪ್ರಕಾರವು ಹೀಗೆಯೇ ಎಂಬುದಾಗಿ ''ಸರ್ವೇ ದೇವಾಃ ಪ್ರಾಣಾಮಾವಿಶ್ಯ'' ಇತ್ಯಾದಿ ಶ್ರುತಿಯು ಹೇಳುತ್ತದೆ.

ಪರಮಾತ್ಮ ಪ್ರತಿಬಿಂಬತ್ವವಿಲ್ಲದಿರುವುದರಿಂದ ದೇವತೆಗಳಿಗೆ ಪರಮಾತ್ಮನಲ್ಲಿ ಲಯವಿಲ್ಲ. ಏಕೆಂದರೆ ಪ್ರತಿಬಿಂಬಕ್ಕೆ ಬಿಂಬದಲ್ಲಿಯೇ ಲಯ ಎಂಬ ನಿಯಮವಿದೆ. ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ ಎಲ್ಲ ದೇವತೆಗಳಿಗೂ ಪರಮಾತ್ಮನಲ್ಲಿ ನೇರವಾಗಿ ಲಯವನ್ನು ಹೇಳಿಯೇ ಇಲ್ಲ. ಪ್ರಾಣನು ಮುಖ್ಯ ಪ್ರತಿಬಿಂಬನಾದ್ದರಿಂದ ಪ್ರಾಣನಿಗೇ ಮಾತ್ರ ಪರಮಾತ್ಮನಲ್ಲಿ ನೇರವಾಗಿ ಲಯವು. ಉಳಿದೆಲ್ಲ ದೇವತೆಗಳೂ ಪರಂಪರಾಕ್ರಮವಾಗಿ ಪ್ರಾಣನಿಗೆ ಪ್ರತಿಬಿಂಬರು. ಅಧಮರು ಸ್ವೋತ್ತಮರಿಗೆ ಉತ್ತರೋತ್ತರ ಪ್ರತಿಬಿಂಬರು. ಎಲ್ಲ ದೇವತೆಗಳೂ ಸ್ವೋತ್ತಮ ದೇವತೆಗಳಲ್ಲಿ ಲಯ ಹೊಂದುವ ಮೂಲಕ ಅಂತಿಮವಾಗಿ ಪ್ರಾಣನನ್ನು ಪ್ರವೇಶಿಸಿ, ಪ್ರಾಣದ್ವಾರಾ ಪರಮಾತ್ಮನನ್ನು ಪ್ರವೇಶಿಸುತ್ತಾರೆ ಎಂಬುದೇ ಸಿದ್ಧಾಂತ, ಇದಕ್ಕೆ ಯಾವ ಶ್ರುತಿ, ಸ್ಮೃತಿ ವಿರೋಧವೂ ಇರುವುದಿಲ್ಲ ಎಂದು ತಾತ್ಪರ್ಯ.

**ಅಣುಭಾಷ್ಯ :** ''ಸುರಾಃ ಉತ್ತರೇಷೂತ್ತರೇಷು ಏವಂ ಯಾವದ್ವಾಯುಂ ಪ್ರವಿಶ್ಯ ಭುಂಜತೇ ಭೋಗಾನ್ ಉತ್ತರೋತ್ತರಮ್''

ದೇವತೆಗಳು ಉತ್ತರೋತ್ತರ ತಾರತಮ್ಯ ಕ್ರಮದಲ್ಲಿ ವಾಯುವನ್ನು ಪ್ರವೇಶಿಸಿ, ವಾಯುದ್ವಾರಾ ಪರಮಾತ್ಮನನ್ನು ಪ್ರವೇಶಿಸಿ, ಮುಕ್ತಿಯಲ್ಲಿ ಉತ್ತರೋತ್ತರವಾಗಿ ಅಧಿಕವಾದ ಕ್ಲೃಪ್ತ ಭೋಗವನ್ನು ಭುಂಜಿಸುತ್ತಾರೆ. ಎಂದು ತಾತ್ಪರ್ಯ.

## ಅಧಿಕರಣ - ೮

## ।। ಅವಿಭಾಗಾಧಿಕರಣ ।।

## ।। ಓಂ ಅವಿಭಾಗೋ ವಚನಾತ್ ಓಂ ।।

ಮುಕ್ತರಿಗೆ ಸತ್ಯಕಾಮತ್ವಾದಿಗಳಲ್ಲಿ (ಅಂದರೆ ಬಯಸಿದ್ದೆಲ್ಲವೂ ಈಡೇರುವುದು ಇತ್ಯಾದಿ) ''ಅವಿಭಾಗಃ'' ಅಂದರೆ ಭಗವಂತನ ಇಚ್ಛೆಯ ಪ್ರಕಾರ ವಿಭಾಗವೆಂಬುದಿಲ್ಲ, ಅಂದರೆ ಭಗವದಿಚ್ಛಾನುಸಾರಿಯಾಗಿ ಮುಕ್ತರ ಇಚ್ಛೆಯು ಈಡೇರುತ್ತದೆ. ಏಕೆಂದರೆ ಶ್ರುತಿಯು ಇದನ್ನು ಪ್ರಮಾಣೀಕರಿಸುತ್ತದೆ. ಮುಕ್ತರು ಪರಮಾತ್ಮನ ಅಧೀನರಾಗಿಯೇ ಭೋಗಗಳನ್ನು ಭುಂಜಿಸುತ್ತಾರೆ, ಹೊರತು ಸ್ವತಂತ್ರರಾಗಿ ಅಲ್ಲ ಎಂದು ತಾತ್ಪರ್ಯ.

''ಏತೇ ದೇವಾ ಏತಮಾತ್ಮಾನಮನುಪ್ರವಿಶ್ಯ ಸತ್ಯಾಃ ಸತ್ಯಕಾಮಾಃ''

ಎಂಬುದಾಗಿ ಶ್ರುತಿಯು ಸಾಯುಜ್ಯ ಮುಕ್ತಿಯನ್ನು ಹೊಂದಿದ ದೇವತೆಗಳಿಗೆ ಸತ್ಯಕಾಮತ್ವಾದಿಗಳನ್ನು ಪ್ರತಿಪಾದಿಸುತ್ತದೆ. ಹಾಗೆಂದು ಮುಕ್ತರು ಸ್ವತಂತ್ರರೆಂದು ತಾತ್ಪರ್ಯವಲ್ಲ, ಏಕೆಂದರೆ ಅವರ ಸತ್ಯಕಾಮಾತ್ವಾದಿಗಳು ಭಗವಂತನ ಇಚ್ಛೆಗೆ ಅನುಸಾರವಾಗಿಯೇ ಅಂದರೆ ಭಗವದಧೀನವಾಗಿಯೇ ಸಂಭವಿಸುತ್ತವೆ ''ಕಾಮೇನ ಮೇ ಕಾಮ ಆಗಾತ್'' ಇತ್ಯಾದಿ ಶ್ರುತಿಯು ಇದಕ್ಕೆ ಪ್ರಮಾಣವಾಗಿದೆ.

**ಅಣುಭಾಷ್ಯ :** ''ವಿಷ್ಣುಂ ಪ್ರವಿಶ್ಯೈವ ಭೋಗಾನ್ ಭುಂಜತೇ''

ಇಲ್ಲಿ ''ಪ್ರವಿಶ್ಯೈವ'' ಎಂದರೆ ''ಅನುಸೃತ್ಯೈವ'' ಎಂದರ್ಥ. ವಿಷ್ಣುವಿನ

ಇಚ್ಛೆಯನ್ನು ಅನುಸರಿಸಿಯೇ, ಅಂದರೆ ಅವನ ಇಚ್ಛೆಗೆ ಅಧೀನರಾಗಿಯೇ ಭೋಗಗಳನ್ನು ಭುಂಜಿಸುತ್ತಾರೆ, ಸ್ವತಂತ್ರರಾಗಿ ಅಲ್ಲ ಎಂದು ಸಿದ್ಧಾಂತ.

## ಅಧಿಕರಣ - ೯

## ॥ ತದೋಕೋಽಧಿಕರಣ ॥

**॥ ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತ ದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯಾನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ ॥**

ದೇಹೋತ್ಕ್ರಮಣ ಕಾಲದಲ್ಲಿ ಭಗವಂತನ ತೇಜಸ್ಸಿನಿಂದ ಜ್ಞಾನಿಯ ಹೃದಯಾಗ್ರದಲ್ಲಿ ಪ್ರಕಾಶವು ಉಂಟಾಗುತ್ತದೆ. ಆ ಪ್ರಕಾಶದಿಂದ ಪ್ರಕಾಶಿತವಾದ ನಾಡಿದ್ವಾರಾ ಜ್ಞಾನಿಯು ತನ್ನ ಅಪರೋಕ್ಷಜ್ಞಾನದ ಸಾಮರ್ಥ್ಯದಿಂದ ತನ್ನ ಗತಿಯನ್ನು ಸ್ಮರಿಸಿಕೊಂಡು, ಜ್ಞಾನದಿಂದ ಪ್ರಸನ್ನನಾದ ಹೃದಿಸ್ಥನಾದ ಭಗವಂತನ ಅನುಗ್ರಹದಿಂದ ಸುಷುಮ್ನಾ ನಾಮಕವಾದ ಬ್ರಹ್ಮನಾಡಿಯಿಂದ ದೇಹದಿಂದ ಹೊರಬರುತ್ತಾನೆ. ಅಜ್ಞಾನಿಗೆ ಈ ಪ್ರಕಾರದ ಉತ್ಕ್ರಮಣ ಅಸಂಭವ. ಆದ್ದರಿಂದ ಜ್ಞಾನಿಯ ಕೊನೆಯ ಜನ್ಮದ ಮರಣಕ್ಕೂ, ಅಜ್ಞಾನಿಯ ಮರಣಕ್ಕೂ ಸಾಮ್ಯವಿಲ್ಲ. ಜ್ಞಾನಿಗೆ ಭಗವದನುಗ್ರಹದಿಂದ ಮಾರ್ಗಾನುಸ್ಮರಣೆ ಇರುವುದು. ಭಗವಂತನು ಪ್ರಜ್ವಲಿಸುವ ಪ್ರಕಾಶದಿಂದ ಮಾರ್ಗವು ಸ್ಪಷ್ಟವಾಗುವುದು ಎಂದು ಸಿದ್ಧಾಂತ.

## ಅಧಿಕರಣ - ೧೦

## ॥ ಯೋಗ್ಯಧಿಕರಣ ॥

**॥ ಓಂ ಯೋಗಿನಃ ಪ್ರತಿ ಸ್ಮರ್ಯತೇ ಸ್ಮಾರ್ತೇ ಚೈಕೇ ಓಂ ॥**

ಜ್ಞಾನಯೋಗಿಗಳಿಗೆ ಬ್ರಹ್ಮ ಪ್ರಾಪ್ತಿಯು, ಕರ್ಮಯೋಗಿಗಳಿಗೆ ಚಂದ್ರ ಪ್ರಾಪ್ತಿಯು ಎಂಬುದನ್ನು ಈ ಅಧಿಕರಣದಲ್ಲಿ ಪ್ರತಿಪಾದಿಸಲಾಗಿದೆ. (ದೇಹೋತ್ಕ್ರಮಣ ಕಾಲದಲ್ಲಿ) ಜ್ಞಾನಿಯೋಗಿಗಳು ಬ್ರಹ್ಮಲೋಕಪ್ರಾಪ್ತಿಗಾಗಿ ಉತ್ಕ್ರಮಣ ಮಾರ್ಗವನ್ನು ತಮ್ಮ ಜ್ಞಾನ ಸಾಮರ್ಥ್ಯದಿಂದ ಸ್ಮರಿಸುತ್ತಾರೆ. ಹಾಗೂ

ಗತ್ಯನುಸ್ಮೃತಿ ಸಾಧ್ಯವಾದ ಬ್ರಹ್ಮಲೋಕವನ್ನು ಹೊಂದುತ್ತಾರೆ. ಕರ್ಮಯೋಗಿಗಳು ದೇಹೋತ್ಕ್ರಮಣ ಕಾಲದಲ್ಲಿ ಚಂದ್ರಲೋಕ ಪ್ರಾಪ್ತಿಯ ಗತಿಯನ್ನು ಸ್ಮರಿಸುತ್ತಾರೆ. "ಅಗ್ನಿರ್ಜ್ಯೋತಿಃ" "ಧೂಮೋರಾತ್ರಿಃ" ಇತ್ಯಾದಿ ಸ್ಮೃತಿಗಳಲ್ಲಿ ಗತ್ಯನುಸ್ಮೃತಿಯ ಬಗ್ಗೆ ಹೇಳಲಾಗಿದೆ. ಇದರಿಂದ ಎರಡು ರೀತಿಯ ಮಾರ್ಗಗಳಿವೆ ಎಂದು ಪ್ರತಿಪಾದಿಸಲ್ಪಟ್ಟಿತು. ಬ್ರಹ್ಮಲೋಕ ಪ್ರಾಪ್ತಿಗೆ ಅರ್ಚಿರಾದಿ ಮಾರ್ಗವು, ಚಂದ್ರಲೋಕ ಪ್ರಾಪ್ತಿಗೆ ಧೂಮಾದಿ ಮಾರ್ಗವು. ಜ್ಞಾನಯೋಗಿಗಳಿಗೆ ಅರ್ಚಿರಾದಿ ಮಾರ್ಗದ ಸ್ಮರಣೆಯು, ಕರ್ಮಯೋಗಿಗಳಿಗೆ ಧೂಮಾದಿ ಮಾರ್ಗ ಸ್ಮರಣೆಯು ಎಂದು ತಾತ್ಪರ್ಯ.

"ಅಗ್ನಿ ರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥
ಧೂಮೋ ರಾತ್ರಿ ಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿಃ ಯೋಗೀ ಪ್ರಾಪ್ಯ ನಿವರ್ತತೇ ॥"

ಇತ್ಯಾದಿ ಸ್ಮೃತಿಯೇ ಇದಕ್ಕೆ ಪ್ರಮಾಣವು. ಈ ಸ್ಮೃತಿಯು ಬ್ರಹ್ಮಾದಿ ಲೋಕ ಪ್ರಾಪ್ತಿಗೆ ಕಾಲಾಧೀನತ್ವವನ್ನು ಹೇಳಿರುವುದಿಲ್ಲ. ಬ್ರಹ್ಮಾದಿ ಪ್ರಾಪ್ತಿಗಾಗಿ ಮೇಲೆ ಹೇಳಲ್ಪಟ್ಟಿರುವ ಅಗ್ನ್ಯಾದಿ ಮಾರ್ಗ ಸ್ಮರಣೆಯು ವಿದ್ಯಾಕೃತತ್ವವೇ ಆಗಿರುವುದು, ಹೊರತು ಕಾಲಾದಿ ಕೃತತ್ವವಲ್ಲ. ಏಕೆಂದರೆ ಮೇಲಿನ ಸ್ಮೃತಿಯಲ್ಲಿ "ಅಗ್ನಿರ್ಜ್ಯೋತಿಃ" ಇತ್ಯಾದಿ ಮಾರ್ಗವನ್ನು ಬ್ರಹ್ಮವಿದರು ಅಂದರೆ ಜ್ಞಾನಯೋಗಿಗಳು ಅನುಸರಿಸುತ್ತಾರೆ ಎಂದು ಹೇಳಲಾಗಿದೆ. "ಧೂಮೋರಾತ್ರಿಃ" ಇತ್ಯಾದಿ ಮಾರ್ಗವನ್ನು ಯೋಗಿಗಳು ಅಂದರೆ ಕರ್ಮಯೋಗಿಗಳು ಅನುಸರಿಸುತ್ತಾರೆ ಎಂದು ಹೇಳಲಾಗಿದೆ. ಹೀಗೇಕೆ ಅರ್ಥ ಮಾಡಬೇಕು ಎಂದರೆ "ಗತ್ಯನುಸ್ಮರಣಾತ್ ಬ್ರಹ್ಮ ಚಂದ್ರಂ ವಾ ಗಚ್ಛತಿ ಧ್ರುವಂ" ಎಂಬುದಾಗಿ "ಅಧ್ಯಾತ್ಮ" ಎಂಬ ಸ್ಮೃತಿಯಲ್ಲಿ ಹೇಳಿದೆ. ಆದ್ದರಿಂದ ಬ್ರಹ್ಮಾದಿ ಲೋಕ ಪ್ರಾಪ್ತಿಯು ವಿದ್ಯಾಗತ್ಯನುಸ್ಮರಣೆಯಿಂದಲೇ ಎಂದು ತಾತ್ಪರ್ಯ.

**ಅಣುಭಾಷ್ಯ :**

ಮೇಲಿನ ಎರಡು ಅಧಿಕರಣಗಳ ತಾತ್ಪರ್ಯವನ್ನು "ಉತ್ಕ್ರಮ್ಯ ಮಾನುಷಾ" ಇತ್ಯಾದಿಯಾಗಿ ಸಂಗ್ರಹಿಸಲಾಗಿದೆ.

"ಉತ್ಕ್ರಮ್ಯ ಮಾನುಷಾ ಮುಕ್ತಿಂ ಯಾಂತಿ ದೇಹಕ್ಷಯಾತ್ಸುರಾಃ"

ಈ ವಾಕ್ಯಕ್ಕೆ "ಗತ್ಯನುಸ್ಮರಣ ಪೂರ್ವಕಂ" ಎಂದು ಸೇರಿಸಿಕೊಳ್ಳಬೇಕು. ಇಲ್ಲಿ 'ಮಾನುಷಾಃ' ಎಂಬ ಶಬ್ದವು ದೇವತೆಗಳಿಂದ ಅನ್ಯರಾದ ಜ್ಞಾನಿಗಳನ್ನು ಹೇಳುತ್ತದೆ. ಜ್ಞಾನಿಗಳು ಗತ್ಯನುಸ್ಮರಣ ಪೂರ್ವಕವಾಗಿ ಬ್ರಹ್ಮನಾಡಿಯ ದ್ವಾರಾ ದೇಹದಿಂದ ಉತ್ಕ್ರಮಿಸಿ ಮುಕ್ತಿಯನ್ನು ಹೊಂದುತ್ತಾರೆ, ಹೊರತು ಅಜ್ಞಾನಿಗಳಲ್ಲ ಎಂದು ತಾತ್ಪರ್ಯ. ದೇವತೆಗಳಿಗಾದರೆ ಉತ್ಕ್ರಮಣ ಮಾರ್ಗವೆಂಬುದಿಲ್ಲ. ಮುಕ್ತಿಯನ್ನು ಹೊಂದುವ ಕಾಲದಲ್ಲಿಯೇ ಅವರಿಗೆ ದೇಹಲಯವು. "ಮೊದಲು ಗತ್ಯನುಸ್ಮರಣ ಪೂರ್ವಕ ದೇಹದಿಂದ ಉತ್ಕ್ರಮಣ, ಮಾರ್ಗಾನುಸ್ಮರಣ, ಅನಂತರ ಬ್ರಹ್ಮ ಲೋಕಪ್ರಾಪ್ತಿ, ಅಲ್ಲಿಂದ ಬ್ರಹ್ಮದೇವರೊಂದಿಗೆ ಮುಕ್ತಿ ಪ್ರಾಪ್ತಿ" ಎಂಬುದು ಜ್ಞಾನಿಗಳಿಗಷ್ಟೇ, ಹೊರತು ದೇವತೆಗಳಿಗಲ್ಲ ಎಂದು ತಾತ್ಪರ್ಯ. ಆದರೆ ಕೆಲವೊಮ್ಮೆ ಭೂಮಿಯಲ್ಲಿ ಅವತಾರ ಮಾಡಿದಾಗ ಮಾತ್ರ ದೇವತೆಗಳಿಗೆ ಉತ್ಕ್ರಮಣವಿರುತ್ತದೆ.

"ಜಾತಾನಾಂ ಮಾನುಷೇ ಲೋಕೇ ದೇವಾನಾಂ ಚ ಕದಾಚನ ।
ಉತ್ಕ್ರಾಂತಿ ಮಾರ್ಗೌ ಭವತೋ ನ ತದಾ ಮುಕ್ತಿರಿಷ್ಯತೇ ॥"

ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದೆ.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ನಾಲ್ಕನೆಯ ಅಧ್ಯಾಯದ ಎರಡನೆಯ ಪಾದವು ಮುಕ್ತಾಯವಾಯಿತು ॥**



# ನಾಲ್ಕನೆಯ ಅಧ್ಯಾಯದ ಮೂರನೆಯ ಪಾದ

ಆರ್ಚಿರಾದಿ ಪಥಾ ವಾಯುಂ ಪ್ರಾಪ್ಯ ತೇನ ಜನಾರ್ದನಮ್ ।
ಯಾಂತ್ಯುತ್ತಮಾ ನರೋಚ್ಚಾದ್ಯಾ ಬ್ರಹ್ಮ ಲೋಕಾತ್ ಸಹಾಮುನಾ॥೫॥

ಬ್ರಹ್ಮನಾಡಿಯ ದ್ವಾರಾ ದೇಹದಿಂದ ಹೊರಬರುವ ಜ್ಞಾನಿಗಳಿಗೆ ಬ್ರಹ್ಮ ಪ್ರಾಪ್ತಿಗಾಗಿ ಮಾರ್ಗವನ್ನೂ, ಗಮ್ಯವನ್ನೂ (ಅಂದರೆ ಹೊಂದಲಿರುವ ಸ್ಥಾನ ವನ್ನೂ) ಈ ಪಾದದಲ್ಲಿ ನಿರೂಪಿಸುತ್ತಾರೆ.

## ಅಧಿಕರಣ - ೧

## ॥ ಅರ್ಚಿರಾದ್ಯಧಿಕರಣ ॥

## ॥ ಓಂ ಅರ್ಚಿರಾದಿನಾ ತತ್ ಪ್ರಥಿತೇಃ ಓಂ ॥

ಜ್ಞಾನಿಯು ಅರ್ಚಿರಾದಿ ಮಾರ್ಗದಿಂದ ಬ್ರಹ್ಮಲೋಕವನ್ನು ಕುರಿತು ಹೋಗುತ್ತಾನೆ. ಈ ವಿಷಯವು ಶ್ರುತಿ, ಸ್ಮೃತಿಗಳಲ್ಲಿ ಪ್ರಸಿದ್ಧವಾಗಿದೆ ಎಂದರ್ಥ. ಊರ್ಧ್ವ ಗಮನಕ್ಕಾಗಿ ಎರಡು ರೀತಿಯ ಮಾರ್ಗಗಳಿದ್ದರೂ, ಎರಡಕ್ಕೂ ಸಮಾನ ವಾದ ಪ್ರಾಶಸ್ತ್ಯವಿಲ್ಲ. ಜ್ಞಾನಿಗಳಿಗೆ ಒಂದೇ ಮಾರ್ಗವು. ಅದುವೇ ಅರ್ಚಿರಾದಿ ಮಾರ್ಗವು. ಕರ್ಮಯೋಗಿಗಳಿಗೆ ಧೂಮಾದಿ ಮಾರ್ಗವು. ಹೀಗೆ ವಿದ್ಯಾ ಕರ್ಮ ಗಳ ಭೇದದಿಂದ ಮಾರ್ಗದಲ್ಲಿಯೂ ಎರಡು ಪ್ರತ್ಯೇಕ ವಿಧವು. ಹೀಗೇಕೆ ತಿಳಿಯಬೇಕೆಂದರೆ-

''ದ್ವಾವೇವ ಮಾರ್ಗೌ ಪ್ರಥಿತಾ ಅರ್ಚಿರಾದಿರ್ವಿಪಶ್ಚಿತಾಮ್ ।
ಧೂಮಾದಿಃ ಕರ್ಮಿಣಾಂ ಚೈವ ಸರ್ವವೇದ ವಿನಿರ್ಣಯಾತ್ ॥''

ಎಂಬುದಾಗಿ ಬ್ರಹ್ಮತರ್ಕ ವಚನವು ಎರಡು ಮಾರ್ಗಗಳ ಬಗ್ಗೆ ಸ್ಪಷ್ಟನೆ ನೀಡುತ್ತದೆ.

## ಅಧಿಕರಣ - ೨

## ॥ ವಾಯುಶಬ್ದಾಧಿಕರಣ ॥

**|| ಓಂ ವಾಯುಶಬ್ದಾದವಿಶೇಷ ವಿಶೇಷಾಭ್ಯಾಮ್ ಓಂ ||**

ದೇಹೋತ್ಕ್ರಮಣ ಮಾಡುವ ಎಲ್ಲರಿಗೂ ಊರ್ಧ್ವಗಮನಕ್ಕಾಗಿ ಎರಡು ಮಾರ್ಗಗಳಿವೆ. ಅದರಲ್ಲಿ ಒಂದು ಮಾರ್ಗದಲ್ಲಿ ಅರ್ಚಿರ್ಲೋಕವು ಮೊದಲಿನದು. ಎರಡನೆಯ ಮಾರ್ಗದಲ್ಲಿ ವಾಯುಲೋಕವು ಮೊದಲಿನದು. ಏಕೆಂದರೆ ''ತೇಽರ್ಚಿಷಮಭಿಸಂಭವಂತಿ ಅರ್ಚಿಷೋಽಹಃ'' ಎಂದು ಒಂದು ಶ್ರುತಿಯಲ್ಲಿಯೂ, 'ಯದಾಹ ವೈ ಪುರುಷೋ ಅಸ್ಮಾತ್ ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ'' ಎಂದು ಮತ್ತೊಂದು ಶ್ರುತಿಯಲ್ಲಿಯೂ ಹೇಳಲಾಗಿದೆ. ಹೀಗೆಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಅರ್ಚಿರಾದಿ ಮಾರ್ಗದಲ್ಲಿ ಹೋಗುವ ಜ್ಞಾನಿಗಳಿಗೆ ವಾಯುಲೋಕವೇ ದ್ವಿತೀಯ ಪ್ರಾಪ್ಯವು. ಅಂದರೆ ಮೊದಲು ಅರ್ಚಿರ್ಲೋಕವನ್ನು ಹೊಂದಿ, ಅನಂತರ ಎರಡನೆಯದಾಗಿ ವಾಯು ಲೋಕವನ್ನು ಹೊಂದುತ್ತಾರೆ. ಹೀಗೇಕೆ ತಿಳಿಯಬೇಕು ಎಂದರೆ, ಮೇಲೆ ಉದಾಹರಿಸಿದ ಶ್ರುತಿಗಳಲ್ಲಿ ಮೊದಲನೆಯದರಲ್ಲಿ ಸಾಮಾನ್ಯತಃ ಹೇಳಲಾಗಿದೆ ಹಾಗೂ ಎರಡನೆಯದರಲ್ಲಿ ವಿಶೇಷತಃ ವಾಯು ಶಬ್ದವನ್ನು ಹೇಳಲಾಗಿದೆ. ''ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ'' ಎಂಬುದಾಗಿ ವಿಶೇಷ ಶ್ರುತಿಯು ಜ್ಞಾನಿಗಳಿಂದ ದ್ವಿತೀಯ ಪ್ರಾಪ್ಯತ್ವವೇ ವಾಯುಲೋಕವು ಎಂಬುದನ್ನು ಸಮರ್ಥಿಸುತ್ತದೆ. ಆದ್ದರಿಂದ ಮೇಲೆ ಉದಾಹರಿಸಿದ ಅವಿವೇಷ ಹಾಗೂ ವಿಶೇಷ ಶ್ರುತಿಗಳ ಸಮನ್ವಯದಿಂದ, ಮೊದಲು ಅರ್ಚಿರ್ಲೋಕ ಪ್ರಾಪ್ತಿ, ಅನಂತರ ಎರಡನೆಯದಾಗಿ ವಾಯುಲೋಕ ಪ್ರಾಪ್ತಿ, ತದನಂತರ ಅಹರ್ಲೋಕ ಪ್ರಾಪ್ತಿ ಎಂಬುದಾಗಿ ತಿಳಿಯತಕ್ಕದ್ದು.

**ಅಧಿಕರಣ - ೩**

**|| ತಟಿದಧಿಕರಣ ||**

**|| ಓಂ ತಟಿತೋಽಧಿ ವರುಣಃ ಸಂಬಂಧಾತ್ ಓಂ ||**

ತಟಿಲ್ಲೋಕದ ಮೇಲೆ ವರುಣ ಲೋಕವು ಹೊಂದಲ್ಪಡುತ್ತದೆ. ಏಕೆಂದರೆ ''ಸಂಬಂಧಾತ್''. ಅಂದರೆ ತಟಿಲ್ಲೋಕಕ್ಕೂ ವರುಣಲೋಕಕ್ಕೂ ಹೀಗೆ ಸಂಬಂಧ

ಕಲ್ಪಿಸುವ ಶ್ರುತಿಯಿದೆ. "ತಟಿತೋ ವರುಣ ಗಚ್ಛತಿ। ತಟಿತಾದ್ಯೂಹ್ಯತೇ ವರುಣಲೋಕಃ॥" ಎಂಬುದಾಗಿ ಶ್ರುತಿಯು ಹೇಳುತ್ತದೆ.

## ಅಧಿಕರಣ - ೪

## ॥ ಆತಿವಾಹಿಕಾಧಿಕರಣ ॥

## ॥ ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ॥

ಪೂರ್ವೋಕ್ತವಾದ "ಸ ವಾಯುಮಾಗಚ್ಛತಿ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ವಾಯು ಶಬ್ದವು ಮುಖ್ಯವಾಯುಪರವಲ್ಲ. ಅದು ಆತಿವಾಹಿಕನೆಂಬ ಅಮುಖ್ಯ ವಾಯುವನ್ನು ಹೇಳುತ್ತದೆ. ಏಕೆಂದರೆ ಪ್ರಥಮ ಪ್ರಾಪ್ಯತ್ವ ಲಿಂಗ ವಿರುವುದರಿಂದ ಹೀಗೆ ಅರ್ಥ ಮಾಡಬೇಕು. ಮುಖ್ಯ ವಾಯುವಿಗೆ ಚರಮ ಪ್ರಾಪ್ಯತ್ವವು ಹೇಳಲ್ಪಡುತ್ತದೆ. ಇದಕ್ಕೆ ಪ್ರಮಾಣವೇನೆಂದರೆ- "ಉತ್ಕ್ರಾಂತೋ ವಿದ್ವಾನ್ ಪರಮಭಿಗಚ್ಛನ್ ವಿದ್ಯುತಮೇವಾಂತತ ಉಪಗಚ್ಛತಿ, ದ್ಯೌರ್ವಾವ ವಿದ್ಯುತ್ । ತತ್‌ಪತಿಂ ವಾಯುಂ ಉಪಗಮ್ಯ ತೇನೈವ ಬ್ರಹ್ಮಗಚ್ಛತಿ ॥" ಎಂದು ಮುಖ್ಯವಾಯುವಿಗೆ ಚರಮ ಪ್ರಾಪ್ಯತ್ವವನ್ನು ಶ್ರುತಿಯು ಹೇಳುತ್ತದೆ. ಜ್ಞಾನಿಯ ಉತ್ಕ್ರಮಣ ಮಾರ್ಗದ ಬಗ್ಗೆ ಕೆಳಕಂಡ ಸ್ಮೃತಿಯು ಸ್ಪಷ್ಟವಾಗಿ ವಿವರಣೆ ನೀಡುತ್ತದೆ-

ಉತ್ಕ್ರಾಂತಸ್ತು ಶರೀರಾತ್ ಸ್ವಾತ್ ಗಚ್ಛಂತಿ ಅರ್ಚಿಷಮೇವ ತು ।
ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾತಿವಾಹಿಕಃ ॥
ತತೋಽಹಃ ಪೂರ್ವಪಕ್ಷಂ ಚಾಪ್ಯುದಕ್ ಸಂವತ್ಸರಂ ತಥಾ ।
ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ॥
ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ ।
ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಮ್ ॥

ಮೇಲೆ ಉದಾಹರಿಸಿದ ಶ್ರುತಿ, ಸ್ಮೃತಿಗಳಿಂದ ಜ್ಞಾನಿಗಳ ಉತ್ಕ್ರಮಣ ಮಾರ್ಗವು ಸ್ಪಷ್ಟವಾಗಿ ತಿಳಿಯುತ್ತದೆ. ಅರ್ಚಿರ್ಲೋಕದ ಅನಂತರ ಉಲ್ಲೇಖಿತ ವಾಗಿರುವ ವಾಯುವು ವಾಯು ಪುತ್ರನಾದ ಆತಿವಾಹಿಕ ವಾಯುವು. ಕೊನೆಯಲ್ಲಿ

ಉಕ್ತವಾಗಿರುವ ವಾಯುವೇ ಪ್ರಧಾನ ವಾಯುವು. ''ಸ ಏನಾ ಬ್ರಹ್ಮ ಗಮಯತಿ'', ಅಂದರೆ ಪ್ರಧಾನವಾಯುವೇ ಜ್ಞಾನಿಯನ್ನು ಪರಬ್ರಹ್ಮನ ಬಳಿಗೆ ಕರೆದೊಯ್ಯುತ್ತಾನೆ ಎಂಬುದೇ ಸಿದ್ಧಾಂತ.

## ಅಧಿಕರಣ - ೫

## ॥ ವೈದ್ಯುತಾಧಿಕರಣ ॥

## ॥ ಓಂ ವೈದ್ಯುತೇನೈವ ತತಃ ತತ್‌ಶ್ರುತೇಃ ಓಂ ॥

ಬ್ರಹ್ಮ ಪ್ರಾಪ್ತಿ ಮಾರ್ಗಗಳಲ್ಲಿ ಮುಖ್ಯ ವಾಯುವಿನ ಲೋಕವೇ ಅಂತಿಮ ಪ್ರಾಪ್ಯವು. ವಾಯು ಲೋಕಕ್ಕೂ ಪರಮೇಶ್ವರನ ಲೋಕಕ್ಕೂ ಮಧ್ಯೆ ಇನ್ನೊಂದು ಪ್ರಾಪ್ಯಲೋಕವಿದೆ ಎಂದು ಶಂಕಿಸಬಾರದು. ಪುರುಷೋತ್ತಮನನ್ನು ಹೊಂದುವ ಮುಂಚೆ ಕೊಟ್ಟ ಕೊನೆಯದೇ ವಾಯುಲೋಕವು. ''ಸ ಏನಾ ಬ್ರಹ್ಮ ಗಮಯತಿ'' ಇತ್ಯಾದಿ ಶ್ರುತಿಯು ಇದಕ್ಕೆ ಪ್ರಮಾಣವು. ಕೆಳಕಂಡ ಸ್ಮೃತಿಯೂ ಇದನ್ನೇ ಸಮರ್ಥಿಸುತ್ತದೆ.

''ವಿದ್ಯುತ್ ಪತಿಃ ವಾಯುರೇವ ನಯೇದ್ ಬ್ರಹ್ಮ ನ ಚಾಪರಃ।
ಕುತೋಽನ್ಯಸ್ಯ ಭವೇತ್ ಶಕ್ತಿಃ ತಮೃತೇ ಪ್ರಾಣನಾಯಕಮ್ ॥''

ಆದ್ದರಿಂದ ವಾಯುಲೋಕಕ್ಕೂ ಪರಮೇಶ್ವರ ಲೋಕಕ್ಕೂ ನಡುವೆ ಮತ್ತೊಂದು ಪ್ರಾಪ್ಯ ಸ್ಥಾನವಿಲ್ಲ ಎಂಬುದೇ ಸಿದ್ಧಾಂತ.

**ಅಣುಭಾಷ್ಯ :** ಮೇಲಿನ ಐದು ಅಧಿಕರಣಗಳ ತಾತ್ಪರ್ಯವನ್ನೂ ಕೆಳಗಿನ ಒಂದೇ ವಾಕ್ಯದಲ್ಲಿ ಸಂಗ್ರಹಿಸಲಾಗಿದೆ-

''ಅರ್ಚಿರಾಧಿ ಪಥಾ ವಾಯುಂ ಪ್ರಾಪ್ಯ ತೇನ ಜನಾರ್ದನಮ್ ಯಾಂತಿ''

ಜ್ಞಾನಿಯು ಅರ್ಚಿರಾದಿ ಮಾರ್ಗಗಳಲ್ಲಿ ಕೊನೆಯಲ್ಲಿ ವಾಯುವನ್ನು ಹೊಂದಿ, ವಾಯುವಿನಿಂದ ಜನಾರ್ದನನ್ನು ಹೊಂದುತ್ತಾನೆ ಎಂದರ್ಥ. ಉಪಲಕ್ಷಣಯಾ ಸ್ವೋತ್ತಮ ಪ್ರವೇಶ ಮಾರ್ಗದಿಂದ ಎಂದು ತಿಳಿಯತಕ್ಕದ್ದು. ಅನುವ್ಯಾಖ್ಯಾನದಲ್ಲಿ

''ತಸ್ಮಾದಶೇಷಾ ಗಿರಿಜಾಂ ಪ್ರವಿಶ್ಯ ತಥೈವ ರುದ್ರಂ ಸಹ ತೇನ ವಾಣೀಂ'' ಇತ್ಯಾದಿ ವಾಕ್ಯಗಳಲ್ಲಿ ಈ ಪ್ರಮೇಯವನ್ನು ಶ್ರೀ ಮದಾಚಾರ್ಯರು ಹೇಳಿದ್ದಾರೆ.

## ಅಧಿಕರಣ - ೭

## ॥ ಕಾರ್ಯಾಧಿಕರಣ ॥

## ॥ ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ ॥

''ಸ ಏನಾನ್ ಬ್ರಹ್ಮ ಗಮಯತಿ'' ಎಂಬ ಶ್ರುತಿಯಲ್ಲಿ ವಾಯುವು ಅರ್ಚಿರಾದಿ ಮಾರ್ಗದಲ್ಲಿ ಬರುವ ಎಲ್ಲರನ್ನೂ ಕಾರ್ಯಬ್ರಹ್ಮ ಅಂದರೆ ಚತುರ್ಮುಖ ಬ್ರಹ್ಮನ ಬಳಿಗೆ ಒಯ್ಯುತ್ತಾನೆ ಎಂಬುದಾಗಿ ಬಾದರಿ ಆಚಾರ್ಯರು ತಿಳಿಯುತ್ತಾರೆ. ಬ್ರಹ್ಮ ಶಬ್ದವು ಪರಬ್ರಹ್ಮನಲ್ಲಿಯೇ ಮುಖ್ಯವಾಗಿ ಕೂಡುವುದರಿಂದ ಈ ವ್ಯಾಖ್ಯಾನವು ಸರಿಯಲ್ಲ ಎಂದರೆ, ಅದಕ್ಕೆ ಉತ್ತರ - '' ಅಸ್ಯ ಗತ್ಯುಪಪತ್ತೇಃ''. ಅಂದರೆ ಚತುರ್ಮುಖನ ಮುಕ್ತಿಯಾಗುವವರೆಗೆ ಬಂಧವಿರುವ ಕಾರಣ, ಮುಕ್ತಿಗೆ ಮೊದಲು ಚತುರ್ಮುಖನಲ್ಲಿಯೇ ಗತಿಯು ಕೂಡುತ್ತದೆ ಎಂಬುದೇ ಸೂತ್ರಾರ್ಥವು ಎಂದು ಒಂದು ಪೂರ್ವ ಪಕ್ಷ. ಬ್ರಹ್ಮ ಶಬ್ದವು ಮುಖ್ಯಾರ್ಥದಲ್ಲಿ ಪರಬ್ರಹ್ಮನನ್ನೇ ಹೇಳುವುದರಿಂದ ಹಾಗೂ ಪರಬ್ರಹ್ಮನನ್ನು ಹೊಂದುವುದೇ ಮುಕ್ತಿಯು. ಆದ್ದರಿಂದ ಈ ಸೂತ್ರದಲ್ಲಿ ಹೇಳಿರುವ ಪ್ರಕಾರ ಎಲ್ಲರೂ ಕಾರ್ಯಬ್ರಹ್ಮನನ್ನೇ ಹೊಂದುತ್ತಾರೆ ಎಂಬುದು ಸರಿಯಲ್ಲ. ಬ್ರಹ್ಮ ಶಬ್ದಕ್ಕೆ ಪರಬ್ರಹ್ಮನೆಂಬ ಮುಖ್ಯಾರ್ಥವೇ ಕೂಡುವಾಗ ''ಸ ಏನಾನ್ ಬ್ರಹ್ಮ ಗಮಯತಿ'' ಎಂಬ ಶ್ರುತಿಯು ಎಲ್ಲರಿಗೂ ಪರಬ್ರಹ್ಮ ಪ್ರಾಪ್ತಿಯನ್ನೇ ಹೇಳುತ್ತದೆ ಎಂದು ಎರಡನೆಯ ಪೂರ್ವಪಕ್ಷ. ಹೀಗೆ ಉಭಯ ಪಕ್ಷಗಳನ್ನೂ ಮನಸ್ಸಿನಲ್ಲಿಟ್ಟುಕೊಂಡು ಅದಕ್ಕೆ ಉತ್ತರವಾಗಿ ಈ ಸೂತ್ರ ಹೊರಟಿದೆ ಎಂಬುದಾಗಿ ಶ್ರೀಮದಾಚಾರ್ಯರು ಹೇಳುತ್ತಾರೆ.

ವಾಯುವು ಎಲ್ಲರನ್ನೂ ಕಾರ್ಯ ಬ್ರಹ್ಮನ ಬಳಿಗೆ ಕರೆದೊಯ್ಯುತ್ತಾನೆ ಎಂಬುದಾಗಲೀ ಅಥವಾ ಎಲ್ಲರನ್ನೂ ಪರಬ್ರಹ್ಮನ ಬಳಿಗೆ ಒಯ್ಯುತ್ತಾನೆ ಎಂಬುದಾಗಲೀ ಇಲ್ಲಿ ಬಾದರೀ ಆಚಾರ್ಯರು ತಿಳಿಸುತ್ತಿಲ್ಲ. ವಾಯುವು ಪ್ರತೀಕಾಲಂಬನರಾದ

ಮನುಷ್ಯೋತ್ತಮಾದಿಗಳನ್ನು ಕಾರ್ಯಬ್ರಹ್ಮನ ಬಳಿಗೂ, ಅಪ್ರತೀಕಾಲಂಬನರನ್ನು ಪರಬ್ರಹ್ಮನ ಬಳಿಗೂ ಒಯ್ಯುತ್ತಾನೆ ಎಂಬುದಾಗಿ ಬಾದರೀ ಆಚಾರ್ಯರ ಅಭಿಪ್ರಾಯ. ಪೂರ್ವೋಕ್ತವಾದ ಉಭಯ ವಿಧ ಪೂರ್ವ ಪಕ್ಷಗಳಲ್ಲಿಯೂ ದೋಷವಿರುವುದರಿಂದ ಗತಿಯು ಕೂಡುವುದಿಲ್ಲ. ಆದರೆ ಶ್ರೀ ಮದಾಚಾರ್ಯರ ಅಭಿಪ್ರಾಯದಂತೆ ಈ ಸೂತ್ರಕ್ಕೆ ಅರ್ಥ ಮಾಡುವುದರಿಂದ ಗತಿ ಅನುಪಪತ್ತಿ ಎಂಬ ದೋಷ ಬರುವುದಿಲ್ಲ. ಆದ್ದರಿಂದ ಹೀಗೆ ಅರ್ಥ ಮಾಡುವುದೇ ಅತ್ಯಂತ ಯುಕ್ತವು ಎಂದು ತಾತ್ಪರ್ಯ. ''ಸ ಪ್ರತೀಕಾಃ ಚತುರ್ಮುಖ ಪ್ರತೀಕಾಃ ಪರಮುಹ್ಯೈತೇ ಗಚ್ಛಂತಿ'' ಇತ್ಯಾದಿ ಪ್ರಮಾಣ ಬಲದಿಂದ ಉಭಯ ಪ್ರಾಪ್ತಿ ಪಕ್ಷವನ್ನೂ ಸಮರ್ಪಕವಾಗಿ ಕೂಡಿಸಬಹುದು.

**ಅಣುಭಾಷ್ಯ :** ''ತೇನ ಜನಾರ್ದನಮ್ । ಯಾಂತಿ ಉತ್ತಮಾ ನರೋಚ್ಚಾದ್ಯಾ ಬ್ರಹ್ಮಲೋಕಾತ್ ಸಹಾಮುನಾ ॥''

ನರೋಚ್ಚಾದ್ಯಾಃ ಅಂದರೆ ಮನುಷ್ಯೋತ್ತಮಾದಿಗಳು ಹಾಗೂ ಪ್ರತೀಕಾಲಂಬನರು, ವಾಯುವಿನಿಂದ ಮೊದಲಿಗೆ ಬ್ರಹ್ಮಲೋಕ ಅಂದರೆ ಸತ್ಯಲೋಕವನ್ನು (ಅಥವಾ ಕಾರ್ಯಬ್ರಹ್ಮನನ್ನು) ಹೊಂದುತ್ತಾರೆ. ಅನಂತರ ''ಅಮುನಾ ಸಹ'' ಈ ಚತುರ್ಮುಖ ಬ್ರಹ್ಮನೊಂದಿಗೆ ಕೂಡಿಕೊಂಡು ಜನಾರ್ದನನನ್ನು ಹೊಂದುತ್ತಾರೆ. ಅಂದರೆ ಮುಕ್ತ ವೈಕುಂಠ ಸ್ಥಾನದಲ್ಲಿರತಕ್ಕ ಶ್ರೀ ಹರಿಯನ್ನು ಸೇರುತ್ತಾರೆ ಎಂದರ್ಥ. ಅಥವಾ ಉತ್ತಮಾಃ ''ಮುಖ್ಯಾಃ'' ಅಪ್ರತೀಕಾಲಂಬನರು, ''ತೇನ'' ವಾಯುವಿನಿಂದ, ಸಾಕ್ಷಾತ್ತಾಗಿಯೇ ಜನಾರ್ದನನನ್ನು ಅಂದರೆ ಅಮುಕ್ತ ವೈಕುಂಠ ಸ್ಥಾನದಲ್ಲಿರುವ ಶ್ರೀ ಹರಿಯನ್ನು ಪ್ರಥಮತಃ ಹೊಂದುತ್ತಾರೆ. ಅನಂತರ ಈ ಬ್ರಹ್ಮನೊಂದಿಗೇ ಲಿಂಗಭಂಗವನ್ನು ಹೊಂದಿ ಮುಕ್ತ ವೈಕುಂಠ ಸ್ಥಾನದಲ್ಲಿರುವ ಶ್ರೀಹರಿಯನ್ನು ತಲುಪುತ್ತಾರೆ. ಈ ಪ್ರಕಾರವಾಗಿ ಎರಡು ರೀತಿಯಲ್ಲಿಯೂ ಇಲ್ಲಿ ಅರ್ಥವನ್ನು ಸಂಗ್ರಹಿಸಲಾಗಿದೆ.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದವು ಮುಕ್ತಾಯವಾಯಿತು ॥**

# ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದ

**ಅಣುಭಾಷ್ಯ :**

ಯಥಾಸಂಕಲ್ಪಭೋಗಾಶ್ಚ ಚಿದಾನಂದ ಶರೀರಿಣಃ ।
ಜಗತ್ ಸೃಷ್ಟ್ಯಾದಿವಿಷಯೇ ಮಹಾಸಾಮರ್ಥ್ಯಮಪಿ ಋತೇ ॥೬॥
ಯಥೇಷ್ಟಶಕ್ತಿಮಂತಶ್ಚ ವಿನಾ ಸ್ವಾಭಾವಿಕೋತ್ತಮಾನ್ ।
ಅನನ್ಯವಶಗಾಶ್ಚೈವ ವೃದ್ಧಿಹ್ರಾಸವಿವರ್ಜಿತಾಃ ॥
ದುಃಖಾದಿರಹಿತಾ ನಿತ್ಯಂ ಮೋದಂತೇಽವಿರತಂ ಸುಖಮ್ ॥೭॥

ಹಿಂದಿನ ಪಾದದಲ್ಲಿ ಹೇಳಿರುವ ಪ್ರಕಾರ ಚತುರ್ಮುಖನೊಂದಿಗೇ ಪರಬ್ರಹ್ಮನನ್ನು ಹೊಂದಿದ ಮುಕ್ತಿಯೋಗ್ಯರ ಭೋಗಾತ್ಮಕ ಮೋಕ್ಷಸ್ವರೂಪವನ್ನು ಈ ಪಾದದಲ್ಲಿ ನಿರೂಪಿಸುತ್ತಾರೆ.

### ಅಧಿಕರಣ - ೧

### ॥ ಸಂಪದ್ಯಧಿಕರಣ ॥

### ॥ ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ ॥

ಜ್ಞಾನಿಯು ಪರಬ್ರಹ್ಮನನ್ನು ಹೊಂದಿ, ಅವನನ್ನು ಅತಿಕ್ರಮಿಸದೆಯೇ ತನ್ನ ಸ್ವರೂಪಗತವಾದ ತನಗೆ ಕ್ಲೃಪ್ತವಾದ ಭೋಗಗಳನ್ನು ಭೋಗಿಸುತ್ತಾನೆ. ಇದಕ್ಕೆ ಶ್ರುತಿ ಪ್ರಮಾಣವಿದೆ. ''ಏವಂ ಪಶ್ಯನ್ ಆತ್ಮಾನಮಭಿಸಂಪದ್ಯ ಏತೇನ ಆತ್ಮನಾ ಯಥಾ ಕಾಮಂ ಸರ್ವಾನ್ ಕಾಮಾನ್ ಅನುಭವತಿ'' ಎಂಬುದಾಗಿ ಸೌಪರ್ಣ ಶ್ರುತಿಯಲ್ಲಿ ಹೇಳಿದೆ. ''ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿ ನಿಷ್ಪದ್ಯತೇ'' ಎಂದು ಛಾಂದೋಗ್ಯ ಉಪನಿಷತ್ತು ಹೇಳುತ್ತದೆ. ಹಾಗಾದರೆ ''ಏತಂ ಸೇತುಂ ತೀರ್ತ್ವಾ'' ಎಂಬ ಶ್ರುತಿಯಲ್ಲಿ ಬ್ರಹ್ಮನನ್ನು ಅತಿಕ್ರಮಿಸಿದ ಅನಂತರ ಸ್ವರೂಪಾವಿರ್ಭಾವವನ್ನು ಹೇಳಿದೆ. ಇದಕ್ಕೆ ವಿರೋಧ ಬರುವುದಿಲ್ಲವೇ ಎಂದು ಕೇಳಿದರೆ, ಮೇಲೆ ಉದಾಹರಿಸಿದ ಶ್ರುತಿಗಳಿಗೆ ಯಾವ ವಿರೋಧವೂ ಬರುವುದಿಲ್ಲ ಎಂದು ಹೇಳುತ್ತಾರೆ. ಇದಕ್ಕೆ ಪ್ರಮಾಣವನ್ನೂ ನೀಡುತ್ತಾರೆ. ''ಇಮಾಂ

ಘೋರಮಶಿವಾಂ ನದೀಂ ತೀರ್ತ್ವಾ ಏತಂ ಸೇತುಂ ಆಪ್ಯ ಏತೇನೈವ ಸೇತುನಾ ಮೋದತೇ ಪ್ರಮೋದತೇ'' ಎಂಬ ಮೌದ್ಗಲ್ಯ ಶ್ರುತಿಯ ವಾಕ್ಯದಲ್ಲಿ ಹೇಳಿರುವ ಪ್ರಕಾರ, ಈ ಭಯಂಕರವಾದ ಅಮಂಗಲಕರವಾದ ನದಿಯನ್ನು ದಾಟಿ ಪರಮಾತ್ಮನನ್ನು ಹೊಂದಿದಮೇಲೆ ಅವನ ಅನುಗ್ರಹದಿಂದಲೇ (ಹಾಗೂ ಅಧೀನನಾಗಿಯೇ) ಸ್ವರೂಪಾನಂದವನ್ನು ಅನುಭವಿಸುತ್ತಾನೆ. ಆದ್ದರಿಂದ ಪರಮಾತ್ಮನನ್ನು ಮುಕ್ತನು ಎಂದಿಗೂ ಅತಿಕ್ರಮಿಸದೇ, ತನ್ನ ಸ್ವರೂಪ ಭೋಗಗಳನ್ನಷ್ಟೇ ಅನುಭವಿಸುತ್ತಾನೆ ಎಂಬುದೇ ಸಿದ್ಧಾಂತ.

**ಅಣುಭಾಷ್ಯ** : ''ಅಮುನಾ ಸಹ''

''ಮುಕ್ತಾಃ ಭೋಗಾನ್ ಭುಂಜತೇ'' ಎಂದು ಸೇರಿಸಿಕೊಳ್ಳಬೇಕು. 'ಅಮುನಾ ಸಹ' ಎಂಬುದು ಈ ಪಾದಕ್ಕೂ ಸಂಬಂಧಿಸಿದೆ. ಹಿಂದಿನ ಪಾದದಲ್ಲಿ ಅರ್ಥಮಾಡುವಾಗ 'ಅಮುನಾ' ಎಂಬುದು ಚತುರ್ಮುಖ ಬ್ರಹ್ಮನಿಗೆ ಸಂಬಂಧಿಸಿದ್ದರೆ, ಇಲ್ಲಿ ಪರಬ್ರಹ್ಮನ ಪರವಾಗಿ ಅರ್ಥಮಾಡತಕ್ಕದ್ದು. ''ಅಮುನಾ ಸಹ'' ಅಂದರೆ ಪರಮಾತ್ಮನ ಜೊತೆಗೇನೆ ಅಂದರೆ ಅವನನ್ನು ಅತಿಕ್ರಮಿಸದೆಯೇ ಮುಕ್ತರು ಭೋಗಗಳನ್ನು ಭುಂಜಿಸುತ್ತಾರೆ ಎಂದರ್ಥ.

## ಅಧಿಕರಣ - ೨

## ॥ ಮುಕ್ತಾಧಿಕರಣ ॥

## ॥ ಓಂ ಮುಕ್ತಃ ಪ್ರತಿಜ್ಞಾನಾತ್ ಓಂ ॥

''ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾಯಾನೈರ್ವಾ ಜ್ಞಾತಿಭಿರ್ವಾಜ್ಞಾತಿಭಿರ್ವಾ'' ಎಂಬುದಾಗಿ ಬೃಹತ್ ಶ್ರುತಿಯಲ್ಲಿ ಮುಕ್ತರ ಭೋಗವನ್ನು ನಾನಾ ವಿಧವಾಗಿ ವರ್ಣಿಸಲಾಗಿದೆ. ಕೃತಕತ್ಯನಾದ ಮುಕ್ತನಿಗೆ ಈ ರೀತಿಯ ನಾನಾವಿಧದ ಕ್ರೀಡೆಗಳ ಅಪೇಕ್ಷೆಯಿರುವುದಿಲ್ಲ. ಆದ್ದರಿಂದ ಈ ಶ್ರುತಿಯು ಮುಕ್ತನಿಗೆ ಸಂಬಂಧಿಸಿಲ್ಲ ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ''ಅಹರಹರೇನ'' ಇತ್ಯಾದಿ ಶ್ರುತಿಯು ಅಮುಕ್ತರಿಗೆ ದಿವ್ಯಭೋಗಗಳನ್ನು ಸಮರ್ಥಿಸುತ್ತದೆ.

"ಅಹರಹರೇನಮನುಪ್ರವಿಶತಿ ಉಪಸಂಕ್ರಮೇ ಚ। ನ ತತ್ರ ಮೋದತೇ ನ ಪ್ರಮೋದತೇ ನ ಕಾಮಾನನುಭವತಿ, ಬದ್ಧೋ ಹ್ಯೇಷ ತದಾ ಭವತಿ। ಅಥ ಯದಾ ಏನಂ ಮುಕ್ತೋಽನುಪ್ರವಿಶತಿ ಮೋದತೇ ಚ, ಪ್ರಮೋದತೇ ಚ ಕಾಮಾಂಶ್ಚೈವಾನುಭವತಿ" ಎಂಬುದಾಗಿ ಬೃಹತ್ ಶ್ರುತಿಯು, ಬ್ರಹ್ಮನನ್ನು ಹೊಂದಿಯೂ ಕೂಡ ಇನ್ನೂ ಮುಕ್ತಿಯನ್ನು ಹೊಂದದೇ ಸುಪ್ತಾವಸ್ಥೆಯಲ್ಲಿರುವವರಿಗೆ ದಿವ್ಯಭೋಗಗಳ ಅಭಾವವನ್ನು ಹೇಳಿ, ಮುಕ್ತನಿಗೆ ಮಾತ್ರ ಬ್ರಹ್ಮ ಪ್ರಾಪ್ತಿಯಿಂದ ದಿವ್ಯಭೋಗಗಳನ್ನು ತಿಳಿಸುತ್ತದೆ. ಕೃತಕತ್ಯನಾದ ಮಾತ್ರಕ್ಕೆ ಕ್ರೀಡೆಯು ಕೂಡುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಕೃತಕತ್ಯನಾಗಿದ್ದರೂ ಆನಂದೋದ್ರೇಕದಿಂದ ಮುಕ್ತನು ಪರಮಾತ್ಮನಂತೆ ಸ್ವೇಚ್ಛೆಯಿಂದ ಕ್ರೀಡಿಸುವುದು ಯುಕ್ತವೇ ಆಗುವುದು ಎಂದು ಸಿದ್ಧಾಂತ.

**ಅಣುಭಾಷ್ಯ :** "ಅಮುನಾ ಸಹ"

"ಅಮುನಾ ಸಹ ಮುಕ್ತಾಃ ಏವ ಭೋಗಾನ್ ಭುಂಜತೇ, ನಾಮುಕ್ತಾಃ" ಎಂದರ್ಥ. "ಸ ತತ್ರ ಪರ್ಯೇತಿ" ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟವನು ಮುಕ್ತನೇ ಹೊರತು, ಅಮುಕ್ತನಲ್ಲ. ಮುಕ್ತನಿಗೆ ಮಾತ್ರ ದಿವ್ಯಭೋಗಗಳು ಹೇಳಲ್ಪಟ್ಟಿವೆ, ಹೊರತು ಅಮುಕ್ತರಿಗಲ್ಲ ಎಂದು ಸಿದ್ಧಾಂತ.

## ಅಧಿಕರಣ - ೩

## ॥ ಆತ್ಮಾಧಿಕರಣ ॥

## ॥ ಓಂ ಆತ್ಮಾ ಪ್ರಕರಣಾತ್ ಓಂ ॥

"ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಎಂಬ ಶ್ರುತಿಯಲ್ಲಿ ಪರಂಜ್ಯೋತಿ ಶಬ್ದವಾಚ್ಯನು ಪರಮಾತ್ಮನೇ ಹೊರತು ಆದಿತ್ಯನಲ್ಲ. ಏಕೆಂದರೆ "ಯ ಆತ್ಮಾ" ಎಂಬ ಪರಮಾತ್ಮ ಪ್ರಕರಣದಿಂದ ಎಂದರ್ಥ.

"ಪರಂಜ್ಯೋತಿಃ ಪರಂಬ್ರಹ್ಮ ಪರಮಾತ್ಮಾದಿಕಾ ಗಿರಃ।
ಸರ್ವತ್ರ ಹರಿಮೇವೈಕಂ ಬ್ರೂಯುರ್ನಾನ್ಯಂ ಕಥಂಚನ ॥"

ಪರಂಜ್ಯೋತಿ, ಪರಂಬ್ರಹ್ಮ, ಪರಮಾತ್ಮಾದಿ ಶಬ್ದಗಳು ಎಲ್ಲ ಕಡೆಯಲ್ಲಿಯೂ ಶ್ರೀ ಹರಿಯೊಬ್ಬನನ್ನೇ ಪ್ರತಿಪಾದಿಸುತ್ತವೆ. ಬೇರೆ ಯಾರನ್ನೂ ಎಲ್ಲಿಯೂ ಈ ಶಬ್ದಗಳಿಂದ ಪ್ರತಿಪಾದಿಸುವುದಿಲ್ಲ. ಹೀಗೆ ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ. ಆದ್ದರಿಂದ ಮುಕ್ತರು ಪರಮಾತ್ಮನನ್ನೇ ಹೊಂದಿ, ಅವನನ್ನು ಅತಿಕ್ರಮಿಸದೇ ಭೋಗಗಳನ್ನು ಅನುಭವಿಸುತ್ತಾರೆ ಎಂಬುದೇ ಸಿದ್ಧಾಂತ.

**ಅಣುಭಾಷ್ಯ** : ''ಸಹ ಅಮುನಾ''

ಪರಂಜ್ಯೋತಿ ಶಬ್ದವಾಚ್ಯನಾದ ಪರಬ್ರಹ್ಮನನ್ನು ಹೊಂದಿಯೇ ಅವನ ಜೊತೆಯಲ್ಲಿಯೇ ಮುಕ್ತರು ಭೋಗಗಳನ್ನು ಅನುಭವಿಸುತ್ತಾರೆ ಎಂದು ತಾತ್ಪರ್ಯ.

## ಅಧಿಕರಣ - ೪

## ॥ ಅವಿಭಾಗಾಧಿಕರಣ ॥

## ॥ ಓಂ ಅವಿಭಾಗೇನ ದೃಷ್ಟತ್ವಾತ್ ಓಂ ॥

ಯಾವ ಭೋಗಗಳು ಪರಮಾತ್ಮನಿಂದ ಭೋಗಿಸಲ್ಪಡುತ್ತವೆಯೋ ಅದೇ ಭೋಗಗಳನ್ನೇ ಸಾಯುಜ್ಯರೂ ಭುಂಜಿಸುತ್ತಾರೆ. ''ನ ವಿಭಾಗೇನ'' ಪ್ರತ್ಯೇಕವಾದುವುಗಳನ್ನಲ್ಲ. ಏಕೆಂದರೆ ಶ್ರುತಿಗಳಲ್ಲಿ ಹಾಗೆಯೇ ಹೇಳಲ್ಪಟ್ಟಿದೆ.

''ಯಾನೇವಾಹಂ ಶ್ರುಣೋಮಿ ಯಾನ್ ಪಶ್ಯಾಮಿ ಯಾನ್ ಜಿಘ್ರಾಮಿ ತಾನೇವ ಏತೇ ಇದಂ ಶರೀರಂ ವಿವಿಚ್ಯಾನುಭವಂತಿ'' ಎಂದು ಚತುರ್ವೇದ ಶಿಖೆಯಲ್ಲಿ ಹೇಳಿದೆ.

''ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ಭೋಗಾನ್ ಲೇಶತಃ ಕ್ವಚಿತ್ ।
ಬಹಿಷ್ಠಾನ್ ಭುಂಜತೇ ನಿತ್ಯಂ ನಾನಂದಾದೀನ್ ಕಥಂಚನ ॥''

ಎಂದು ಭವಿಷ್ಯತ್ ಪರ್ವದಲ್ಲಿ ಹೇಳಿದೆ.

ಮುಕ್ತರು ಪರಮಾತ್ಮನಿಂದ ಅಭುಕ್ತವಾದುದನ್ನು ಭೋಗಿಸುವುದಿಲ್ಲ. ಆದರೆ ಪರಮಾತ್ಮನಂತೆ ಪೂರ್ಣಾನಂದ, ಪೂರ್ಣಭುಕ್‌ಗಳಲ್ಲ. ಪರಮಾತ್ಮನಲ್ಲಿ ಮಾತ್ರ

ಪೂರ್ಣಾನಂದತ್ವ, ಪೂರ್ಣಭೋಗತ್ವಾದಿಗಳು ಶ್ರುತವಾಗಿವೆ. ಮುಕ್ತರು ಅವರವರ ಸ್ವರೂಪಯೋಗ್ಯತಾನುಸಾರ ಪೂರ್ಣವಾದ ಆನಂದವನ್ನು ಅನುಭವಿಸುತ್ತಾರೆ. ಪರಮಾತ್ಮನಿಗೆ ಹೋಲಿಸಿದರೆ ಮುಕ್ತರು ಅನುಭವಿಸುವ ಆನಂದಾದಿಗಳು ಲೇಶತಃ ಮಾತ್ರ ಎಂದು ತಿಳಿಯತಕ್ಕದ್ದು.

**ಅಣುಭಾಷ್ಯ :** "ಸಹಾಮುನಾ"

ಮುಕ್ತರು "ಅಮುನಾ" ಪರಬ್ರಹ್ಮನೊಂದಿಗೆ "ಸಹೈವ" "ಅವಿಭಾಗೇನೈವ" ವಿಭಾಗವಿಲ್ಲದೆಯೇ ಅದೇ ಭೋಗಗಳನ್ನೇ ಭುಂಜಿಸುತ್ತಾರೆ ಎಂದು ತಾತ್ಪರ್ಯ.

## ಅಧಿಕರಣ - ೫

## ॥ ಬ್ರಾಹ್ಮಾಧಿಕರಣ ॥

## ॥ ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ॥

ಮುಕ್ತರಿಗೆ ಶರೀರವಿಲ್ಲದಿರುವುದರಿಂದ ಭೋಗವು ಕೂಡುವುದಿಲ್ಲ ಎಂದರೆ ಹಾಗೆ ಹೇಳುವುದು ಸರಿಯಲ್ಲ. ಮುಕ್ತರಿಗೆ ಭೋಗವು ಇದ್ದೇ ಇರುವುದು. ಏಕೆಂದರೆ ಅವರಿಗೆ ಶರೀರದ ಅಭಾವವಿಲ್ಲ. ಸ್ವರೂಪದೇಹವನ್ನು ಅಂಗೀಕರಿಸಲಾಗಿದೆ. ಒಂದು ಪಕ್ಷ ಅವರಿಗೆ ಶರೀರದ ಅಭಾವವನ್ನು ಒಪ್ಪಿದರೂ, ಭೋಗವಿಲ್ಲ ಎಂದು ಹೇಳುವ ಹಾಗಿಲ್ಲ. ಏಕೆಂದರೆ ಪರಮಾತ್ಮನೊಂದಿಗೆ ಸಾಯುಜ್ಯ ಹೊಂದುವ ಮುಕ್ತರು ಪರಮಾತ್ಮನ ದೇಹದಿಂದಲೇ ಭೋಗವನ್ನು ಭುಂಜಿಸುತ್ತಾರೆ. ಹೇಗೆ ಪಿಶಾಚಿಗೆ ಶರೀರವಿಲ್ಲದಿದ್ದರೂ ಮತ್ತೊಬ್ಬರ ಶರೀರವನ್ನು ಪ್ರವೇಶಿಸಿ ಭೋಗವನ್ನು ಅನುಭವಿಸುತ್ತದೆಯೋ ಹಾಗೆಯೇ ಎಂದು ದೃಷ್ಟಾಂತ (ಗ್ರಹವತ್ ಭೋಗಸಂಭವಾತ್). ಆದ್ದರಿಂದ ಪರಬ್ರಹ್ಮನ ದೇಹದಿಂದಲೇ ಮುಕ್ತರು ಭೋಗಗಳನ್ನು ಅನುಭವಿಸುತ್ತಾರೆ ಎಂಬುದಾಗಿ ಜೈಮಿನಿ ಆಚಾರ್ಯರು ಹೇಳಿದ್ದಾರೆ. ಇದಕ್ಕೆ ಶ್ರುತಿ, ಸ್ಮೃತಿಗಳನ್ನು ಪ್ರಮಾಣವಾಗಿ ಕೊಡುತ್ತಾರೆ.

"ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿ

ಸಂಪದ್ಯ ಬ್ರಹ್ಮಣಾ ಪಶ್ಯತಿ, ಬ್ರಹ್ಮಣಾ ಶ್ರುಣೋತಿ, ಬ್ರಹ್ಮೈವೇದಂ ಸರ್ವಂ ಅನುಭವತಿ'' ಎಂದು ಮಾಧ್ಯಂದಿನ ಶ್ರುತಿಯಲ್ಲಿ ಹೇಳಿದೆ.

''ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿ ಪಾದಾಭ್ಯಾಂ ಮುಕ್ತಸ್ಯೈಷಾಸ್ಥಿತಿರ್ಭವೇತ್ ॥''

ಎಂದು ಸ್ಮೃತಿಯಲ್ಲಿ ಇದೇ ವಿಷಯವನ್ನೇ ಸಮರ್ಥಿಸಲಾಗಿದೆ.

ಮುಕ್ತರಿಗೆ ದೇಹಾಭಾವವಿಲ್ಲ. ಅವರು ಚಿನ್ಮಾತ್ರ ದೇಹವನ್ನು ಹೊಂದಿರುತ್ತಾರೆ ಎಂಬುದಾಗಿ ಉದ್ದಾಲಕ ಶ್ರುತಿಯು ಹೇಳುತ್ತದೆ. ''ಸರ್ವಂ ವಾ ಏತದಚಿತ್ ಪರಿತ್ಯಜ್ಯ ಚಿನ್ಮಾತ್ರ ಏವೈಷ ಭವತಿ । ಚಿನ್ಮಾತ್ರ ಏವಾವತಿಷ್ಠತೇ । ತಾಮೇತಾಂ ಮುಕ್ತಿರಿತ್ಯಾಚಕ್ಷತೇ ॥'' ಆದ್ದರಿಂದ ಮುಕ್ತರಿಗೆ ಭೋಗವು ಇದ್ದೇ ಇರುವುದು ಎಂದು ತಾತ್ಪರ್ಯ.

**ಅಣುಭಾಷ್ಯ** : ''ಚಿದಾನಂದಶರೀರಿಣಃ''

''ಚಿದಾನಂದಸ್ಯ ಜ್ಞಾನಾನಂದಾದಿರೂಪಸ್ಯ ವಿಷ್ಣೋಃ ಶರೀರಂ ಏಷಾಮಸ್ತೀತಿ ಚಿದಾನಂದಶರೀರಿಣಃ''. ಅಥವಾ ''ಚಿದಾನಂದಾವೇವ ಶರೀರಂ ಏಷಾಮಸ್ತೀತಿ ಚಿದಾನಂದಶರೀರಣಃ''. ಅಂದರೆ ಜ್ಞಾನಾನಂದಾದಿ ರೂಪವಾದ ಶ್ರೀಹರಿಯ ದೇಹವನ್ನು ಪ್ರವೇಶಿಸಿದ ಮುಕ್ತರು ಆ ದೇಹದಿಂದಲೇ ಭೋಗಗಳನ್ನು ಭುಂಜಿಸುತ್ತಾರೆ. ಅಥವಾ ಮುಕ್ತರಿಗೆ ಚಿದಾನಂದಾತ್ಮಕವಾದ ಸ್ವರೂಪ ದೇಹವಿರುವುದರಿಂದ ಅವರಿಗೆ ಭೋಗವು ಯುಕ್ತವೇ ಆಗುವುದು ಎಂದು ಸಿದ್ಧಾಂತ.

## ಅಧಿಕರಣ - ೭
## ॥ಸಂಕಲ್ಪಾಧಿಕರಣ ॥
### ॥ ಓಂ ಸಂಕಲ್ಪಾದೇವ ಚ ತತ್ ಶ್ರುತೇಃ ಓಂ ॥

ಮುಕ್ತರಿಗೆ ಸಂಕಲ್ಪ ಮಾತ್ರದಿಂದಲೇ ಭೋಗ ಸಿದ್ಧಿಯು. ಏಕೆಂದರೆ ''ತತ್ ಶ್ರುತೇಃ'' ಹಾಗೆ ಶ್ರುತಿಯು ಹೇಳುತ್ತದೆ. ''ಸ ಯದಿ ಪಿತೃಲೋಕಕಾಮೋ ಭವತಿ

ಸಂಕಲ್ಪಾದೇವ ಅಸ್ಯ ಪಿತರಃ ಸಮುತ್ತಿಷ್ಠಂತೇ ।'' ಹೀಗೆ ಶ್ರುತಿ ಪ್ರಮಾಣವಿರುವ ಪ್ರಯುಕ್ತ ಯುಕ್ತಿವಿರೋಧವು ಅಸಂಭವವು.

**ಅಣುಭಾಷ್ಯ** : ''ಯಥಾ ಸಂಕಲ್ಪಭೋಗಾಶ್ಚ''

''ಯಥಾ ಸಂಕಲ್ಪಂ'' ಹರಿಯ ಇಚ್ಛೆಗೆ ಅನುಸಾರವಾಗಿ ತಮ್ಮ ಸ್ವರೂಪ ಯೋಗ್ಯತೆಗೆ ಮೀರದಂತೆ ಏನನ್ನು ಮುಕ್ತರು ಬಯಸುತ್ತಾರೋ ಅಥವಾ ಹಾಗೆ ಸಂಕಲ್ಪ ಮಾಡುತ್ತಾರೋ ಹಾಗೆಯೇ ಅಂದರೆ ಅದೇ ಭೋಗವನ್ನೇ ಅವರು ಭುಂಜಿಸುತ್ತಾರೆ. ಅಂದರೆ ಸ್ವೇಚ್ಛಾ ಮಾತ್ರ ಸಾಧ್ಯ ಭೋಗವಂತರು ಎಂದರ್ಥ.

## ಅಧಿಕರಣ - ೭

## ॥ ಅನನ್ಯಾಧಿಪತ್ಯಧಿಕರಣ ॥

## ॥ ಓಂ ಅತ ಏವ ಚಾನನ್ಯಾಧಿಪತಿಃ ಓಂ ॥

ಮುಕ್ತರು ಅನನ್ಯಾಧಿಪತಿಗಳು, ಅಂದರೆ ಅವರಿಗೆ ನಿಯತವಾದ ಅಧಿ ಪತಿಗಳನ್ನು ಹೊರತು ಪಡಿಸಿ ಬೇರೆ ಅಧಿಪತಿಗಳಿರುವುದಿಲ್ಲ. ಮುಕ್ತರು ತಮಗಿಂತ ಕೆಳಗಿನವರಿಂದ ನಿಯಮ್ಯರಲ್ಲ. ಮತ್ತೆ ಸ್ವೋತ್ತಮರಿಂದ ನಿಯಮ್ಯರು ಎಂದರ್ಥ. ಏಕೆಂದರೆ ''ಅತ ಏವ'' ಅಂದರೆ ''ಸತ್ಯಸಂಕಲ್ಪಾದೇವ'' ಎಂದು ಸಿದ್ಧಾಂತ.

ಈ ವಿಷಯದಲ್ಲಿ ಕೆಳಗೆ ಉದಾಹರಿಸಲಾದ ವರಾಹಪುರಾಣದ ವಾಕ್ಯವೂ ಪ್ರಮಾಣವಾಗಿದೆ.

''ಪರಮೋಽಧಿಪತಿಸ್ತೇಷಾಂ ವಿಷ್ಣುರೇವ ನ ಸಂಶಯಃ ।
ತತಃ ಪ್ರಾಣಾದಿನಾಮಾಂತಾಃ ಸರ್ವೇಽಪಿ ಪತಯಃ ಕ್ರಮಾತ್ ॥
ಏತೇಭ್ಯೋಽನ್ಯಃ ಪತಿರ್ನೈವ ಮುಕ್ತಾನಾಂ ನಾತ್ರ ಸಂಶಯಃ ॥''

**ಅಣುಭಾಷ್ಯ** : ''ವಿನಾ ಸ್ವಾಭಾವಿಕೋತ್ತಮಾನ್, ಅನನ್ಯವಶಗಾಶ್ಚೈವ''

ಮುಕ್ತರಿಗೆ ನಿಯತರಾದ ಅಧಿಪತಿಗಳಿಗಿಂತ ಅನ್ಯಪತಿಗಳನ್ನು ನಿವಾರಣೆ

ಮಾಡುವುದಕ್ಕಾಗಿಯೇ ಸೂತ್ರಕ್ಕೆ ಅನುಸಾರವಾಗಿಯೇ 'ಅನನ್ಯವಶಗಾಃ' ಎಂದು ಹೇಳಿದ್ದಾರೆ. ಯಾರೂ ಅಧಿಪತಿಗಳೇ ಇರುವುದಿಲ್ಲ ಎಂಬ ಅಭಿಪ್ರಾಯವಿದ್ದಿದ್ದರೆ ಸೂತ್ರಕಾರರು "ನಚಾಧಿಪತಿಃ" ಎಂದಷ್ಟೇ ಹೇಳಬೇಕಿತ್ತು, ಹಾಗಿದ್ದಿದ್ದರೆ ಭಾಷ್ಯಕಾರರು "ಅನನ್ಯವಶಗಾಃ" ಎನ್ನುವ ಬದಲು "ಅವಶಗಾಃ" ಎಂದು ಹೇಳುತ್ತಿದ್ದರು. "ಅನನ್ಯವಶಗಾಃ" ಎಂಬುದಕ್ಕೆ ಸಮರ್ಥನೀಯವಾಗಿ ಇಲ್ಲಿ "ವಿನಾ ಸ್ವಾಭಾವಿಕೋತ್ತಮಾನ್" ಎಂದು ಹೇಳಿದ್ದಾರೆ. ಮುಕ್ತರಿಗೆ ತಮ್ಮ ಸ್ವರೂಪೋತ್ತಮರಾದ ಅಧಿಪತಿಗಳನ್ನು ಹೊರತುಪಡಿಸಿ ಬೇರೆ ಅಧಿಪತಿಗಳಿಲ್ಲ ಎಂಬುದೇ ಸಿದ್ಧಾಂತವು.

## ಅಧಿಕರಣ - ೮

## ॥ ಅಭಾವಾಧಿಕರಣ ॥

## ॥ ಓಂ ಅಭಾವಂ ಬಾದರಿರಾಹ ಹ್ಯೇವಮ್ ಓಂ ॥

ಇಲ್ಲಿ 'ಅಭಾವ' ಎಂದರೆ ಚಿನ್ಮಾತ್ರದೇಹಾತಿರಕ್ತವಾದ ದೇಹದ ಅಭಾವ ಎಂದರ್ಥ. ಮುಕ್ತರಿಗೆ ಲೌಕಿಕ ದೇಹದ ಅಭಾವವಿದ್ದರೂ, ಚಿದಾನಂದಾತ್ಮಕವಾದ ಅಲೌಕಿಕವಾದ ಸ್ವರೂಪದೇಹವಿದೆ. ಆದ್ದರಿಂದ ಅವರಿಗೆ ಭೋಗವು ಯುಕ್ತವೇ ಆಗಿದೆ. ಹೀಗೆಂದು ಬಾದರೀ ಆಚಾರ್ಯರು ತಿಳಿಸುತ್ತಾರೆ. "ಅಶರೀರೋ ವಾ ವ ತದಾ ಭವತಿ" ಇತ್ಯಾದಿ ಶ್ರುತಿಯು ಹೀಗೆಯೇ ಹೇಳುತ್ತದೆ. "ಚಿತಾ ವಾಽಚಿತಾ ವಾ ನಿತ್ಯೇನ ವಾಽನಿತ್ಯೇನ ವಾ ಅಥಾನಂದೀ ಹ್ಯೇವೈಷ ಭವತಿ" ಎಂದು ಔದ್ದಾಲಕ ಶ್ರುತಿಯನ್ನು ಇಲ್ಲಿ ಸ್ಮರಿಸಿಕೊಳ್ಳಲಾಗಿದೆ. ಮುಕ್ತರಿಗೆ ದುಃಖಾದಿ ಪ್ರಸಂಗವಿರುವುದಿಲ್ಲ ಎಂಬುದನ್ನು ತಿಳಿಸಲು "ದುಃಖಾದಿರಹಿತಾ ನಿತ್ಯಂ" ಇತ್ಯಾದಿಯಾಗಿ ಮುಂದೆ ಹೇಳಲಾಗಿದೆ.

**ಅಣುಭಾಷ್ಯ :** "ಚಿದಾನಂದ ಶರೀರಿಣಶ್ಚ"

ಇಲ್ಲಿ 'ಚ' ಶಬ್ದವು ಅನುಕ್ತವಾದ ಬಾಹ್ಯದೇಹದ ಸಂಬಂಧವನ್ನು ಸೂಚಿಸುತ್ತದೆ. ಏಕೆಂದರೆ "ಚಿತಾ ವಾಽಚಿತಾವಾ" ಎಂದು ಶ್ರುತಿಯಲ್ಲಿ

ಹೇಳಲಾಗಿದೆ. ಮುಕ್ತರಿಗೆ ಚಿದನಂದಾತ್ಮಕವಾದ ಶರೀರವಿದೆ. ಸ್ವೇಚ್ಛೆಯಿಂದ ತಾವು ಅಪೇಕ್ಷಿಸುವಂಥಹ ಬಾಹ್ಯ ಶರೀರವನ್ನು ಅವರು ಪಡೆಯಬಲ್ಲರು ಎಂದು ತಿಳಿಯತಕ್ಕದ್ದು. ಒಟ್ಟಿನಲ್ಲಿ ಮುಕ್ತರಿಗೆ ಭೋಗದ ಅಭಾವವಿಲ್ಲ ಹಾಗೂ ದುಃಖಾದಿ ದೋಷ ಪ್ರಸಕ್ತಿಯಿಲ್ಲ ಎಂದು ತಾತ್ಪರ್ಯ.

## ಅಧಿಕರಣ - ೯

## ॥ ಜಗದ್ವ್ಯಾಪಾರಾಧಿಕರಣ ॥

## ॥ ಓಂ ಜಗದ್ವ್ಯಾಪಾರವರ್ಜ್ಯಂ ಓಂ ॥

ಮುಕ್ತರು ಪರಮಾತ್ಮನಿಗೆ ಮಾತ್ರ ಮೀಸಲಾದ ಜಗತ್ಸೃಷ್ಟ್ಯಾದಿ ವ್ಯಾಪಾರವನ್ನು ಹೊರತುಪಡಿಸಿ ತಮಗೆ ಯೋಗ್ಯವಾದ ಎಲ್ಲ ಕಾಮಗಳನ್ನು ಹೊಂದುತ್ತಾರೆ ಎಂದು ತಾತ್ಪರ್ಯ. ''ಸರ್ವಾನ್ ಕಾಮಾನ್'' ಎಂಬ ಶ್ರುತಿಯಲ್ಲಿ 'ಸರ್ವ' ಶಬ್ದಕ್ಕೆ ಅರ್ಥ ಸಂಕೋಚ ಮಾಡಬೇಕು. ಇಲ್ಲದಿದ್ದರೆ ಪರಮಾತ್ಮನಿಗೆ ಮಾತ್ರ ಸಕಲ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳಿಗೆ ವಿರೋಧ ಬರುತ್ತದೆ. ವರಾಹ ಪುರಾಣದ ವಾಕ್ಯವೂ ಹೀಗೆ ಅರ್ಥ ಮಾಡುವುದನ್ನೇ ಸಮರ್ಥಿಸುತ್ತದೆ-

ಸ್ವಾಧಿಕಾನಂದ ಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ ।
ಮುಕ್ತಾನಾಂ ನೈವ ಕಾಮಃ ಸ್ಯಾತ್ ಅನ್ಯಾನ್ಕಾಮಾಂಸ್ತು ಭುಂಜತೇ ॥
ನ ಚಾಯೋಗ್ಯಂ ವಿಮುಕ್ತೋಽಪಿ ಪ್ರಾಪ್ನುಯಾತ್ ನ ಚ ಕಾಮಯೇತ್ ॥''

ಮುಕ್ತರಿಗೆ ಸೃಷ್ಟ್ಯಾದಿ ವ್ಯಾಪಾರದಲ್ಲಿ ಕಾಮವೇ ಹುಟ್ಟುವುದಿಲ್ಲ. ತಮಗೆ ಅಯೋಗ್ಯವಾದ (ಅಂದರೆ ಸ್ವರೂಪಯೋಗ್ಯತೆಯನ್ನು ಮೀರಿದ) ಕಾಮಗಳನ್ನು ಮುಕ್ತರು ಅಪೇಕ್ಷಿಸುವುದೂ ಇಲ್ಲ, ಅಥವಾ ಅವರು ಅಂಥಹ ಕಾಮನೆಗಳನ್ನು ಹೊಂದುವುದೂ ಇಲ್ಲ ಎಂದರ್ಥ.

**ಅಣುಭಾಷ್ಯ** : ''ಜಗತ್ಸೃಷ್ಟ್ಯಾದಿ ವಿಷಯೇ ಮಹಾಸಾಮರ್ಥ್ಯಮಪಿ ಋತೇ । ಯಥೇಷ್ಟಶಕ್ತಿಮಂತ ಶ್ಚ ॥''

''ಅಪಿ'' ಅಂದರೆ ಮುಕ್ತಾಃ ಅಪಿ (ಮುಕ್ತರಾಗಿದ್ದರೂ ಕೂಡ). 'ಚ' ಶಬ್ದವು ಅಯೋಗ್ಯ ಕಾಮನಾರಾಹಿತ್ಯವನ್ನು ಸೂಚಿಸುತ್ತದೆ. ಮುಕ್ತರಿಗೆ ಮಹಾಸಾಮರ್ಥ್ಯ ವಿದ್ದರೂ ಕೂಡ, ಯಥೇಷ್ಟವಾದುದನ್ನು ಹೊಂದುವ ಶಕ್ತಿಯಿದ್ದರೂ ಕೂಡ, ಮುಕ್ತರು ತಮ್ಮ ಯೋಗ್ಯತೆಗೆ ಮೀರಿದ ಕಾಮನೆಗಳನ್ನು ಹೊಂದುವುದಿಲ್ಲ. ಜಗತ್ ಸೃಷ್ಟ್ಯಾದಿಗಳು ಪರಮಾತ್ಮನಿಂದ ಮಾತ್ರ ಸಾಧ್ಯವು, ಮುಕ್ತರಿಗೆ ಸಾಧ್ಯವಿಲ್ಲ ಎಂದರ್ಥ.

## ಅಧಿಕರಣ - ೧೦

## ॥ ಸ್ಥಿತ್ಯಧಿಕರಣ ॥

## ॥ ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ ॥

''ಸ ಏಷ ಏತಸ್ಮಿನ್ ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ । ನ ಹೀಯತೇ । ನ ವರ್ಧತೇ । ನ ಹ್ರಸತೇ । ಸ್ಥಿತ ಏವ ಸರ್ವದಾ ಭವತಿ ॥'' ಇತ್ಯಾದಿ ಶ್ರುತಿಯು ಮುಕ್ತರಿಗೆ ಏಕ ಪ್ರಕಾರವಾದ ಅವಸ್ಥಿತಿಯನ್ನು ಹೇಳುತ್ತದೆ. ಅಂದರೆ ಆನಂದಾದಿಗಳಲ್ಲಿ ವೃದ್ಧಿಹ್ರಾಸಗಳಿರುವುದಿಲ್ಲ. ಮುಕ್ತರು ಏಕಪ್ರಕಾರವಾಗಿ ಆನಂದಾದಿಗಳನ್ನು ಹೊಂದಿರುತ್ತಾರೆ ಎಂದರ್ಥ. ಮಹಾಯೋಗಿಗಳ ಪ್ರತ್ಯಕ್ಷದಿಂದಲೂ, ಕಾರಣಶೂನ್ಯತ್ವ ರೂಪ ಅನುಮಾನದಿಂದಲೂ ಹೀಗೆಯೇ ತಿಳಿದುಬರುತ್ತದೆ. ಮುಕ್ತರ ಉಪಾಸನೆಯು ಫಲರೂಪವೇ ಹೊರತು ಸಾಧನ ರೂಪವಲ್ಲ ಎಂದು ಸಿದ್ಧಾಂತ.

''ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ ।
ನ ಚ ಸಾಧನಭೂತಾ ಸಾ ಸಿದ್ಧಿರೇವಾತ್ರ ಸಾ ಯತಃ ॥''

ಎಂಬ ಬ್ರಹ್ಮವೈವರ್ತ ವಾಕ್ಯವು ಇದಕ್ಕೆ ಪ್ರಮಾಣವಾಗಿದೆ.

**ಅಣುಭಾಷ್ಯ :** ''ವೃದ್ಧಿಹ್ರಾಸವಿವರ್ಜಿತಾಃ''

ಮುಕ್ತರ ಆನಂದಾದಿಗಳಿಗೆ ವೃದ್ಧಿಹ್ರಾಸವಿಲ್ಲ. ಮುಕ್ತಿಯಲ್ಲಿ ಏಕಪ್ರಕಾರದ ಅವಸ್ಥಿತಿಯು ಎಂದು ತಾತ್ಪರ್ಯ.

## ಅಧಿಕರಣ - ೧೧
## ॥ ಅನಾವೃತ್ತ್ಯಧಿಕರಣ ॥
## ॥ ಓಂ ಅನಾವೃತ್ತಿಶ್ಶಬ್ದಾತ್ ಅನಾವೃತ್ತಿಶ್ಶಬ್ದಾತ್ ಓಂ ॥

ಮುಕ್ತರಿಗೆ ಪುನರಾವೃತ್ತಿ ಎಂಬುದಿಲ್ಲ. ಸ್ವರ್ಗಫಲವನ್ನು ಹೊಂದಿದವರು ಪುಣ್ಯಫಲ ಭೋಗಾನಂತರ ಮತ್ತೆ ಭೂಮಿಯಲ್ಲಿ ಹುಟ್ಟಿ ಬರುತ್ತಾರೆ. ಆದರೆ ಮುಕ್ತರಾದವರು ಮತ್ತೆ ಸಂಸಾರಾವಸ್ಥೆಗೆ ಮರಳಿ ಬರುವುದಿಲ್ಲ. ಮುಕ್ತಸ್ಥಾನವು ಅವರಿಗೆ ನಿತ್ಯವು ಎಂದರ್ಥ.

"ನ ಚ ಪುನರಾವರ್ತತೇ, ನ ಚ ಪುನರಾವರ್ತತೇ" ಎಂಬುದಾಗಿ ಛಾಂದೋಗ್ಯ ಉಪನಿಷತ್ತಿನ ವಾಕ್ಯವು ಇದಕ್ಕೆ ಪ್ರಮಾಣವಾಗಿದೆ.

ಈ ಅಧಿಕರಣವು ಬ್ರಹ್ಮಮೀಮಾಂಸಾ ಶಾಸ್ತ್ರದ ಕೊನೆಯ ಅಧಿಕರಣವು. ಸಮಸ್ತ ಶಾಸ್ತ್ರಗಳ ತಾತ್ಪರ್ಯವು ಇದೇ ಆಗಿದೆ ಎಂಬುದನ್ನು ನಿಶ್ಚಯವಾಗಿ ಸೂಚಿಸುವುದಕ್ಕಾಗಿ ಈ ಸೂತ್ರದಲ್ಲಿ ದ್ವಿರುಕ್ತಿಯನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಮುಕ್ತರಿಗೆ ಪುನರಾವೃತ್ತಿಯಿಲ್ಲ ಎಂಬುದು ಸರ್ವಶಾಸ್ತ್ರಗಳ ನಿರ್ಣಯ ಎಂದು ಸಿದ್ಧಾಂತ.

**ಅಣುಭಾಷ್ಯ :** "ದುಃಖಾದಿರಹಿತಾ ನಿತ್ಯಂ ಮೋದಂತೇಽವಿರತಂ ಸುಖಮ್"

ಮುಕ್ತರು ನಿತ್ಯದಲ್ಲಿಯೂ ದುಃಖ, ಅಜ್ಞಾನ ಇವೇ ಮೊದಲಾದ ದೋಷಗಳಿಂದ ರಹಿತವಾಗಿದ್ದು 'ಅವಿರತಂ ಸುಖಮ್' ಅಂದರೆ ಸಂತತವಾದ ಅಥವಾ ಅವಿಚ್ಛಿನ್ನವಾದ ("ಸಂತತಾವಿರತಾನಿಶಮ್" ಎಂದು ಅಮರಕೋಶ) ಸ್ವರೂಪಾನಂದ ರೂಪವಾದ ಸುಖವನ್ನು ಸರ್ವದಾ (ಪುನರಾವೃತ್ತಿರಹಿತವಾಗಿ ಎಂದರ್ಥ) ಅನುಭವಿಸುತ್ತಾರೆ. ಮೋದನವು ಆನಂದಾನುಭವ ರೂಪತ್ವವನ್ನು ಹೇಳಿದರೂ, ಇಲ್ಲಿ ಸುಖಂ ಎಂಬ ಶಬ್ದವನ್ನು ಪ್ರಯೋಗಿಸಿರುವುದರಿಂದ, ಮೋದನ ಶಬ್ದಕ್ಕೆ ಅನುಭವ ಎಂದಷ್ಟೇ ತಿಳಿಯತಕ್ಕದ್ದು.

ಈ ಪ್ರಕಾರವಾಗಿ ವಿರಕ್ತಿ, ಭಕ್ತಿ, ಉಪಾಸ್ತಿ ಜನಿತ ಭಗವತ್ ಸಾಕ್ಷಾತ್ಕಾರ ರೂಪವಾದ ಭಗವದನುಗ್ರಹದಿಂದ ಅಶೇಷ ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಮೋಕ್ಷವು ಸಿದ್ಧಿಸುವುದರಿಂದ, ಭಗವಂತನನ್ನು ಅಶೇಷಗುಣಪೂರ್ಣನೆಂದೂ, ನಿರ್ದೋಷನೆಂದೂ, ಜ್ಞೇಯನೆಂದೂ ಹಾಗೂ ಗಮ್ಯನೆಂದೂ ಜಿಜ್ಞಾಸೆ ಮಾಡತಕ್ಕದ್ದು ಅವಶ್ಯ ಕರ್ತವ್ಯ ಎಂಬುದು ಸಿದ್ಧವಾಗುವುದು.

**॥ ಇಲ್ಲಿಗೆ ಅಣುಭಾಷ್ಯದ ಅಧಿಕರಣತಾತ್ಪರ್ಯಚಂದ್ರಿಕಾದಲ್ಲಿನ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದವು ಮುಕ್ತಾಯವಾಯಿತು ॥**



## ಗ್ರಂಥದ ಉಪಸಂಹಾರ

ಗ್ರಂಥದ ಕೊನೆಯಲ್ಲಿ ಭಾಷ್ಯಕಾರರು ತಮ್ಮಿಂದ ರಚಿತವಾದ ಅಣುಭಾಷ್ಯಕ್ಕೆ ಪರಮ ಆಪ್ತಿಮೂಲತ್ವವನ್ನು ಸಮರ್ಥಿಸುವುದಕ್ಕಾಗಿ ಶ್ರುತಿ ಪ್ರಸಿದ್ಧವಾದ ತಮ್ಮ ಪರಮಾಪ್ತತ್ವವನ್ನು ತಿಳಿಸುತ್ತಾರೆ. ಹಾಗು ಶಿಷ್ಯರಲ್ಲಿ ಈ ಗ್ರಂಥದ ಬಗ್ಗೆ ಅತಿಶಯವಾದ ಆದರವನ್ನು ಹುಟ್ಟಿಸುವುದಕ್ಕಾಗಿ ಈ ಗ್ರಂಥವು ಗಾತ್ರದಲ್ಲಿ ಚಿಕ್ಕದಾಗಿದ್ದರೂ ಅರ್ಥದಲ್ಲಿ ಆಧಿಕ್ಯವನ್ನು ಹೊಂದಿದೆ ಎಂಬುದಾಗಿಯೂ ತಿಳಿಸುತ್ತಾರೆ. ಅಲ್ಲದೇ ತಮ್ಮಿಂದ ರಚಿತವಾದ ಈ ಗ್ರಂಥಕ್ಕೆ ಶ್ರೀಹರಿ ಪ್ರೀತಿಯನ್ನೇ ಫಲತ್ವೇನ ಪ್ರಾರ್ಥಿಸುತ್ತಾರೆ.

ಪೂರ್ಣಪ್ರಜ್ಞೇನ ಮುನಿನಾ ಸರ್ವಶಾಸ್ತ್ರಾರ್ಥ ಸಂಗ್ರಹಃ ।
ಕೃತೋಽಯಂ ಪ್ರೀಯತಾಂ ತೇನ ಪರಮಾತ್ಮಾ ರಮಾಪತಿಃ ॥

ದಶಪ್ರಮತಿ ಶಬ್ದಕ್ಕೆ ಪರ್ಯಾಯಾರ್ಥಕವಾದ ಪೂರ್ಣಪ್ರಜ್ಞ ಎಂಬ ಶಬ್ದ ಪ್ರಯೋಗದಿಂದ ತಾವು ಶ್ರುತಿಪ್ರಸಿದ್ಧರು ಎಂಬುದನ್ನು ಸೂಚಿಸುತ್ತಾರೆ.

''ತೃತೀಯಮಸ್ಯ ಋಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ । ನಿರ್ಯದೀಂ ಬುಧ್ನಾನ್ ಮಾಹಿಷಸ್ಯ ವರ್ಪಸಾ ಈಶಾನಾಸಃ

ಶ್ರವಸಾಕ್ರಂತ ಸೂರಯಃ ॥'' ಇತ್ಯಾದಿ ಬಳಿತ್ಥಾಸೂಕ್ತದಲ್ಲಿ 'ದಶಪ್ರಮತಿ' ಎಂಬ ಶಬ್ದದಿಂದ ಶ್ರೀಮದಾಚಾರ್ಯರು ಪ್ರಸಿದ್ಧರಾಗಿದ್ದಾರೆ. ಇದರ ವಿವರಣೆಯನ್ನೇ ಗ್ರಂಥಾಂತರದಲ್ಲಿ ''ಯಸ್ಯ ತ್ರೀಣ್ಯುದಿತಾನಿ ವೇದವಚನೇ'' ಇತ್ಯಾದಿಯಾಗಿ ಶ್ರೀಮದಾಚಾರ್ಯರೇ ತಿಳಿಸಿದ್ದಾರೆ (ಬ್ರಹ್ಮಸೂತ್ರಭಾಷ್ಯದ ಅಂತಿಮಶ್ಲೋಕವು ಇದೇ ಆಗಿದೆ).

''ಪೂರ್ಣಪ್ರಜ್ಞೇನ'' ಎಂಬ ಶಬ್ದದಿಂದ ವಿವಕ್ಷಿತಾರ್ಥತತ್ತ್ವ ಜ್ಞಾನವನ್ನು, ''ಮುನಿನಾ'' ಎಂಬುದರಿಂದ ಅವಿಪ್ರಲಂಭಕತ್ವವನ್ನೂ (ವಂಚನಾರಾಹಿತ್ಯವನ್ನೂ), ''ಸರ್ವಶಾಸ್ತ್ರಾರ್ಥ ಸಂಗ್ರಹಃ ಅಯಂ ಗ್ರಂಥಃ ಕೃತಃ'' ಎಂಬುದರಿಂದ ವಿವಕ್ಷಾಕರಣಪಾಟವಾದಿಗಳನ್ನು ಸೂಚಿಸಿದ್ದಾರೆ. 'ರಮಾಪತಿಃ' ಎಂಬುದರಿಂದ ರಮಾದೇವಿಯು ಸಕಲ ಮಾತು ಮನಸ್ಸುಗಳಿಗೆ ಮುಖ್ಯಾಭಿಮಾನಿಯಾದ್ದರಿಂದ ಅವಳೊಂದಿಗೆ ಜೊತೆಯಾಗಿಯೇ ಪರಮಾತ್ಮನನ್ನು ಪ್ರೀತಿಯಿಂದ ಪ್ರಾರ್ಥನೆ ಮಾಡುವುದು ಅತ್ಯಂತ ಯುಕ್ತವು ಎಂದು ತಿಳಿಸಿಕೊಡುತ್ತಾರೆ. ಪರಮಾತ್ಮನಿಗೆ ಪರಮ ಆಪ್ತತಮರಾದ ವಾಯುದೇವರ ಅವತಾರರಾದ ಶ್ರೀಮನ್ಮಧ್ವಾಚಾರ್ಯರಿಂದ ವಿರಚಿತವಾದುದರಿಂದ ಈ ಗ್ರಂಥವು ಎಲ್ಲ ಸಜ್ಜನರಿಂದಲೂ ಪರಮಾದರದಿಂದ ಅಂಗೀಕಾರ್ಯವು ಎಂದು ನಿರ್ಣೀತವಾಗುತ್ತದೆ.

ತಮ್ಮ ಸ್ವರೂಪವನ್ನು ಪ್ರತಿಪಾದಿಸುವ ಶ್ಲೋಕದೊಂದಿಗೆ ಗ್ರಂಥದ ಪರಿಸಮಾಪ್ತಿ ಉಚಿತವಲ್ಲ ಎಂಬ ಅಭಿಪ್ರಾಯದಿಂದ ಹಾಗೂ ಗ್ರಂಥದ ಅಂತ್ಯದಲ್ಲಿಯೂ ಕೂಡ ಮಂಗಲಾಚರಣೆಯು ಅತ್ಯವಶ್ಯಕವಾದುದರಿಂದ, ಈ ಗ್ರಂಥಪ್ರತಿಪಾದ್ಯ ಗುಣವಿಶಿಷ್ಟತೆಯನ್ನು ಹೊಂದಿರುವ ಭಗವಂತನ ಸ್ತುತಿರೂಪವಾದ ಮಂಗಲವನ್ನು ಆಚರಿಸುವ ಮೂಲಕ ಗ್ರಂಥವನ್ನು ಮುಕ್ತಾಯಗೊಳಿಸುತ್ತಾರೆ.

ನಮೋ ನಮೋಽಶೇಷದೋಷದೂರಪೂರ್ಣಗುಣಾತ್ಮನೇ ।
ವಿರಿಂಚಶರ್ವಪೂರ್ವೇಡ್ಯವಂದ್ಯಾಯ ಶ್ರೀವರಾಯ ತೇ ॥

ಪರಮಾತ್ಮನಲ್ಲಿ ಪರಮಾದರವನ್ನು ಸೂಚಿಸುವುದಕ್ಕಾಗಿ 'ನಮಃ' ಶಬ್ದವನ್ನು ಎರಡು ಸಲ ಪ್ರಯೋಗಿಸಿದ್ದಾರೆ. "ಶ್ರೀವರಾಯ ತೇ ನಮೋ ನಮಃ". "ಶ್ರಿಯಃ" ಅಂದರೆ ಸರ್ವಾಭೀಷ್ಟಪ್ರದಳಾದ ಲಕ್ಷ್ಮೀದೇವಿಗೂ "ವರಾಯ" ಉತ್ತಮನಾದ, "ತೇ" ಸರ್ವದಾ ಅಪರೋಕ್ಷೀಕೃತ ಭಗವತ್‌ತತ್ವನಾದ ಶ್ರೀನಾರಾಯಣನೇ ನಿನಗೆ, "ನಮೋ ನಮಃ" ಮತ್ತೆ ಮತ್ತೆ ನಮಸ್ಕಾರ. ಅಂದರೆ ಅನಂತ ನಮಸ್ಕಾರಗಳು ಎಂದರ್ಥ.

ಈ ಗ್ರಂಥದಲ್ಲಿ ನಾಲ್ಕು ಅಧ್ಯಾಯಗಳ ಮೂಲಕ ಪ್ರತಿಪಾದಿತವಾಗಿರುವ ಕ್ರಮದಲ್ಲಿಯೇ ಭಗವಂತನ ವೈಶಿಷ್ಟ್ಯವನ್ನು ಸ್ಮರಿಸುತ್ತ ಶ್ರೀವರನಿಗೆ ನಮಸ್ಕರಿಸುತ್ತಾರೆ.

"ಅಶೇಷದೋಷದೂರಪೂರ್ಣಗುಣಾತ್ಮನೇ" ಎಂಬುದು ಪ್ರಥಮ ಹಾಗೂ ದ್ವಿತೀಯಾಧ್ಯಾಯಗಳ ಸಾರ. "ಪೂರ್ಣಾಃ ಗುಣಾಃ ಏವಾ ಆತ್ಮಾ ಸ್ವರೂಪಂ ಯಸ್ಯ ಸಃ ತಥಾ ತಸ್ಮೈ" ಇತಿ ಪೂರ್ಣಗುಣಾತ್ಮನೇ। ಅಂದರೆ ನಿರವಧಿಕವಾದ ಗುಣಗಳೇ ಯಾವನ ಸ್ವರೂಪವೋ ಅವನೇ ಪೂರ್ಣಗುಣಾತ್ಮನು. "ಅಶೇಷದೋಷೈಃ ದೂರಾಃ ತದಸಮಾನಾಧಿಕರಣಾ ಇತಿ ಯಾವತ್ ।" ಅಂದರೆ ಅಶೇಷ ದೋಷಗಳಿಂದ ದೂರನು, ಅರ್ಥಾತ್ ಅವನಿಗೆ ಸಮಾನರಾದವರು ಯಾರೂ ಇಲ್ಲ ಎಂದರ್ಥ. ಲಕ್ಷ್ಮೀದೇವಿಗೆ ಅಸ್ವಾತಂತ್ರ್ಯ ಎಂಬ ದೋಷ, ಬ್ರಹ್ಮ-ವಾಯುಗಳಿಗೆ ಶರೀರನಾಶವೆಂಬ ದೋಷ-ಹೀಗೆ ಪರಮಾತ್ಮನನ್ನು ಹೊರತು ಪಡಿಸಿ ಇತರರೆಲ್ಲರೂ ದೋಷಯುಕ್ತರು. ನಿರ್ದೋಷನೆಂದರೆ ಪರಮಾತ್ಮನೊಬ್ಬನೇ. ಅಂತಹ ಗುಣಪರಿಪೂರ್ಣನೂ ಅಶೇಷದೋಷರಹಿತನೂ ಆದ ಶ್ರೀದೇವಿಗೂ ವರನಾದ ಶ್ರೀಮನ್ನಾರಾಯಣನೇ ನಿನಗೆ ಅನಂತ ನಮಸ್ಕಾರಗಳು.

"ವಿರಿಂಚಶರ್ವಪೂರ್ವೇಡ್ಯವಂದ್ಯಾಯ ಶ್ರೀವರಾಯ" ಎಂಬುದು ತೃತೀಯ ಹಾಗೂ ಚತುರ್ಥಾಧ್ಯಾಯಗಳ ಸಾರ. "ವಿರಿಂಚಶರ್ವಪೂರ್ವೈಃ ಈಡ್ಯಃ ಸ್ತುತ್ಯಃ". ಅಂದರೆ ಬ್ರಹ್ಮರುದ್ರ ಮೊದಲಾದವರಿಂದ ಸ್ತುತಿಸಲ್ಪಡುವ ಎಂದರ್ಥ. ಅಥವಾ "ವಿರಿಂಚಶರ್ವಪೂರ್ವೇಡ್ಯೈಃ" ಸ್ತುತ್ಯರ್ಹರಾದ ಬ್ರಹ್ಮರುದ್ರಾದಿಗಳಿಂದ,

''ವಂದ್ಯಾಯ'' ಅಂದರೆ ''ಜ್ಞೇಯಾಯ ಗಮ್ಯಾಯ ಚ'' ಎಂದರ್ಥ. ಬ್ರಹ್ಮರುದ್ರಾದಿಗಳಿಂದಲೂ ಸ್ತುತ್ಯನಾದ, ಜ್ಞೇಯನಾದ, ಗಮ್ಯನಾದ ಎಂದರ್ಥ. ಬ್ರಹ್ಮರುದ್ರಾದಿ ಸಕಲ ಸಜ್ಜೀವರಿಗೂ 'ಶ್ರೀವರಾಯ' ಮೋಕ್ಷಪ್ರದನಾದ, ಅಶೇಷದೋಷದೂರನಾದ, ಅನಂತಕಲ್ಯಾಣ ಗುಣಗಳಿಂದ ಪರಿಪೂರ್ಣನಾದ ಲಕ್ಷ್ಮೀಪತಿಯಾದ ಸರ್ವಶ್ರೇಷ್ಠನಾದ ಶ್ರೀಮನ್ನಾರಾಯಣನೇ ನಿನಗೆ ಅನಂತ ನಮಸ್ಕಾರಗಳು ಎಂಬುದು ಈ ಮಂಗಲ ಶ್ಲೋಕದ ಒಟ್ಟು ಅಭಿಪ್ರಾಯ.

ಈ ಪ್ರಕಾರವಾಗಿ ನಾಲ್ಕೂ ಅಧ್ಯಾಯಗಳ ಸಾರಸಂಗ್ರಹ ರೂಪವಾದ ಈ ಮಂಗಲ ಶ್ಲೋಕದೊಂದಿಗೆ ಶ್ರೀಮದಾಚಾರ್ಯರು ಸರ್ವಶಾಸ್ತ್ರಾರ್ಥ ಸಂಗ್ರಹ ರೂಪವಾದ ಅಣುಭಾಷ್ಯ ಎಂಬ ಗ್ರಂಥವನ್ನು ಸಮಾಪ್ತಿಗೊಳಿಸಿರುತ್ತಾರೆ.

**॥ ಇಲ್ಲಿಗೆ ಅಂಗಾರಕುಲೋತ್ಪನ್ನ ಶ್ರೀನಿವಾಸಮೂರ್ತಿಗಳ ಸುಪುತ್ರ ಶ್ರೀ ವೆಂಕಟೇಶಮೂರ್ತಿಯು ಸಂಗ್ರಹಿಸಿ ರಚಿಸಿರುವ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ ಅಣುಭಾಷ್ಯದಲ್ಲಿನ ಎಲ್ಲ ಅಧಿಕರಣಗಳ ತಾತ್ಪರ್ಯ ಸಂಗ್ರಹ ರೂಪವಾದ ಕನ್ನಡ ಅನುವಾದವು ಮುಕ್ತಾಯವಾದುದು ॥**

**॥ ಶ್ರೀ ಮಧ್ವೇಶಾರ್ಪಣಮಸ್ತು ॥**



# ಪ್ರಸ್ತುತ ಲಭ್ಯವಿರುವ ನಮ್ಮ ಪ್ರಕಟಣೆಗಳು

| | | |
|---|---|---|
| 1. | ಪ್ರಮೇಯ ನವಮಾಲಿಕಾ (ದ್ವಿತೀಯ ಆವೃತ್ತಿ) | ರೂ. 12/– |
| 2. | ಬ್ರಹ್ಮಸೂತ್ರ ದೀಪಿಕಾ (ಸೂತ್ರಾರ್ಥ ಸಂಗ್ರಹ) | ರೂ. 50/– |
| 3. | ಶ್ರೀರಾಘವೇಂದ್ರ ಸ್ತೋತ್ರಮಾಲಾ | ರೂ. 20/– |
| 4. | ಶ್ರೀ ಬ್ರಹ್ಮ ಸೂತ್ರ ನಾಮಾವಲಿಃ | ರೂ. 10/– |
| 5. | ಅಭಿಷೇಕ ಸೂಕ್ತಗಳು (ದ್ವಿತೀಯ ಆವೃತ್ತಿ) | ರೂ. 10/– |
| 6. | ಸದಾಚಾರ ಸ್ಮೃತಿಃ (ವಿಶೇಷ ವಿವರಣೆ ಸಹಿತ ಅನುವಾದ) | ರೂ. 15/– |
| 7. | ಸಮಗ್ರ ವೈಷ್ಣವದೇವಪೂಜಾ ಪದ್ಧತಿ (ದ್ವಿತೀಯ ಆವೃತ್ತಿ) | ರೂ. 25/– |
| 8. | ಕೃಷ್ಣಾಮೃತಮಹಾರ್ಣವಃ (ಮೂಲ ಮತ್ತು ಅನುವಾದ) | ರೂ. 20/– |
| 9. | ದ್ವಾದಶಸ್ತೋತ್ರಮ್ (ಮೂಲ ಮತ್ತು ಅನುವಾದ) | ರೂ. 20/– |
| 10. | ಶ್ರೀಮದನುವ್ಯಾಖ್ಯಾನಮ್ (ಶ್ರೀಮನ್ನ್ಯಾಯಸುಧಾನುಸಾರಿ ಅನುವಾದ ವಿವರಣೆ ಸಹಿತ) | |
| | ಸಂಪುಟ 1 (ಪ್ರಥಮಾಧ್ಯಾಯ) | ರೂ. 60/– |
| | ಸಂಪುಟ 2 (ದ್ವಿತೀಯಾಧ್ಯಾಯ) | ರೂ. 75/– |
| | ಸಂಪುಟ 3 (ತೃತೀಯಾಧ್ಯಾಯ) | ರೂ. 90/– |
| | ಸಂಪುಟ 4 (ಚತುರ್ಥಾಧ್ಯಾಯ) | ರೂ. 30/– |
| 11. | ಶ್ರೀಮಧ್ವಾಚಾರ್ಯ ವಿರಚಿತ ಪ್ರಕರಣ ಗ್ರಂಥಗಳು (ದಶಪ್ರಕರಣಗಳ ಕನ್ನಡ ಸಾರ ಸಂಗ್ರಹ) | ರೂ. 45/– |
| 12. | ಶ್ರೀ ಲಕ್ಷ್ಮೀ ನರಸಿಂಹ ಸ್ತೋತ್ರಮಂಜರಿ | ರೂ. 10/– |
| 13. | ಓಂಕಾರದ ಸ್ವರೂಪ ಮತ್ತು ಮಹಿಮೆ | ರೂ. 10/– |
| 14. | ಸಂಕ್ಷಿಪ್ತ ಪೂಜಾ ಪದ್ಧತಿ (ಅಂಗೈ ಗಾತ್ರದಲ್ಲಿ) | ರೂ. 06/– |

---




**ಪವನಜ ಪ್ರಕಾಶನ**

ನಂ. 1625, 5ನೇ 'ಬಿ' ಕ್ರಾಸ್, ಎರಡನೆಯ ಬ್ಲಾಕ್

ಬನಶಂಕರಿ 1ನೇ ಸ್ಟೇಜ್, ಬೆಂಗಳೂರು–50.

✆ : **30902184**